# ಹೊಸತು

ನೆನ್ನೆಯದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಸುವರ್ಣ, ಬಿ. ವಿಲ್ಸನ್,
ಜಿ. ಎಂ. ಬೊಮ್ಮಳ್ಳಿ, ರಾಂಚಂದ್ರ ಕೊಪ್ಪಲು, ಎನ್. ಆರ್. ಹೆಗಡೆ, ಬೊಮ್ಮಳ್ಳಿ

ಮುಖಚಿತ್ರ : ಬೇಬಿ ಪೂರ್ವಿ – ವರ್ಣಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ದಕ್ಷಿಣ ಕನ್ನಡದಲ್ಲಿ ಕೆಲವು ವರ್ಷಗಳ ಹಿಂದೆ ಆರಂಭವಾದ ಒಂದು ಕೆಟ್ಟ ಸಂಪ್ರದಾಯವು ಪದೇಪದೇ ಆಚರಣೆಗೆ ಬರುತ್ತಿರುವುದು ನಮ್ಮ ದೇಶವು ಮುಂದಿನ ದಿನಗಳಲ್ಲಿ ಎಷ್ಟು ಹೀನಾಯ ಮೌಢ್ಯದ ಶ್ರದ್ಧೆಯನ್ನು ಬೆಳೆಸಿಕೊಳ್ಳಬಹುದೆಂಬುದರ ಸೂಚನೆಯಾಗಿದೆ. ಭಾರತೀಯ ಸಂಸ್ಕೃತಿಯ ಬಗ್ಗೆ ಉದ್ದುದ್ದ ಮಾತನಾಡುವ ''ದೇಶಭಕ್ತ ಸ್ವಯಂಸೇವಕರು'' ಇದನ್ನು ಕುರಿತು ಆಳವಾಗಿ ಯೋಚಿಸಬೇಕು. ದಂಡ ಹಿಡಿಯುವುದು ವ್ಯಾಯಾಮಕ್ಕಾದರೆ ಅಡ್ಡಿಯಿಲ್ಲ; ಕೆಟ್ಟ ಸಂಪ್ರದಾಯಗಳ ಹೇರಿಕೆಗೆ ಅದನ್ನು ಬಳಸುವುದು ಕ್ಷೇಮವಲ್ಲ. ನಮ್ಮ ದೇಶದ ಪ್ರಜೆಗಳು ತಮ್ಮತಮ್ಮಲ್ಲೇ ಸಂಭಾಷಣೆ ಮಾಡಕೂಡದೆಂದು ಆಗ್ರಹಿಸಿ ಹಿಂಸಿಸುವುದು ಅನೈತಿಕವಾದ್ದು, ಅದು ಕುಸಂಸ್ಕೃತಿ. ದೊಣ್ಣೆ ಹಿಡಿದವರೆಲ್ಲಾ ದೊಣೆನಾಯಕರು, ಎಲ್ಲದಕ್ಕೂ ಅವರ ಅನುಮತಿ ಬೇಕೆಂಬ ವಾತಾವರಣವನ್ನು ಈ ''ಸಂಸ್ಕೃತಿ'' ಚೋರರು ನಿರ್ಮಿಸಿದರೆ ಬೇರೆಯವರು ದೊಣ್ಣೆ ಹಿಡಿಯುವ ಹಾದಿ ಹಿಡಿಯುತ್ತಾರೆ. ನಮಗೆ ಅಂತರ್ಯುದ್ಧ ಬೇಕೋ, ಸೌಹಾರ್ದಯುತ ಜೀವನ ಬೇಕೋ ? ಒಬ್ಬ ಹಿಂದು ಯುವಕ ಮುಸಲ್ಮಾನ ಯುವತಿಯನ್ನು ಮಾತನಾಡಿಸಿದರೆ ಪರವಾಗಿಲ್ಲ, ಆದರೆ ಒಬ್ಬ ಮುಸಲ್ಮಾನ ಯುವಕ ಹಿಂದು ಯುವತಿಯನ್ನು ಮಾತನಾಡಿಸಕೂಡದೆಂಬ ಅಲಿಖಿತ ಅನಿಷ್ಟ ಕಾನೂನನ್ನು ಸ್ವಯಂಘೋಷಿತ ಸಂಸ್ಕೃತಿ ರಕ್ಷಕರು ದಕ್ಷಿಣ ಕನ್ನಡದಲ್ಲಿ ಜಾರಿಗೊಳಿಸುತ್ತಿದ್ದಾರೆಂಬುದು ಗೃಹಮಂತ್ರಿಗಳಿಗೆ ತಿಳಿದಿದೆ, ಆದರೆ ಅವರು ಅದರತ್ತ ಕಣ್ಣು ಹಾಯಿಸುವುದಿಲ್ಲ. ಅವರು ಕೆಲವು ಗೃಹಗಳನ್ನು ಮಾತ್ರ ಕಾಯುವ ಮಂತ್ರಿ ತಾವೆಂದು ಭಾವಿಸಿದಂತಿದೆ.

ಈ ಪ್ರಕ್ರಿಯೆ ಹೀಗೆಯೇ ಮುಂದುವರಿದರೆ ಇಂದಿನ ಪಾಕಿಸ್ತಾನದಲ್ಲಿನ ಪರಿಸ್ಥಿತಿ ನಮ್ಮಲ್ಲಿ ಉದ್ಭವಿಸೀತು, ಜೋಕೆ ಗೃಹಮಂತ್ರಿಗಳೇ ಎಂದು ನಮ್ರವಾಗಿ ಅವರಿಗೆ ನಿವೇದಿಸಿಕೊಳ್ಳುವ ಅಗತ್ಯವಿದೆ. ಅಲ್ಲಿಯ ಅಮಾನವೀಯ ಸನ್ನಿವೇಶಕ್ಕೆ ಒಬ್ಬ ರಾಜ್ಯಪಾಲನ ಹತ್ಯೆ ನಡೆದಿದೆ. ಆತನ ಮೇಲಿನ ರೋಷನ್ನು ಉಕ್ಕಿಸಿದವರು ನಮ್ಮ ''ಸಂಸ್ಕೃತಿ ಮೇಲ್ವಿಚಾರಕ''ರ ತದ್ರೂಪಿಗಳು. ಘಟನೆ ಇಷ್ಟೆ: ಆಸಿಯಾ ಬೀಬಿ ಎಂಬೊಬ್ಬಾಕೆಗೆ ಮರಣದಂಡನೆ ವಿಧಿಸ ಬೇಕೆಂಬ ಮತೀಯ ಉದ್ರೇಕದ ಒತ್ತಾಯವನ್ನು ಒಂದು ದುರಂಹಕಾರಿ ಮೂಢರ ತಂಡ ತಂದಿದೆ. ರಾಜ್ಯಪಾಲ ಆ ತಂಡವನ್ನು ಧಿಕ್ಕರಿಸಿ, ಆಕೆಯನ್ನು ಸಾಯಿಸಬೇಕೆಂಬ ''ಆಜ್ಞೆ''ಯನ್ನು ವಿರೋಧಿಸಿದರು. ಆಕೆಗೆ ಶಿಕ್ಷೆ ವಿಧಿಸಬೇಕೆಂಬುವವರು ೧೯ನೆಯ ಶತಮಾನದಲ್ಲಿ ಬ್ರಿಟಿಷ್ ವಸಾಹತುಶಾಹಿ ಆಡಳಿತ ಜಾರಿಗೊಳಿಸಿದ್ದ ಒಂದು ದರಿದ್ರ ಕಾನೂನನ್ನು ಮುಂದುಮಾಡಿದ್ದಾರೆ. ''ದೇವದೂಷಣೆ'' ಅಥವಾ ಪವಿತ್ರ ವಸ್ತುವನ್ನು ಹೀನಯಿಸಿ ಮಾತನಾಡುವುದು ಶಿಕ್ಷಾರ್ಹವೆಂಬುದು ಆ ಕಾನೂನು. ಸತ್ತುಹೋಗಿದ್ದ ಆ ಕಾನೂನಿಗೆ ಝಿಯಾ ಉಲ್ ಹಕ್ ಮರುಜೀವ ತುಂಬಿದ್ದ. ಈಗ ಮತ್ತೆ ಅದು ಉಸಿರಾಡಕೂಡದೆಂದು ರಾಜ್ಯಪಾಲ ತಸೀರ್ ಬಹಿರಂಗವಾಗಿ ಘೋಷಿಸಿದ್ದಕ್ಕೆ ಅವನನ್ನು ಪಾತಕಿಗಳು ಗುಂಡಿಟ್ಟು ಕೊಂದಿದ್ದಾರೆ. ನಮ್ಮಲ್ಲಿ ಅಂತಹ ವಾತಾವರಣ ಮೂಡಿಸುವ ಯತ್ನ ನಡೆಯುತ್ತಿದೆ. ಹೋಗಲಿ, ಆ ಪಾಕಿಸ್ತಾನಿ ಹೆಂಗಸಿನ ''ಅಪರಾಧ''ವೇನು ? ಹೊಲದ ಬಳಿ ಅವಳು ಏನೋ ಕೆಲಸ ಮಾಡುತ್ತಿದ್ದಾಗ ಆ ''ದೂಷಣೆ''ಯ ವಾಕ್ಯ ಆಡಿದಳಂತೆ. ಏನು ದೂಷಣೆ ? ಅವಳು ಅಂದಿದ್ದಕ್ಕೆ ಸಾಕ್ಷಿ ಇದೆಯೆ ? ಇದೆ, ಆದರೆ ಅವಳು ಏನಂದಳೆಂದು ಹೇಳಿದರೆ ಆ ವಾಕ್ಯ ಹೇಳಿದವರು ಮತ್ತೆ ಆ ದೂಷಣೆ ಮಾಡಿದಂತಾಗಿಬಿಡುತ್ತದೆ, ಆದ್ದರಿಂದ ಅದನ್ನು ಹೇಳುವುದಿಲ್ಲವಂತೆ; ಆದರೂ ಶಿಕ್ಷೆ ವಿಧಿಸಬೇಕಂತೆ! ಹೀಗೆ ಯಾರ ಮೇಲೆ ಬೇಕಾದರೂ ಆರೋಪ ಹೊರಿಸಿ ಅವರನ್ನು ಸಾಯಿಸಬಹುದು. ಇದು ಮಾನವ ನಾಗರಿಕತೆಯಲ್ಲ, ಧರ್ಮರಕ್ಷಣೆ ಅಲ್ಲ, ಸಂಸ್ಕೃತಿಯಂತೂ ಖಂಡಿತ ಅಲ್ಲ. ಅಂತಹ ವಿಷಬೀಜ ಬಿತ್ತುವವರನ್ನು ಗೃಹಮಂತ್ರಿಗಳು ನಿಯಂತ್ರಿಸುವ ಜವಾಬ್ದಾರಿ ಹೊಂದಿದ್ದಾರೆ.

* * *

**ಸಾ**ವು ಹಲವು ಬಗೆಯದು. ಸಹಜ ಸಾವು, ದುರಂತದಲ್ಲಿ ಸಾವು, ನೈಸರ್ಗಿಕ ವಿಕೋಪದಿಂದ ಸಾವು, ದೌರ್ಜನ್ಯದಿಂದ ಉಂಟಾಗುವ ಸಾವು, ಮೂರ್ಖ ಸಾವು, ಹೀಗೆ. ವಯಸ್ಸಾಗಿ ಸಾಯುವುದು, ಅಪಘಾತದಲ್ಲಿ ಸಾಯುವುದು, ಭೂಕಂಪದಲ್ಲಿ ಸಾಯುವುದು,

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ
# ಹೊಸತು
ವೈಜ್ಞಾನಿಕ ಬಾಳಿಗೆ ನವ್ಯಕ್ಕೆ
ನವಕರ್ನಾಟಕ ಪ್ರಕಾಶನ

ಸಂಪುಟ-೧೨ ಸಂಚಿಕೆ - ೭ ಫೆಬ್ರವರಿ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೯೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೯೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com




## ಶ್ರೀ ಕೃಷ್ಣ ವರದಿ

ಯಾರು ಜವಾಬ್ದಾರಿಯನ್ನು ಹೊರಬೇಕೋ ಅವರು ಅದನ್ನು ನಿರ್ವಹಿಸದಿರುವುದು ಮನಮೋಹನ ಸಿಂಗ್ ಸರ್ಕಾರದ ಪ್ರಶ್ನಾರ್ಹ ವೈಶಿಷ್ಟ್ಯವಾಗಿದೆ. ಉದಾಹರಣೆಗೆ, ಸ್ಪೆಕ್ಟ್ರಂ ಹಗರಣ : ಅದರಲ್ಲಿ ತಮ್ಮ ಪಾಲು ಇಲ್ಲವೇ ಇಲ್ಲವೇನೋ ಎಂಬಂತೆ ವರ್ತಿಸುವುದು ಪ್ರಧಾನಿಯ ಅವಲಕ್ಷಣ. ಬೆಲೆಯೇರಿಕೆಗೆ ತನ್ನ ಬಾಧ್ಯತೆ ಇಲ್ಲದಂತೆ ಕುಳಿತಿರುವುದು ಶಂಭುಲಿಂಗ ಶರದ್ ಪವಾರ್ ವರ್ತನೆ. ಆತನಿಗೆ ಕ್ರಿಕೆಟ್‌ನಲ್ಲಿ ಹಣ ತುಂಬಿಕೊಳ್ಳುವುದೊಂದೇ ಧಂಧೆ. ತಾವೇ ಹೇಳಿಕೊಂಡಿರುವಂತೆ ತಾವೇಕೆ ಇನ್ನೂ ಮಂತ್ರಿಯಾಗಿರುವುದೆಂಬುದನ್ನು ಅರಿಯದ ಪ್ರಣವ ಮುಖರ್ಜಿ ಅರ್ಥಸಚಿವರು, ದೇಶದ ನೀತಿಯನ್ನು ಮಾರ್ಪಡಿಸಲು ಯಾರೊಡನೆಯೂ ಚರ್ಚಿಸದೆ ಅಪಾಯಕಾರಿ ನಿಲುವೊಂದನ್ನು ಕ್ಯಾನ್‌ಕುನ್‌ನಲ್ಲಿ ಪ್ರಕಟಿಸಿದ್ದು ಜೈರಾಂ ರಮೇಶ್. ಒಟ್ಟಿನಲ್ಲಿ ಎಲ್ಲರೂ ''ಜೈ ರಾಂ'' ಎಂದು ಭಜನೆ ಮಾಡುವುದು, ದಕ್ಷಿಣೆ ತುಂಬಿಕೊಳ್ಳುವುದು, ಇದೇ ವ್ಯವಹಾರವಾಗಿಬಿಟ್ಟಿದೆ. ಇದರ ಒಂದು ಭಾಗವಾಗಿ ನ್ಯಾಯಮೂರ್ತಿ ಶ್ರೀ ಬಿ. ಎನ್. ಶ್ರೀಕೃಷ್ಣ ಅವರ ನೇತೃತ್ವದ ಆಯೋಗ ರಚನೆಗೊಂಡಿತು. ಕಾಲಮಿತಿಯನ್ನು ವಿಸ್ತರಿಸಿಕೊಳ್ಳುವ ಹವ್ಯಾಸದಲ್ಲಿ ತೊಡಗದೆ ಶ್ರೀಕೃಷ್ಣ ಆಯೋಗ ತೆಲಂಗಾಣ ಪ್ರಶ್ನೆಯನ್ನು ಕುರಿತಂತೆ ತನ್ನ ವರದಿಯನ್ನು ಸಲ್ಲಿಸಿದೆ. ಏಕಾದರೂ ಸಲ್ಲಿಸಿದರೋ ಎಂದು ತಲೆಯ ಮೇಲೆ ಕೈ ಹೊತ್ತು ಕನಿಕರದ ಮೂಟೆಯಂತೆ ನಿರ್ವೇದದಿಂದ ಸ್ಥಾಣುವಾಗಿರುವ ಪ್ರಧಾನಿ ನಮ್ಮ ದೇಶವನ್ನು ಹೇಗೆ ನಡೆಸುತ್ತಾರೆ, ಎತ್ತ ಕೊಂಡೊಯ್ಯುತ್ತಾರೆ ?

ತೆಲಂಗಾಣ ಪ್ರತ್ಯೇಕತೆಯ ಕೂಗು ಪ್ರಬಲವಾಗಿದ್ದಾಗಲೇ ತೆಲಂಗಾಣ ರಾಷ್ಟ್ರ ಸಮಿತಿಯೊಡನೆ ಸೇರಿ ಸಮ್ಮಿಶ್ರ ಸರಕಾರ ನಡೆಸಿದ ಪ್ರಧಾನಿ ಆಂಧ್ರಪ್ರದೇಶದ ಇಬ್ಭಾಗಕ್ಕೆ ಅಂದೇ ಒಪ್ಪಿಗೆ ನೀಡಿದಂತಾಗಿತ್ತು. ಹಾಗಿದ್ದಾಗ ಅದನ್ನು ಕಾರ್ಯಗತಗೊಳಿಸದಿದ್ದರೆ ಪ್ರತ್ಯೇಕವಾದಿಗಳು ಸುಮ್ಮನಿರುತ್ತಾರೆಯೇ ? ತಕ್ಷಣದಲ್ಲಿ ಕಂಡುಕೊಂಡ ಪರಿಹಾರವೇ ಶ್ರೀಕೃಷ್ಣ ಆಯೋಗ. ರಾಜಕೀಯವಾಗಿ ತೀರ್ಮಾನ ಕೈಗೊಳ್ಳಬೇಕಾದ ಸಂದರ್ಭದಲ್ಲಿ ಪ್ರಶ್ನೆಯನ್ನು ಮುಂದೂಡುವ ಸಂಚು ಪ್ರಧಾನಿಗಳದ್ದೇ ವಿನಾ ಕಡ್ಡಿ ಮುರಿದಿಟ್ಟಂತೆ ತೀರ್ಮಾನ ಕೈಗೊಳ್ಳಲು ಅವರಿಗೆ ಮಾನಸಿಕ ಸಿದ್ಧತೆ ಇಲ್ಲ. ಶ್ರೀಕೃಷ್ಣ ಆಯೋಗವು ರಾಜಕೀಯ ತೀರ್ಮಾನದ ಗೋಜಿಗೆ ಹೋಗಲಾರದು. ಹೊಸ ಅಂಕಿ-ಸಂಖ್ಯೆಗಳೂ ಯಾವುವೂ ಇಲ್ಲ. ಆಯೋಗ ಇನ್ನೇನು ತೀರ್ಪು ಕೊಟ್ಟೀತು! ಆದ್ದರಿಂದ ಒಂದು ಮಹಾಪ್ರಬಂಧವನ್ನು ಬರೆದು ತನ್ನ ಕರ್ತವ್ಯವನ್ನು ಮುಗಿಸಿಕೊಂಡಿದೆ. ಆರು ಸೂಚನೆಗಳನ್ನು ಕೊಟ್ಟಿರುವ ಆಯೋಗ ಅರವತ್ತು ಸೂಚನೆ ಬೇಕಾದರೂ ಕೊಡಬಹುದಿತ್ತು. ಅದರಿಂದ ಅಂತಹ ವ್ಯತ್ಯಾಸವೇನೂ ಆಗುತ್ತಿರಲಿಲ್ಲ. ಆಯೋಗವು ಆ ಆರು ಸೂಚನೆಗಳನ್ನು ಕೊಟ್ಟರದಿದ್ದರೂ ಬಾಧಕವೇನೂ ಇರುತ್ತಿರಲಿಲ್ಲ; ಏಕೆಂದರೆ, ಯಾವುದೇ ಸಾಮಾನ್ಯ ವೀಕ್ಷಕ ಅಂತಹ ಸೂಚನೆಗಳ ಒಂದು ದೊಡ್ಡ ಪಟ್ಟಿ ಕೊಡಲು ಸಾಧ್ಯವಿದೆ. ಆ ಆರರಲ್ಲಿ ಯಾವುದಾದರೂ ಈವರೆಗೆ ಗಾಳಿಯಲ್ಲಿ ತೂರಿಬಂದಿರದಿದ್ದ ಸಲಹೆ ಇದೆಯೆ ? ಹಾಗಿದ್ದರೆ ಆಯೋಗ ಏಕೆ ಬೇಕಿತ್ತು ? ಅದಕ್ಕೆ ಪ್ರಧಾನಿ ಉತ್ತರ : ಕತ್ತಿ ಬೀಸುವವರ ಕೈಗೆ ವರದಿ ಕೊಟ್ಟು ಅಧ್ಯಯನ ಮಾಡಿರೆಂದು ಹೇಳಿ ಇನ್ನು ಆರು ತಿಂಗಳು ತಳ್ಳಬಹುದಲ್ಲ, ಎಂಬುದು !

ತೆಲಂಗಾಣ ಪ್ರದೇಶವು ಆಂಧ್ರದ ಬೇರೆ ಭಾಗಗಳಿಗಿಂತಲೂ ಕಡಿಮೆ ಅಭಿವೃದ್ಧಿ ಹೊಂದಿದೆಯೆಂಬುದು ಅಸಮರ್ಥನೀಯವಾದ. ಕೃಷ್ಣೆ-ಗೋದಾವರಿ ಇರುವ ಭಾಗಗಳಲ್ಲಿ ಸಹಜವಾಗಿಯೆ ಕೃಷಿ ಉತ್ತಮ ಮಟ್ಟದ್ದಾಗಿರುತ್ತದೆ. ಭೌಗೋಳಿಕ ಅಂಶಗಳಲ್ಲಿ ವ್ಯತ್ಯಾಸವೇ ಇಲ್ಲವೆಂಬಂತೆ ಪ್ರತ್ಯೇಕತಾವಾದಿಗಳು ಮೊಂಡುಹಿಡಿದರೆ ಕೈಗಾರಿಕಾ ಯೋಜನೆಗಳನ್ನು ತೆಲಂಗಾಣಕ್ಕೆ ನೀಡಬಹುದು. ಆದರೆ ಅಹ್ಲುವಾಲಿಯ ಅಧ್ಯಕ್ಷತೆಯಲ್ಲಿ ಯೋಜನಾ ಆಯೋಗವು ಉತ್ಪಾದನೆಯ ಘಟಕಗಳಾಗಿ ಕಾರ್ಖಾನೆಗಳನ್ನು ಸ್ಥಾಪಿಸುವ ಯೋಚನೆಯನ್ನು ಕೈಬಿಟ್ಟು ಎಷ್ಟೋ ಕಾಲವಾಗಿದೆ. ಹೈದರಾಬಾದನ್ನು ಅಂತರರಾಷ್ಟ್ರೀಯ ಖ್ಯಾತಿಗೆ ತಂದರೆ ಸಾಕೆಂದು ಭಾವಿಸಿದ ಹಿಂದಿನ ಹಲವು ಮುಖ್ಯಮಂತ್ರಿಗಳು ತೆಲಂಗಾಣದ ಬೇರೆ ಜಿಲ್ಲೆಗಳನ್ನು ಕಣ್ಣೆತ್ತಿ ನೋಡಲಿಲ್ಲ. ಈಗ ಕೃಷ್ಣ ಆಯೋಗ ನೀಡಿರುವ ಆರು ಸೂಚನೆಗಳಲ್ಲಿ ಯಾವೊಂದನ್ನು ಸ್ವೀಕರಿಸಿದರೂ ಪ್ರತ್ಯೇಕತಾವಾದಕ್ಕೆ ಉತ್ತರ ಸಿಕ್ಕಂತೆ ಆಗುವುದಿಲ್ಲ. ಅಂದರೆ, ರಾಜಕೀಯ ತೀರ್ಮಾನ ಕೈಗೊಳ್ಳಲು ಕೇಂದ್ರ ಸರ್ಕಾರ ಸಶಕ್ತವಾಗುವವರೆಗೆ ಇಂದಿನ ಸಮಸ್ಯೆಗೆ ಪರಿಹಾರವಿಲ್ಲ. ತೆಲಂಗಾಣ ಪ್ರತ್ಯೇಕ ರಾಜ್ಯವಾದರೆ ನಮ್ಮ ದೇಶದಲ್ಲಿ ಬೇರೆ ಇಪ್ಪತ್ತು ರಾಜ್ಯಗಳು ಅಸ್ತಿತ್ವಕ್ಕೆ ಬರಲು ಸಮರ್ಥನೆ ದೊರಕುತ್ತದೆ. ಪ್ರಧಾನಿಯಂತೆ ರಾಜಕೀಯ ಪಕ್ಷಗಳು ಸಹ ಗಾಳಿ ಬೀಸಿದಂತೆ ತೂರಿಕೊಳ್ಳುವ ಪ್ರವೃತ್ತಿಯನ್ನು ಅನುಸರಿಸುತ್ತಿವೆ. ಭಾರತೀಯ ಜನತಾ ಪಕ್ಷ ಹಾಗೂ ಕಮ್ಯುನಿಸ್ಟ್ ಪಕ್ಷಗಳು ಆಯೋಗವನ್ನೇನೂ ರಚಿಸಲಿಲ್ಲ. ಆದರೆ ಬಿಗಿತನದ ಒಂದು ನಿಲುವನ್ನೂ ಪ್ರಕಟಿಸಿಲ್ಲ. ಎಲ್ಲರಿಗೂ ರೊಟ್ಟಿ ಹಂಚಿಕೊಳ್ಳುವುದರಲ್ಲಿ ಆಸಕ್ತಿ. ಆದ್ದರಿಂದ ಭಾಷಾವಾರು ಪ್ರಾಂತದ ಪರವಾದ ನಿಲುವು ಈಗ ಗೌಣವಾಗಿಹೋಗಿದೆ. ಝಾರ್ಖಂಡ್, ಛತ್ತೀಸಗಢ ಮತ್ತು ಉತ್ತರಾಂಚಲ ಪ್ರತ್ಯೇಕ ರಾಜ್ಯಗಳಾದಾಗ ತೆಲಂಗಾಣಕ್ಕೆ ಇನ್ನೂ ಹೆಚ್ಚಿನ ಬೆಂಬಲ ದೊರೆತಂತಾಯಿತು. ಶ್ರೀಕೃಷ್ಣ ಆಯೋಗ ಏನು ತಾನೆ ಮಾಡಲು ಶಕ್ಯ !

ದೇಶದಲ್ಲಿ ಮಾಹಿತಿ ತಂತ್ರಜ್ಞಾನವೊಂದು ಬೆಳೆದರೆ ಸಾಕೆಂದು ಭಾವಿಸುವ ಸರ್ಕಾರ ದೊಡ್ಡ ನಗರಗಳನ್ನುಳಿದು ಬೇರೆ ಏನನ್ನೂ ನೋಡುವುದಿಲ್ಲ. ನಮ್ಮ ಕೃಷಿ ಮತ್ತು ಉದ್ದಿಮೆ ಕುಸಿಯಲು ಅದೇ ಕಾರಣ. ಅಸಮತೋಲನ ಹೀಗೆ ವ್ಯಾಪಕವಾಗಿ ಹಬ್ಬಿದಾಗ ಸಮತೋಲನದ ಅಭಿವೃದ್ಧಿಗೆ ಆದ್ಯತೆ ನೀಡುವುದೊಂದೇ ನಿಜವಾದ ಪರಿಹಾರ. ಜನರ ಜೊತೆ ಸಂವಹನ ಸಹ ಸಾಧ್ಯವಾಗದಂತಹ ವಾತಾವರಣ ನಿರ್ಮಿಸಿ ಆಮೇಲೆ ಆಯೋಗ ರಚಿಸಿದರೆ ಸಮಸ್ಯೆ ಬಗೆಹರಿಯುವುದಿಲ್ಲ. ಕಾಶ್ಮೀರ, ಮಣಿಪುರ, ನಾಗಾಲ್ಯಾಂಡ್, ಎಲ್ಲೆಲ್ಲೂ ಇದೇ ಪರಿಸ್ಥಿತಿ. ತೆಲಂಗಾಣ ಒಂದು ಪ್ರತ್ಯೇಕ ರಾಜ್ಯವಾಗಿಬಿಟ್ಟರೆ ಅಲ್ಲಿಯ ಕೃಷಿ-ಉದ್ದಿಮೆ-ಶಿಕ್ಷಣ ಮುಂತಾದುವೆಲ್ಲಾ ಏಕಾಏಕಿ ವೃದ್ಧಿ ಹೊಂದುತ್ತವೆಯೆ ? ಎಲ್ಲಾದರೂ ಹಾಗಾಗಿರುವ ನಿದರ್ಶನಗಳುಂಟೆ ? ಸರ್ವತೋಮುಖ ಅಭಿವೃದ್ಧಿಯ

ಹಾದಿಯನ್ನು ತೊರೆದಾಗೆಲ್ಲಾ ಪ್ರತ್ಯೇಕತೆಯ ಕೂಗು ಇದ್ದೇ ತೀರುತ್ತದೆ. ಅದನ್ನು ಶ್ರೀಕೃಷ್ಣ ಪರಮಾತ್ಮನೂ ಅಡಗಿಸಲಾರ, ಇನ್ನು ಶ್ರೀಕೃಷ್ಣ ಆಯೋಗ ಏನು ಮಾಡೀತು ! ಅಗತ್ಯವಿರುವುದು ಸಮತೋಲನದ ಸರ್ವತೋಮುಖಿ ಅಭಿವೃದ್ಧಿ, ಜನರೊಡನೆ ನೇರ ಸಂವಾದ, ರಾಜಕೀಯ ಗಟ್ಟಿತನದ ನಿಲುವು, ಸಮಯಸಾಧಕ ಮೈತ್ರಿಯ ರಾಜಕೀಯಕ್ಕೆ ನುಗ್ಗದಿರುವುದು. ಅದನ್ನು ನಿಷ್ಠೆಯಿಂದ ಮಾಡಹೊರಡುವುದು ಪ್ರಧಾನಿ ಶ್ರೀಕೃಷ್ಣ ಆಯೋಗದ ವರದಿಗೆ ನೀಡಬೇಕಾದ ಪ್ರತಿಕ್ರಿಯೆ. ಆರು ಸೂಚನೆಗಳಲ್ಲಿ ಯಾವುದನ್ನು ಆಯ್ದುಕೊಳ್ಳಬೇಕೆಂದು ಯಾರೂ ತಲೆಕೆಡಿಸಿಕೊಳ್ಳುವ ಪ್ರಸಂಗವಿಲ್ಲ. ಆಯೋಗ ಬಂತು ಮತ್ತು ಹೋಯಿತು. ಆದರೆ ದೇಶದ ಐಕ್ಯತೆ ಮತ್ತು ಪ್ರಗತಿಯೊಡನೆ ಚದುರಂಗದಾಟ ಯೋಗ್ಯವಲ್ಲ.

## ಕೃಷ್ಣಾ ಕಣಿವೆಯ ನೀರಿನ ವಿವಾದದ ತೀರ್ಪು

ಕೃಷ್ಣಾ ಕಣಿವೆಯ ನೀರಿನ ವಿವಾದಕ್ಕೆ ಈಗಷ್ಟೆ ಬಂದಿರುವ ಟ್ರಿಬ್ಯೂನಲ್‌ನ ತೀರ್ಮಾನ ತೆರೆಯೆಳೆಯಬಹುದೆ ? ಕಳೆದ ನಾಲ್ಕು ದಶಕಗಳಿಂದ ಬಚಾವತ್ ಟ್ರಿಬ್ಯೂನಲ್‌ನ ಅವಾರ್ಡ್ ಜಾರಿಯಲ್ಲಿತ್ತು. ಸಂಬಂಧಪಟ್ಟ ಮೂರೂ ರಾಜ್ಯಗಳು ರಾಜಕೀಯವಾಗಿ ತಮ್ಮ ಅತೃಪ್ತಿಯನ್ನು ಚರ್ಚಿಸುತ್ತಲೇ, ಬಚಾವತ್ ತೀರ್ಮಾನಗಳಿಗೆ ಬದ್ಧವಾಗಿದ್ದವು ಎನ್ನುವುದು ಗಮನಾರ್ಹ. ಈಗಲೂ ಮುಂದಿನ ಐವತ್ತು ವರ್ಷಗಳು ರಾಜಕೀಯವಾಗಿ ಚರ್ಚಿಸುತ್ತಲೆ, ಆದರೂ ಇಂದಿನ ತೀರ್ಮಾನಗಳಿಗೆ ಬದ್ಧರಾಗಿರುವುದು ಸಾಧ್ಯ. ಈ ತೀರ್ಮಾನದಂತೆ ಮೂರೂ ರಾಜ್ಯಗಳೂ ನಡೆದುಕೊಳ್ಳುವುದನ್ನು ಗಮನಿಸುವ ಉಸ್ತುವಾರಿ ಪ್ರಾಧಿಕಾರದ ರಚನೆಯನ್ನು ಈ ಕೂಡಲೆ ಮಾಡಿಕೊಳ್ಳುವುದು ಉತ್ತಮ ಮಾರ್ಗ. ಇನ್ನು ಇದಕ್ಕೆ ಸಂಬಂಧಪಟ್ಟ ಅಂಕಿಅಂಶಗಳು ಎಲ್ಲರಿಗೂ ತಿಳಿದಿರುವುದೇ. ಹಿಂದಿನ ಟ್ರಿಬ್ಯೂನಲ್ ಕೊಟ್ಟ ತೀರ್ಮಾನಗಳನ್ನು ಈ ಟ್ರಿಬ್ಯೂನಲ್ ಮಾನ್ಯ ಮಾಡಿದೆ. ಏನಿದ್ದರೂ ಅವರು ಲೆಕ್ಕಹಾಕಿದ್ದಕ್ಕಿಂತ ಇನ್ನೂ ಹೆಚ್ಚು ನೀರು ಇದೆಯೇ ಎಂದು ಅವಲೋಕಿಸಿದ ಟ್ರಿಬ್ಯೂನಲ್, ಈ ಕುರಿತ ಲೆಕ್ಕವನ್ನು ವಿಶ್ವಾಸಾರ್ಹವಾಗಿ ಲಭ್ಯವಿರುವ ನೀರಿನ ಪ್ರಮಾಣವನ್ನು ಶೇಕಡ ೭೫ರ ಬದಲು ಶೇಕಡ ೬೫ರ ಮಾದರಿಯಲ್ಲಿ ಲೆಕ್ಕ ಮಾಡಿದಾಗ ಇನ್ನಷ್ಟು ಹಂಚಬಹುದಾದ ನೀರು ಕಂಡುಬರುತ್ತದೆ. (ಶೇಕಡಾವಾರು ಸಂಖ್ಯೆ ಕಡಿಮೆಯಾದರೂ ಲಭ್ಯವಾದ ನೀರಿನ ಪ್ರಮಾಣ ಹೆಚ್ಚು ಎಂದು ಕಾಣುವುದಕ್ಕೆ ಕಾರಣ, ಈ ಎರಡರ ಕಾಲಮಿತಿಯಲ್ಲಿರುವ ವ್ಯತ್ಯಾಸ. ಶೇಕಡ ೬೫ರ ಲೆಕ್ಕ ದೀರ್ಘಾವಧಿಯದು. ಶೇಕಡ ೭೫ರ ಲೆಕ್ಕ ಅದಕ್ಕಿಂತ ಕಡಿಮೆ ಅವಧಿಯದು.) ಇಲ್ಲಿ ಕಂಡುಬರುವ ನೀರಿನ ಪ್ರಮಾಣದ ಸಂಖ್ಯೆಗಳು ಪ್ರತಿ ವರ್ಷವೂ, ಪ್ರತಿಕ್ಷಣವೂ ಎಂದು ಅಲ್ಲ. ಸರಾಸರಿ. ಅಂದರೆ ದೀರ್ಘಾವಧಿ ಲೆಕ್ಕದಲ್ಲಿ ಅಲ್ಪಾವಧಿಗಿಂತ ಒಟ್ಟಾರೆ ಹೆಚ್ಚು ನೀರು ದೊರಕುವುದು ಎನ್ನುವ ಲೆಕ್ಕವನ್ನು ನಂಬಬಹುದು. ವಾಸ್ತವದಲ್ಲಿ ಆಂಧ್ರಪ್ರದೇಶ ಈ ಹೆಚ್ಚುವರಿ ನೀರು ಇರುವುದನ್ನು ಗಮನಿಸಿ ಅದರ ಸಂಗ್ರಹಕ್ಕೂ ಇನ್ನೂ ಕೆಲವು ಜಲಾಶಯಗಳನ್ನು ನಿರ್ಮಿಸಲು ಮುಂದಾಯಿತು. ಅದೇ ವೇಳೆ ಕರ್ನಾಟಕವೂ ತನ್ನ ಹಕ್ಕಿನ ಸಂಪೂರ್ಣ ಪ್ರಮಾಣವನ್ನು ಬಳಸಿಕೊಳ್ಳುವಷ್ಟು ಕಾಲುವೆ ಕಟ್ಟೆಗಳ ಕಾಮಗಾರಿಯನ್ನು ಕಳೆದ ದಶಕದಲ್ಲಿ ಮಾಡಿಕೊಂಡಿದೆ. ಮಳೆ ಚೆನ್ನಾಗಿದ್ದು ಕೆಲವು ವರ್ಷಗಳಲ್ಲಿ, ಮಹಾರಾಷ್ಟ್ರ ಮತ್ತು ಕರ್ನಾಟಕ ತಮ್ಮ ಪಾಲನ್ನು ಬಳಸಿಕೊಂಡಮೇಲೂ, ಹೆಚ್ಚು ನೀರು ಬಂದರೆ ಆಗ ಆಂಧ್ರ ಅದನ್ನು ಬಳಸಿಕೊಂಡರೆ ಅದು ಸ್ವಾಗತಾರ್ಹ. ಆದರೆ ಇಷ್ಟು ಪ್ರಮಾಣದ ನೀರನ್ನು ಅವರು ಪ್ರತಿವರ್ಷವೂ ಹಕ್ಕೆಂದು ಒತ್ತಾಯಿಸಲಾಗುವುದಿಲ್ಲ. ಆಲಮಟ್ಟಿಯ ಅಣೆಯ ಎತ್ತರದ ವಿಷಯ ಚರ್ಚೆಯ ವಿಷಯವೇ ಅಲ್ಲ. ಕರ್ನಾಟಕದ ಪಾಲಿನ ನೀರನ್ನು ಶೇಖರಿಸಿಕೊಳ್ಳಲು ಅದು ಬೇಕು ಎಂದು ಗುರುತಿಸಲಾಗಿದೆ.

ಇವೆಲ್ಲಕ್ಕಿಂತ ಮುಖ್ಯವಾದ ವಿಷಯವೆಂದರೆ ಬದಲಾಗುತ್ತಿರುವ ಹವಾಮಾನ ಪರಿಸ್ಥಿತಿಯಿಂದಾಗಿ, ನದಿಮೂಲಗಳೇ ಬತ್ತಿಹೋಗಿ, ನೀರು, ಕಡಿಮೆಯಾಗಿ, ಇಂದಿನ ಹಂಚಿಕೆಯ ಪಾಲುಗಾರಿಕೆಯ ಚರ್ಚೆ ಅರ್ಥ ಕಳೆದುಕೊಳ್ಳುವ ಸಾಧ್ಯತೆಯನ್ನು, ಐವತ್ತು ವರ್ಷಗಳಷ್ಟು ದೀರ್ಘ ಭವಿಷ್ಯದ ಅವಧಿಯಲ್ಲಿ ಹೀಗಾಗಬಹುದು ಎಂಬುದನ್ನು ತಳ್ಳಿ ಹಾಕುವಂತಿಲ್ಲ. ಅಂತರ್ಜಲ ಮೂಲ ಬತ್ತಿ, ನದಿ ಮತ್ತು ಕೆರೆಗಳ ಬಹುಪಾಲು ನೀರು ಎಲ್ಲೆಲ್ಲೂ ಕುಡಿಯುವುದಕ್ಕೇ ಸಾಲದಾಗಬಹುದು. ಬಹುರಾಷ್ಟ್ರೀಯ ಕಂಪನಿಗಳಿಗೆ ನಗರಗಳ ನೀರು ಸರಬರಾಜನ್ನು ಕೈಗಾರಿಕೆಯಂತೆ ವಹಿಸಿಕೊಡುತ್ತಿರುವ ನಮ್ಮ ಸರ್ಕಾರಗಳು, ಸದ್ಯದ ದುರ್ಲಾಭಕ್ಕೆ ಜೋತುಬಿದ್ದು, ಕುಡಿಯುವ ನೀರಿನ ಮೂಲಗಳ ನಿರ್ವಹಣೆಯನ್ನು ಅವಕ್ಕೆ ವಹಿಸಿ, ನಮ್ಮ ಭವಿಷ್ಯವನ್ನು ಹಾಳುಗೆಡವುತ್ತಿದ್ದಾರೆ. ಕೃಷ್ಣಾ ಕಣಿವೆಯ ಮಟ್ಟಿಗೆ ಮೂರೂ ರಾಜ್ಯಗಳೂ ಒಮ್ಮತದಿಂದ ಈ ನದಿಗಳ ಉಗಮ ಸ್ಥಳವಾದ ಪಶ್ಚಿಮಘಟ್ಟದ ಪರಿಸರವನ್ನು ಉಳಿಸಿ ಬೆಳೆಸುವ ಜವಾಬ್ದಾರಿಯನ್ನು ಪಕ್ಷಾತೀತವಾಗಿ, ವಾಣಿಜ್ಯಾತೀತವಾಗಿ ನಿರ್ವಹಿಸಲು ಮುಂದಾಗಬೇಕು. ಅಲ್ಲಿ ಗಣಿಗಾರಿಕೆ, ಕಾಡು ಕಡಿಯುವುದು, ಐಷಾರಾಮದ ಘಟಕಗಳನ್ನು ಸ್ಥಾಪಿಸುವುದು, ವನ್ಯಮೃಗಗಳ, ವನ್ಯವಾಸಿಗಳ ಬೇಟೆ ಮಾಡುವುದು, ಒಕ್ಕಲೆಬ್ಬಿಸುವುದು ಮುಂತಾದ ಎಲ್ಲವನ್ನೂ ಕೂಡಲೆ, ಒಂದೆ ಆದೇಶದಿಂದ, ಸಂಬಂಧಪಟ್ಟ ರಾಜ್ಯಗಳೆಲ್ಲಾ ನಿಲ್ಲಿಸುವುದು ವಿವೇಕದ ಮಾರ್ಗ. ಕೃಷ್ಣಾನದಿಯ ಆಯಕಟ್ಟಿನ ಪ್ರದೇಶ, ಮೂರು ರಾಜ್ಯಗಳಲ್ಲೂ ಹರಡಿದ್ದು, ಇವುಗಳು ಬೆಳೆಸುವ ಆಹಾರ ನಮ್ಮ ದೇಶದ ಜೀವನಾಡಿ. ಇದರಲ್ಲಿ ಯಾವ ರಾಜಕೀಯವೂ ಕೂಡದು. ಇದು ರಾಜ್ಯ-ರಾಜ್ಯಗಳ ನಡುವಿನ ಅಹಮಿಕೆಯ ಪ್ರಶ್ನೆಯಲ್ಲ. ಇದೊಂದು ಸಮಗ್ರವಾದ ರಾಷ್ಟ್ರೀಯ ಅಗತ್ಯ. ಕಾವೇರಿಯ ಹಾಗೆ ಮಿಕ್ಕ ನದಿಗಳ ಆಯಕಟ್ಟಿಗೂ ಇದೇ ದೃಷ್ಟಿ ಅನ್ವಯವಾಗುತ್ತದೆ. ನದಿಗಳ ಹರಿವಿಗೆ ರಾಜ್ಯಗಳ ಎಲ್ಲೆಯ ಸಂಕೋಲೆಯಿಲ್ಲ. ರಾಜ್ಯಗಳ ಇಂದಿನ ಎಲ್ಲೆ ನಾಳೆ ಬದಲಾಗಬಹುದು. ಆದರೆ ಈ ನದಿ ಪಾತ್ರದಲ್ಲಿ ವಾಸಿಸುವ ಜನ ಅಲ್ಲೇ ಇರುತ್ತಾರೆ. ಮೂರೂ ರಾಜ್ಯಗಳ ನಾಗರಿಕರು ಒಗ್ಗಟ್ಟಿನಿಂದ ತಮ್ಮ ಸರ್ಕಾರಗಳು ಈ ಜವಾಬ್ದಾರಿಯನ್ನು ನಿರ್ವಹಿಸುವಂತೆ ಒತ್ತಾಯ ತರುವ ವ್ಯಾಪಕ ಚಳವಳಿಯನ್ನು ಈಗಲೆ ನಡೆಸಲು ಸನ್ನದ್ಧರಾಗಬೇಕು. ದಿಲ್ಲಿಗೆ ಹೋಗಿ ಈ ಟ್ರಿಬ್ಯೂನಲ್ ತೀರ್ಮಾನದ ವಿರುದ್ಧ ಒಂದು ದಿನದ ಉಪವಾಸದ ನಾಟಕವಾಡುವ ಮತ್ತು ಅಂಥದೆ ರಾಜಕೀಯವನ್ನು ತಿರಸ್ಕರಿಸಬೇಕು.


ತಿಂಗಳ ಪತ್ರಿಕೆ

ಹೊಸತು

ನೆನ್ನೆಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ







*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಬರ್ಬರ ಹತ್ಯೆಗೀಡಾಗಿ ಸಾಯುವುದು, ಇವುಗಳಲ್ಲಿ ವ್ಯಕ್ತಿಯ ನೇರವಾದ ಪಾಲು ಕಡಿಮೆ. ಕೆಲವೊಮ್ಮೆ ಅದು ಆಕಸ್ಮಿಕ. ಸ್ವಯಂ ಇಚ್ಛೆಯಿಂದ ಆಯ್ಕೆ ಮಾಡಿಕೊಂಡು ಸಾಯುವುದು ಆತ್ಮಹತ್ಯೆಯಲ್ಲ. ಈಚೆಗೆ ಶಬರಿಮಲೈನಲ್ಲಿ ಕಾಲ್ತುಳಿತಕ್ಕೆ ಸಿಲುಕಿ ನೂರಾರು ಜನ ಸತ್ತಿದ್ದು ಮೂರ್ಖ ಸಾವು. ಸತ್ತವರ, ಸಾಯದೆ ಬದುಕುಳಿದವರ, ಮೌಢ್ಯದ ಪೋಷಕರ ಮತ್ತು ಆಡಳಿತ ಯಂತ್ರ, ಇವೆಲ್ಲವುಗಳ ಮೂರ್ಖತನ ಏಕೀಭವಿಸಿ ಅಷ್ಟೊಂದು ಜನ ಸತ್ತು ನಮ್ಮ ವ್ಯಥೆಯನ್ನು ಸಾಂದ್ರಗೊಳಿಸಿದ್ದಾರೆ. ಮೂರು-ನಾಲ್ಕು ಲಕ್ಷ ಜನ ಅಂತಹ ಕಡಿಮೆ ಪ್ರಮಾಣದ ಅರಣ್ಯಪ್ರದೇಶದಲ್ಲಿ ಒಮ್ಮೆಲೇ ಸೇರಲು ಅವಕಾಶ ಕಲ್ಪಿಸುವುದು ಅಪಘಾತಕ್ಕೆ ಆಹ್ವಾನ. ಮಕರ ಬೆಳಕು ಕೃತಕವಾಗಿ ನಿರ್ಮಾಣವಾಗಲು ನೂರಾರು ಕಿಲೋಗ್ರಾಂ ಕರ್ಪೂರವನ್ನು ದೂರದಲ್ಲೆಲ್ಲೋ ಕಾಡಿನಲ್ಲಿ ಹಚ್ಚಿ ಜನರ ಭ್ರಮೆಗೆ ಸೊಪ್ಪು ಹಾಕುವುದು ಸರ್ವಥಾ ಅನಂಗೀಕಾರಾರ್ಹವಾದ್ದು. ಅದು ಮಕರ ಬೆಳಕಲ್ಲ, ಬದಲಾಗಿ ಮಂಕು ಬೆಳಕು. ಕೇರಳದ ಸರ್ಕಾರ ಈ ಮಂಕುತನಕ್ಕೆ ಬೆಂಬಲ ನೀಡುವುದು ಸರಿಯಲ್ಲ. ಒಬ್ಬ ಹೆಣ್ಣು ದೇವಸ್ಥಾನ ಪ್ರವೇಶಿಸಿದಳೆಂದು ಮೊಕದ್ದಮೆ ಹೂಡಲಾಗಿದೆಯೆಂದು ಹೇಳಲಾಗಿದೆ. ಇದಕ್ಕೆ ಏನು ಸಮರ್ಥನೆ ಸಾಧ್ಯ? ಕುಕ್ಕೆಯಲ್ಲಿ ಎಂಜಲೆಲೆ ಮೇಲೆ ಜನ ಉರುಳುವುದು ಮೌಢ್ಯವಾದರೆ ಅದಕ್ಕಿಂತಲೂ ಕಡಿಮೆಯಲ್ಲದ ಮೌಢ್ಯ ಒಬ್ಬ ಮಹಿಳೆ ಶಬರಿಮಲೈ ಮೆಟ್ಟಿಲು ಹತ್ತಿ ವಿಗ್ರಹ ಮುಟ್ಟಕೂಡದೆಂಬುದರಲ್ಲಿದೆ. ಅದಕ್ಕಿಂತಲೂ ಅಕ್ಷಮ್ಯವಾದ್ದು ಕರ್ಪೂರದಿಂದ ಹಚ್ಚಲಾಗುವ ಮಂಕು ಬೆಳಕು. ಮಂಕುತನದಿಂದಲೇ ಸಂಭವಿಸಿದ್ದರೂ ನೂರಾರು ಜನರ ಸಾವು ಅತ್ಯಂತ ದುಃಖಕರವಾದ್ದು. ಅದನ್ನು ತಪ್ಪಿಸಬಹುದಿತ್ತು. ಕೇರಳ ಸರ್ಕಾರವು ಸಕ್ರಿಯವಾಗಿ ಮಧ್ಯಪ್ರವೇಶ ಮಾಡಿ ಮಂಕುತನವನ್ನು ಚಿವುಟಿಹಾಕುವತ್ತ ಹೆಜ್ಜೆ ಹಾಕಬೇಕು, ಸಂಭವನೀಯ ಮೂರ್ಖ ಸಾವನ್ನು ಇನ್ನು ಮುಂದೆ ಎಂದೂ ಆಗದಂತೆ ನೋಡಿಕೊಳ್ಳಬೇಕು. ಒಂದು ವ್ಯಾನ್ ಹೋಗಿ ರಿಕ್ಷಾಕ್ಕೆ ಅಪ್ಪಳಿಸಿತಾದ್ದರಿಂದ ಸಾವು ಸಂಭವಿಸಿತೆಂಬ ಮಾತು ಮೂರ್ಖ ಸಾವಿಗೆ ಸಮರ್ಥನೆ ನೀಡಲಾರದು.

* * *

**ಛ**ತ್ತೀಸಗಢ ಸರ್ಕಾರದ ಬೆಂಬಲದಿಂದ ಹೀನಾಯ ದೌರ್ಜನ್ಯಗಳನ್ನು ನಡೆಸುತ್ತಾ ಬಂದಿರುವ ಅಲ್ಲಿನ ಸಾಲ್ವಾ ಜುಡುಂ ಎಂಬ ಗೂಂಡಾಪಡೆಯು ಸಂವಿಧಾನಬಾಹಿರವೆಂದು ಸರ್ವೋಚ್ಚ ನ್ಯಾಯಾಲಯ ಘೋಷಿಸಿದ್ದರೂ ಆ ರಾಜ್ಯದ ನಿತಿನ್ ಗಡ್ಕರಿ ಪಕ್ಷ ಆ ಜುಡುಂಅನ್ನು ಬರಖಾಸ್ತು ಮಾಡಿಲ್ಲ. ಆ ಪಕ್ಷಕ್ಕೆ ಸಂವಿಧಾನ ಮತ್ತು ನ್ಯಾಯಾಲಯ ಯಾವತ್ತೂ ಗೌಣವೇ ತಾನೆ! ನ್ಯಾಯಾಲಯಕ್ಕೆ ಕೊಟ್ಟಿದ್ದ ಮಾತನ್ನು ಅದ್ವಾನಿ ಉಳಿಸಿಕೊಳ್ಳಲಿಲ್ಲ, ತಾನೇನು ಅವರಿಗಿಂತ ಕಡಿಮೆಯೇ, ಎಂಬ ಧೋರಣೆ ಆ ರಾಜ್ಯದ ಮುಖ್ಯಮಂತ್ರಿಯದು. ನ್ಯಾಯಾಲಯದ ಆಜ್ಞೆಗೆ ತಿರಸ್ಕಾರ ಭಾವನೆ ಹೊಂದಿರುವ ರಾಜ್ಯ ಸರ್ಕಾರಕ್ಕೆ ಈಗ ಡಾ|| ವಿನಾಯಕ ಸೇನ್‌ಗೆ ಆಜೀವ ಪರ್ಯಂತ ಕಾರಾಗೃಹ ವಾಸವನ್ನು ವಿಧಿಸಿರುವ ನ್ಯಾಯಾಲಯವು ಹಠಾತ್ತನೆ ಚಿರಸ್ಮರಣೀಯವಾಗಿಹೋಗಿದೆ. ಕುರುಡು ನ್ಯಾಯಕ್ಕೆ ಇಂತಹ ಇನ್ನೊಂದು ಉದಾಹರಣೆ ಸುಲಭವಾಗಿ ಸಿಗುವುದಿಲ್ಲ. ಗಾಂಧೀಜಿಯ ಮೇಲೆ ರಾಜ್ಯದ್ರೋಹದ ಆಪಾದನೆ ಹೊರಿಸಿದ್ದ ಬ್ರಿಟನ್ನಿನ ಅಂದಿನ ವಸಾಹತು ಸರ್ಕಾರವನ್ನು ಮೀರಿಸುತ್ತಿರುವ ಇಂದಿನ ಛತ್ತೀಸಗಢ ಸರ್ಕಾರ ವಿನಾಯಕ ಸೇನ್ ಮೇಲೆ ಹೊರಿಸಿರುವ ಆಪಾದನೆ ಸಹ ರಾಜ್ಯದ್ರೋಹ ಎಂಬುದೇ ಆಗಿದೆ. ಆ ವಿನೀತ ವೈದ್ಯ ಇವರಿಗೆ ನಕ್ಸಲರ ಭೂತದಂತೆ ಗೋಚರಿಸಲು ಕಾರಣವೇನು? ಆತನಂತೆ ಬೇರಾರೂ ಗುಡ್ಡಗಾಡು ಜನರಿಗೆ ಸಹಾಯಹಸ್ತ ಚಾಚಬಾರದು ಎಂಬುದು. ಹಾಗೇನಾದರೂ ಚಾಚಿದರೆ ''ವಿನಾಯಕ ಸೇನ್‌ಗೆ ದೊರೆತ ಶಿಕ್ಷೆ ನಿಮಗೂ ಕಟ್ಟಿಟ್ಟದ್ದು'' ಎಂಬ ಎಚ್ಚರಿಕೆಯ ಗಂಟೆ ಬಾರಿಸಿ ಗುಡ್ಡಗಾಡು ಜನರ ಪರವಾಗಿ ನಿಂತು ಸೇವೆ ಸಲ್ಲಿಸಲು ಮುಂದಾಗುವವರಿಗೆ ಮುಖದ ಮೇಲೆ ತಣ್ಣೀರೆರಚುವುದು ಮೂಲೋದ್ದೇಶ. ''ನಕ್ಸಲರ ಪರವಾದವನು'' ಎಂದು ಯಾರಿಗಾದರೂ ಹಣೆಪಟ್ಟಿ ಕಟ್ಟಿ ಜೈಲಿಗೆ ತಳ್ಳುವುದು ಬಿಜೆಪಿಯ ಸರ್ಕಾರಿ ಕಾರ್ಯತಂತ್ರವಾಗುತ್ತಿದೆ. ಇದು ಸರ್ವಥಾ ಖಂಡನೀಯ. ಐಎಸ್‌ಐ ಎಂಬ ದೆಹಲಿಯ ಸಂಸ್ಥೆಗೆ ಪತ್ರ ಬರೆದರೆ ಅದು ಪಾಕಿಸ್ತಾನಿ ಗೂಢಚಾರ ಸಂಸ್ಥೆಗೆ ಬರೆದದ್ದು ಎಂದು ಹೇಳುವ ಬಿಜೆಪಿ ಸರ್ಕಾರದ ಮಾತನ್ನು ಗಂಭೀರವಾಗಿ ಪರಿಗಣಿಸಿರುವ ನ್ಯಾಯಾಲಯದ ಮತಿಭ್ರಷ್ಟತನಕ್ಕೆ ಏನೆನ್ನಬೇಕು? ಬಿಜೆಪಿ ಸರ್ಕಾರ ಮತ್ತು ಛತ್ತೀಸಗಢದ ನ್ಯಾಯಾಲಯ ಎರಡರಲ್ಲೂ ಅಪ್ರಕಟಿತ ಗೂಢ ಕಾರ್ಯಸೂಚಿ ಬೇರುಬಿಟ್ಟಿದೆಯೆಂಬ ಭಾವನೆ ಬರುತ್ತಿಲ್ಲವೆ? ಸರ್ವೋಚ್ಚ ನ್ಯಾಯಾಲಯ ಸಾಲ್ವಾ ಜುಡುಂ ಮುಂದುವರಿಕೆಯನ್ನು ಗಮನಿಸಿ ಛತ್ತೀಸಗಢ ಸರ್ಕಾರದ ಮೇಲೆ ಕೋರ್ಟು ನಿಂದನೆ ಆರೋಪವನ್ನು ಹೊರಿಸಬೇಕು, ವಿನಾಯಕ ಸೇನ್‌ಗೆ ನೀಡಿರುವ ಶುದ್ಧ ಕಾಪಟ್ಯದ ಶಿಕ್ಷೆಯನ್ನು ರದ್ದುಗೊಳಿಸಬೇಕು. ಯುವಕರಿಗೆ ಮಾದರಿಯಾಗಬೇಕಾದ ವಿನಾಯಕ ಸೇನ್ ಕಾರಾಗೃಹದ ಕತ್ತಲಲ್ಲಿ ಮುಳುಗಿಹೋಗುವುದು ಘೋರ ವಿಪರ್ಯಾಸ. ಮಾನವ ಹಕ್ಕುಗಳಿಗೇನಾದರೂ ಬೆಲೆ ಉಳಿದಿದೆಯೆ ಎಂಬ ಅನುಮಾನ ಕಾಡುತ್ತಿದೆ.

* * *

**ತು**ಮಕೂರು ವಿಶ್ವವಿದ್ಯಾಲಯವು ಪೇಜಾವರ ಮಠಾಧೀಶರಿಗೆ ಗೌರವ ಡಾಕ್ಟರೇಟ್ ನೀಡಿದ್ದನ್ನು ಮೀರಿಸುವ ವಿಕ್ರಮ ಮೈಸೂರು ವಿಶ್ವವಿದ್ಯಾಲಯದ್ದು. ಅಲ್ಲಿ ಕೃಷ್ಣರಾಜ ಒಡೆಯರಿಗೆ ಮತ್ತು ಸಚಿನ್ ತೆಂಡೂಲ್ಕರನಿಗೆ ಡಾಕ್ಟರೇಟ್ ನೀಡಿ ಗೌರವಿಸಲಾಗುತ್ತದೆಂದು ಹೇಳಲಾಗಿದೆ. ಆ ಪ್ರಶಸ್ತಿ ನೀಡಲಿಲ್ಲವೆಂದು ಕೃಷ್ಣರಾಜ ಒಡೆಯರ್ ತಪಿಸುತ್ತಿದ್ದರೆಂದು ಮೈಸೂರು ಸಿಂಡಿಕೇಟಿಗೆ ಕನಸು ಬಿದ್ದಿತ್ತೇನೊ! ಈ ಪ್ರಶಸ್ತಿ ಇಲ್ಲದೆ ಅವರಿಗೆ ಗೌರವ ಕಡಿಮೆಯಾಗಿತ್ತೆಂದು ಅವರ ಕುಟುಂಬದ ಇಂದಿನ ರಾಜಕುಮಾರ ಹೇಳಿದ್ದನೇನೋ ತಿಳಿಯದು. ಇಂಥದೆಲ್ಲಾ ಆದಾರ ತಲೆಗೆ ಬರುತ್ತದೆಂಬುದೇ ಒಂದು ವಿಸ್ಮಯ. ಇನ್ನು ಮುಂದೆ ದಿವಂಗತ ಡಾ|| ಒಡೆಯರ್ ಎಂದು ಬರೆಯುವ ಫಜೀತಿ ಅನೂಹ್ಯ. ಇಂತಹ ಪ್ರಶಸ್ತಿ ನೀಡಿ ಅವರನ್ನು ಕುಬ್ಜರನ್ನಾಗಿಸುವುದು ಹೇಯವೆನಿಸುತ್ತದೆ. ಅವರ ಜೊತೆ ತನ್ನ ಐನೂರನೆಯ ವಯಸ್ಸಿನವರೆಗೂ ಟೆಸ್ಟ್ ಕ್ರಿಕೆಟ್ ಮತ್ತು ಇನ್ನೂ ಎಂತೆಂಥದೋ ಕ್ರಿಕೆಟ್ ಆಟ ಆಡುತ್ತಲೇ ಇದ್ದು, ಮುರಿಯಲಾಗದ ದಾಖಲೆ ಸ್ಥಾಪಿಸಲು ತೀರ್ಮಾನಿಸಿರುವ ಟೆಂಡೂಲ್ಕರನ ಮಾತೇ ಬೇಡ. ಅವನು, ಗಂಗೂಲಿಯೆಂಬ ಅಳುಮೋರೆಯ ತಿರಸ್ಕೃತ ವೀರ, ಇನ್ನೂ ವಿರಮಿಸುವ ಸಮಯ ಬಂದಿಲ್ಲವೆಂಬ ವಿಭ್ರಾಂತ ದ್ರಾವಿಡ, ಇವರೆಲ್ಲಾ ಯುವ ಕ್ರಿಕೆಟ್ಟಿಗರ ಹಿತ ಶತ್ರುಗಳು. ನಮ್ಮ ದೇಶದ ಇಂದಿನ ಯುವಕರು ಮುದುಕರಾಗುವವರೆವಿಗೂ ಇವೇ ಧಾಂಡಿಗರು ವಿವೇಕದಿಂದ ನಿವೃತ್ತರಾಗಬೇಕೆಂಬ ಪ್ರಜ್ಞೆಯನ್ನು ಮೂಡಿಸಿಕೊಳ್ಳುವುದಿಲ್ಲ, ಏಕೆಂದರೆ ಆಟದಲ್ಲಿ ಮೋಜಿಗಿಂತ ಹಣದ ಸುರಿಮಳೆಯ ಮಜಾ ಇವರನ್ನು ಆವರಿಸಿದೆ. ''ನನ್ನಲ್ಲಿನ್ನೂ ಕ್ರಿಕೆಟ್ ಉಳಿದಿದೆ'' ಎಂದು ಹೇಳಿಕೊಂಡು ಇನ್ನೊಂದು ಶತಮಾನ ಇವರೇ ಆಡುತ್ತಿದ್ದರೆ ಇಂದಿನ ಯುವಕರೇನಾಗಬೇಕು? ಈ ಮುದಿಗೊಡ್ಡುಗಳು ಸಾಗಿಹೋಗುವ ತನಕ ಅವರಿಗೆ ಪ್ರವೇಶವಿಲ್ಲ. ಜನ ಅವೇ ಹಳಸಿದ ಮೂರ್ತಿಗಳನ್ನು ನೋಡುತ್ತಾ ಕುಳಿತಿರಬೇಕು. ಸ್ವಂತ ಬಲದಿಂದ ಎದ್ದುನಿಲ್ಲಲು ಸಹ ಆಗಲಾರದ ಕರುಣಾನಿಧಿಯ ವಂಶಜರು ಇವರೆಲ್ಲಾ. ಅವರಿಗೆ ನಿವೃತ್ತಿಯಿಲ್ಲ, ಯುವಕರಿಗೆ ಅವಕಾಶವಿಲ್ಲ. ಮುಂದಿನ ದಶಕದಲ್ಲಿ ಅನುಭವೀ ಯುವಕರು ತಂಡದಲ್ಲಿರಬೇಕೆಂಬ ಯೋಚನೆ ಕ್ರಿಕೆಟ್ ಮಂಡಲಿಯ ಭ್ರಷ್ಟ ಅಧಿಕಾರಿಗಳಿಗಿಲ್ಲ. ಈ ಗಂಗು, ಟೆಂಡು, ರಾಹುಗಳು ಕ್ರಿಕೆಟ್ಟಿಗೆ ಭೇತಾಳಗಳು; ಮರ್ಯಾದೆಯಿಂದ ನಿಷ್ಕ್ರಮಿಸದ ಇವಕ್ಕೆ ಅರ್ಧಚಂದ್ರ ಪ್ರಯೋಗ ಮಾಡುವ ಯುವ ಕ್ರಿಕೆಟಿಗರು ಬಂದು ಬ್ಯಾಟಿನಿಂದ ತಲೆಯನ್ನು ಮೊಟ್ಟಬೇಕು, ಅಷ್ಟೆ. ಟೆಂಡೂ ಭೂಪನಂಥವರಿಗೆ ೫೦೦ ವರ್ಷದವರೆಗೆ ಬಾಳಲು ಜನ ಆಶೀರ್ವದಿಸಲಿ, ಆತ ಮುಂಬೈನ ಫ್ಲೋರಾ ಫೌಂಟನ್ ಬಳಿ ೫೦೦೦ ಕೋಟಿ ರೂಪಾಯಿಗಳ ಇನ್ನೊಂದು ಹೊಟೇಲ್ ಕಟ್ಟಲಿ, ಭಾರತದ ಜ್ಯೋತಿ ಬೆಳಗಲಿ. ಜೈ ಕ್ರಿಕೆಟ್, ಜೈ ಟೆಂಡು.

* * *

**ಟೆ**ಲಿಕಾಂ ಹಗರಣ, ಪುನಃ ಪುನಃ ಎದ್ದುಬರುತ್ತಿರುವ ಬೋಫರ್ - ಬೋಫರ್ ಹಗರಣದಂತೆ ಬಹಳ ಕಾಲ ನಮ್ಮನ್ನು ಬಿಟ್ಟುಹೋಗುವಂತಿಲ್ಲ. ನ್ಯೂಯಾರ್ಕಿನ ಹಣಕಾಸು ಪ್ರಪಂಚದಲ್ಲಿ ಕಾನೂನು ವಾದಿಯಾಗಿದ್ದ ನಿಪುಣ ಸಿಬಾಲ್‌ರವರನ್ನು ಸಂಪರ್ಕ ಖಾತೆಗೆ ಮಂತ್ರಿಯಾಗಿ ಮಾಡಿದ್ದೇ ಕಾನೂನಿನಲ್ಲಿ ಎಲ್ಲವೂ ಸರಿಯೆನ್ನುವಂತೆ ಹಗರಣವನ್ನು ಮುಚ್ಚುವುದು ಹೇಗೆ ಎಂದು ಪ್ರಯತ್ನಿಸಲು. ಕಳೆದ ಎರಡು ವರ್ಷಗಳಿಂದ ಕಳ್ಳನ ಕಳ್ಳ ಹೆಜ್ಜೆಯನ್ನೆಲ್ಲ ಅಳಿಸಿ, ಅವನು ಬಂದ ದಾರಿಯಲ್ಲಿ ಸಾಕ್ಷ್ಯಾಧಾರಗಳು ಇಲ್ಲವೆಂದು ಖಾತ್ರಿಯಾದ ಮೇಲೆಯೇ ಸಿಬಿಐ ಪೊಲೀಸಿಗೆ ಒಳಗೆ ಬರಲು ಬಿಟ್ಟಿದ್ದು ಎಂದು ಯಾವ ದಡ್ಡನಿಗೂ ಸ್ಪಷ್ಟವಾಗಿದೆ. ಆದರೂ ಎಲ್ಲಾದರೂ ಕಾನೂನಿನನ್ವಯ ಪುರಾವೆಯ ಶೇಷ ಅಂಟಿಕೊಂಡಿದ್ದರೆ ಎನ್ನುವ ಶಂಕೆಯೇ ಒಂದು ತಿಂಗಳು ಅವಧಿಯ ನ್ಯಾಯಾಧೀಶರ ತನಿಖೆಯನ್ನು ಏರ್ಪಡಿಸಿಕೊಂಡಿದ್ದು. ಅವರ ವರದಿಗೂ ಕಾಯದೆ ಮಂತ್ರಿವರ್ಯ ಇಡೀ ಹಗರಣವೆ ಸುಳ್ಳು, ಸರ್ಕಾರಕ್ಕೆ ಯಾವ ನಷ್ಟವೂ ಆಗಿಲ್ಲ, ಸಿಎಜಿಗೆ ಈ ಸೂಕ್ಷ್ಮವಾದ ತಾಂತ್ರಿಕ ಕ್ಷೇತ್ರ ಅರ್ಥವಾಗಿಲ್ಲ ಎಂದೆಲ್ಲಾ ಪತ್ರಿಕಾಗೋಷ್ಠಿ ಮಾಡಿ ಹೇಳುವ ಉದ್ದೇಶ ಏನೆಲ್ಲ ಇರಬಹುದು! ಸಿಬಿಐಗೆ ನಿರ್ದೇಶನವೇ, ಸುಪ್ರೀಂ ಕೋರ್ಟಿಗೆ ಸೂಚನೆಯೇ, ಆಂತರಿಕ

ವಿಚಾರಣೆಯ ನ್ಯಾಯಾಧೀಶರ ವರದಿಗೆ ಪೀಠಿಕೆಯ ತಯಾರಿಯೇ? ಈಗಾಗಲೆ ಕಾಮನ್‌ವೆಲ್ತ್ ಕ್ರೀಡಾಕೂಟದ ಭ್ರಷ್ಟಾಚಾರದ ತನಿಖೆ ಮತ್ತು ವಿಚಾರಣೆಯೂ ಜನ ಮೊದಲೇ ಊಹಿಸಿದ ಮಾರ್ಗದಲ್ಲೇ ನಡೆಯುತ್ತಿದೆ. ಅದೇ ತಿಪ್ಪೆ ಸಾರಿಸುವ ಕೆಲಸ. ಅದು ಹಾಗೆಯೇ ಎನ್ನುವ ಸೂಚನೆಯನ್ನು ಈ ಮಂತ್ರಿವರ್ಯ ಈಗಷ್ಟೆ ಕೆಲವು ಕಂಪನಿಗಳು ಲೈಸೆನ್ಸ್ ಪಡೆದೂ, ಅದರ ಕರಾರಿನಂತೆ ಸೇವೆಯನ್ನು ಪ್ರಾರಂಭಿಸದೆ ಅಥವಾ ಹಳ್ಳಿಗಾಡಿನ ಅಭಿವೃದ್ಧಿಯ ಹೊಣೆಯನ್ನು ಪೂರೈಸದೆ ಅಪರಾಧಿಗಳಾಗಿದ್ದು, ಮೊದಲಿಗೆ ಅವರ ಪರವಾನಗಿಯನ್ನು ಮನ್ನ ಮಾಡುತ್ತೇನೆಂದವ, ಹಾಗೆ ಮಾಡದೆ ಈಗ ಅವರಿಗೆ ಒಂದಿಷ್ಟು ದಂಡ ವಿಧಿಸಿ, ಅದನ್ನು ಸರಿಪಡಿಸಲು ತುರ್ತಿನಿಂದ ಮುಂದುವರಿದಿದ್ದಾರೆ. ಸಿಎಜಿ ಹೇಳಿದ ನಷ್ಟದ ಅಂದಾಜು ೧,೭೬,೦೦೦ ಕೋಟಿ ರೂಪಾಯಿಗಳು. ಈತ ಅದು ಸೊನ್ನೆ ಎಂದಿದ್ದು, ಈಗಷ್ಟೆ ೬೦ ಕೋಟಿ ರೂ.ಗಳಷ್ಟು ದಂಡ ವಸೂಲಿ ಮಾಡಿ, ಸರ್ಕಾರಕ್ಕೆ ಆದಾಯ ಮಾಡಿದ್ದೇನೆ ಎಂದು ಹೇಳಿಕೊಳ್ಳುತ್ತಿರುವ ಭೂಪ! ಮಾಂಟೆಕ್ ಸಿಂಗ್ ಹೇಳುವುದು ಇನ್ನೂ ಸ್ಪಷ್ಟ. ಟೆಲಿಕಾಂ ಕ್ಷೇತ್ರದ ಖಾಸಗೀಕರಣವೆ ಸರ್ಕಾರದ ನೀತಿಯಾಗಿದ್ದು, ಇದರಿಂದ ಸರ್ಕಾರ ಹಣ ಸಂಪಾದಿಸುವ ಉದ್ದೇಶವೇ ಇಲ್ಲವಂತೆ! ಆದ್ದರಿಂದ ನಷ್ಟ ಎಲ್ಲಿ ಬಂತು?! ಇಂಥ ದಳ್ಳಾಳಿಗಳು ರಾಜಕೀಯಕ್ಕೆ ಸೇವೆ ಸಲ್ಲಿಸಲು ಇರುವವರೆಗೆ ನಮ್ಮ ಪ್ರಜಾಸತ್ತೆಯ ವ್ಯವಸ್ಥೆಯನ್ನು ವಾಣಿಜ್ಯ ಲೋಕದ ಹಿಡಿತದಿಂದ ಬಿಡಿಸಿಕೊಳ್ಳುವುದು ಹೇಗೆ ಸಾಧ್ಯ? ಒಬ್ಬ ರಾಜನನ್ನು ಈ ಭ್ರಷ್ಟಾಚಾರಕ್ಕೆ ಜವಾಬ್ದಾರನನ್ನಾಗಿಸಿ, ಪ್ರಧಾನಿ ಮತ್ತು ಅವರ ಸಂಪುಟ ತಮ್ಮದೇ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. ಭ್ರಷ್ಟಾಚಾರ ವ್ಯವಸ್ಥೆಯ ಹಾಸುಹೊಕ್ಕಾಗಿ ಅವಿಭಾಜ್ಯವಾಗಿದ್ದು, ಅದರ ವೈಫಲ್ಯವಾಗಿರುವುದು ಸ್ಪಷ್ಟ. ಸರಿಯಾದ ಪರ್ಯಾಯ ವ್ಯವಸ್ಥೆಯ ಬಗ್ಗೆ ಜನ ಚಿಂತಿಸುತ್ತಿದ್ದಾರೆ. ಚಿಂದಿ ಎದ್ದಿರುವ ಇದರ ದುರಸ್ತಿಯನ್ನಲ್ಲ.

* * *

**ಮುಂ**ಬಯಿಯ 'ಆದರ್ಶ' ಕಟ್ಟಡದ ಭ್ರಷ್ಟಾಚಾರದಲ್ಲಿ ಆಗಿರುವುದು ನಾವು ಏನೆಲ್ಲ ಆದರ್ಶಗಳನ್ನು ನಮ್ಮ ಮುಂದೆ ಇಟ್ಟಿಕೊಂಡಿದ್ದೇವೋ ಅವೆಲ್ಲವುಗಳನ್ನೂ ಕೆಡವಿರುವುದು. ಪರಿಸರ ಮಂತ್ರಿ 'ಆದರ್ಶ'ವನ್ನು ಕೆಡವಬೇಕೆಂದು ಆದೇಶ ನೀಡಿ, ಜಾಣ್ಮೆಯಿಂದ ವಿಷಯವನ್ನು ಕೋರ್ಟಿನ ಕಟಕಟೆಗೆ ತಳ್ಳಿದ್ದಾರೆ. ಇಷ್ಟೆಲ್ಲ ಖರ್ಚಾಗಿರುವಾಗ, ಇದನ್ನು ಕೆಡವುದೇ ಎನ್ನುವ ಉದ್ಗಾರ ಒಂದು ಕಡೆ. ಆರು ಮಹಡಿಗಳನ್ನಾದರೂ ಉಳಿಸಿಕೊಳ್ಳಿ ಎಂಬ ಮಾತು ಒಂದು ಕಡೆ. ಹೀಗೆಯೇ ಹಲವಾರು ಭ್ರಷ್ಟಾಚಾರಗಳನ್ನು ಮೊದಲು ನಡೆಯಲು ಬಿಡುವುದು, ನಂತರ ಆಗಿದ್ದು ಆಯ್ತು, ಈಗ ಏನು ಮಾಡುವುದಕ್ಕಾಗುತ್ತದೆ, ಅದನ್ನು ಒಮ್ಮೆ ಸರಿಪಡಿಸಿಬಿಡೋಣವೆನ್ನುವುದು. ಹಸಿರು ವಲಯವನ್ನು ಅತಿಕ್ರಮಿಸುವವರೆಗೆ ಸುಮ್ಮನಿರುವುದು, ನಂತರ ಲಂಚ ಪಡೆದು, ಹಸಿರು ವಲಯವನ್ನು ಮತ್ತಷ್ಟು ಹೊರವಲಯಕ್ಕೆ ದೂಡುವುದು, ಇದು ನಾವು ನಡೆದು ಬರುತ್ತಿರುವ ಮಾರ್ಗ. ಆದರ್ಶವನ್ನು ಕೆಡವಿದರೂ, ಆ ಭ್ರಷ್ಟಾಚಾರದಲ್ಲಿ ಭಾಗಿಗಳಾದ ಹಲವು ಮುಖ್ಯಮಂತ್ರಿಗಳು, ಸೇನಾ ಅಧಿಕಾರಿಗಳು, ಸರ್ಕಾರದ ವಿವಿಧ ಇಲಾಖೆಯ ಅಧಿಕಾರಿಗಳು, ಆ ''ಸಹಕಾರ'' ಸಂಘದ ಕಾರ್ಯಕರ್ತರು – ಇವರೆಲ್ಲರ ನೆಟ್‌ವರ್ಕ್‌ಅನ್ನು, ಹಂದರವನ್ನು ಕೆಡವಿದಂತಾಯ್ತೆ? ಡೆವಲಪರ್ಸ್ ಎನ್ನುವ ಒಂದು ಪಾರ್ಥೆನಂ ಭ್ರಷ್ಟಾಚಾರದ ತಳಿ, ಕಾಂಗ್ರೆಸ್ ಗ್ರಾಸ್ ಥರಹದ್ದು ಬೇರೂರಿರುವಾಗ ಅವೆಲ್ಲವನ್ನು ಕೆಡುವುದು ಹೇಗೆ? ಇದೆ ಡೆವಲಪರ್‌ಗಳು ಈಗ ಪೊಲೀಸ್ ಕಛೇರಿಯನ್ನು ಉಚಿತವಾಗಿ ಕಟ್ಟಿಸಿಕೊಡುತ್ತಿದ್ದಾರೆ. ಅವರು ಕಟ್ಟುವ ದೇವಸ್ಥಾನಗಳಿಗೆ ಲೆಕ್ಕವಿಲ್ಲ. ಅಲ್ಲು ಅಷ್ಟೆ; ಅನಧಿಕೃತ ನಿವೇಶನ, ಅನಧಿ ಕೃತ ಕಟ್ಟಡ, ನಂತರ ದೇವರ ಹೆಸರಿನಲ್ಲಿ ಅವುಗಳ ಭ್ರಷ್ಟಾಚಾರ ಊರ್ಜಿತ. ಈಗ ಈ ಡೆವಲಪರ್‌ಗಳು ವಿಶ್ವವಿದ್ಯಾಲಯಗಳ ಕಾಲೇಜುಗಳಿಗೆ ತಮ್ಮ ಕಪ್ಪು ಹಣದ ಒಂದಿಷ್ಟು ದೇಣಿಗೆ ನೀಡಿ, ತಮ್ಮ ಹೆಸರು ಇಡಿಸಿಕೊಳ್ಳಲು ಲಗ್ಗೆ ಇಟ್ಟಿದ್ದಾರೆ, ಮಂಗಳೂರು ವಿಶ್ವವಿದ್ಯಾಯಲದ ಸುದ್ದಿಯಂತೆ. ಇವರುಗಳಿಗೆ ಸಿಗುವ ''ಗೌರವ'' ಡಾಕ್ಟರೇಟು ಗಳಿಗಂತೂ ಲೆಕ್ಕವೇ ಇಲ್ಲ. ನಮ್ಮ ಮುರಿದ ಆದರ್ಶಗಳನ್ನು ಪುನಃ ನಿರ್ಮಾಣ ಮಾಡದೆ, ಈ ಭ್ರಷ್ಟಾಚಾರಗಳನ್ನು ಕೆಡವಲು ಆಗುವುದಿಲ್ಲ. ಕಾನೂನುಬಾಹಿರವಾದ ಕಟ್ಟಡವನ್ನು ಕೆಡವು ಎನ್ನುವ ಸರ್ಕಾರಿ ಆದೇಶ ಕಾನೂನುಬಾಹಿರವಂತೆ! ಮತ್ತೊಂದು ಮಾತು: ಭ್ರಷ್ಟಾಚಾರವೆನ್ನುವುದಕ್ಕೆ ರೂಪಾಯಿ ಬೆಲೆ ಕಟ್ಟುವುದು ಎಷ್ಟು ಸರಿ – ಅದು ೧೦೦ ರೂ. ಆದರೆ ಪರವಾಗಿಲ್ಲ, ಸಾವಿರಾರು ಕೋಟಿಯಾದರೆ ಮಾತ್ರ ಚಿಂತಿಸಬೇಕೆ? ಟೆಲಿಕಾಂ ಹಗರಣದ ಮುಂದೆ ಬೋಫರ್ಸ್ ಏನು ಮಹಾ ಎನ್ನೋಣವೆ? ವಾಸ್ತವದಲ್ಲಿ ನಾವು ಚಿಂತಿಸಬೇಕಾದದ್ದು ನೈತಿಕತೆಯ ಅಧಃಪತನವೇ ಸಾಮಾಜಿಕ ಭ್ರಷ್ಟಾಚಾರವಾಗಿ ರೂಪುಗೊಳ್ಳುವ ಮೂಲ ವಿಷಯ. ಟಾಟಾ ಹೇಳುವಂತೆ ಖಾಸಗಿಯಾಗಿ ಮಾತನಾಡಿದ್ದು ಅನೈತಿಕವೇ ಆದರೂ ಯಾರಿಗೂ ಅದು ಸಂಬಂಧಪಟ್ಟದ್ದಲ್ಲ ಎಂದು ಒಪ್ಪಿದರೆ ಆಗ ಭ್ರಷ್ಟಾಚಾರವನ್ನು ನಿಲ್ಲಿಸಲು ಆಗುವುದೆ ಇಲ್ಲ. ಕಪ್ಪು ವ್ಯವಹಾರವೆಲ್ಲ ತೆರೆಮರೆಯಲ್ಲೆ ನಡೆಯುವುದು. ಪಾರದರ್ಶಕತೆಯಿಲ್ಲದ ವ್ಯವಹಾರದಲ್ಲಿ ವಂಚನೆ ಇರುವುದು ಸ್ಪಷ್ಟ.

* * *

**ಬೆ**ಲೆ ಏರಿಕೆ ಎನ್ನುವುದು ಬಂಡವಾಳ ವ್ಯವಸ್ಥೆ ಬಂಡವಾಳ ಶೇಖರಿಸುವ ಹಲವಾರು ಕುಖ್ಯಾತ ಮಾರ್ಗಗಳಲ್ಲಿ ಒಂದು. ಸಾಂಪ್ರದಾಯಿಕ ಬಂಡವಾಳ ಶಾಸ್ತ್ರದನ್ವಯ, ಕೊರತೆಯಿರುವ ಸರಕುಗಳನ್ನು ಅತ್ಯಗತ್ಯವಾದ ಬಳಕೆಯ ಕಡೆಗೆ ದೂಡುವುದು ಅದರ ಸಮರ್ಪಕ ಬಳಕೆ. ಅದು ವ್ಯಕ್ತವಾಗುವುದು ಅಗತ್ಯವಿರುವವರು ಹೆಚ್ಚು ಬೆಲೆ ಕೊಟ್ಟಾದರೂ ಆ ಸರಕನ್ನು ಪಡೆದುಕೊಂಡೇ ತೀರುತ್ತಾರೆ ಎನ್ನುವಲ್ಲಿ ಅದು ಮುಕ್ತ ಮಾರುಕಟ್ಟೆಯಲ್ಲಿ ಆಗುತ್ತದೆಯೆಂತೆ. ಹೀಗೆ ಹೆಚ್ಚುವರಿಯಾಗಿ ಬಂದ ಲಾಭ, ಅದು ಹೇಗೋ ಹೆಚ್ಚು ಈರುಳ್ಳಿ ಬೆಳೆಯಲು ಹೂಡಿಕೆಯಾಗಿ, ಹೆಚ್ಚು ಬೆಳೆಯಾಗಿ, ಬೆಲೆ ಕಡಿಮೆಯಾಗಿ ಎಲ್ಲರೂ ಸುಖವಾಗಿರಬಹುದು! ಈ ವ್ಯವಸ್ಥೆಗೆ ಉಕ್ಕು, ಅದಿರೂ, ಪೆಟ್ರೋಲೂ, ವಿದ್ಯುಚ್ಛಕ್ತಿಯೂ, ಈರುಳ್ಳಿಯೂ, ಮಗುವಿನ ಹಾಲೂ ಎಲ್ಲಾ ಒಂದೇ ಥರದ ಸರಕು. ಕೆಲವು ಮಕ್ಕಳಿಗೆ ದುಬಾರಿ ಹಾಲು ಕೊಳ್ಳಲಾಗದಿದ್ದರೆ ಅದು ಸತ್ತರೂ ವ್ಯವಸ್ಥೆ ಅದಕ್ಕೆ ಹೊಣೆ ಅಲ್ಲ. ಕಾರಣ ಹೆಚ್ಚು ಹಣಕೊಡುವ ಖೋವಾ ಮಾಡಲು ಹಾಲು ಬೇಕಾಗುತ್ತದೆ. ಕೊರತೆ ಇರುವ ಅಗತ್ಯ ವಸ್ತುವನ್ನು ಅಗತ್ಯವಿರುವವರಿಗೆಲ್ಲಾ, ಅಗತ್ಯಕ್ಕೆ ತಕ್ಕಂತೆ, ಆದ್ಯತೆಯ ಮೇಲೆ ಸುಲಭ ದರದಲ್ಲಿ ನಿರ್ದೇಶಿತವಾಗಿ ಸ್ವಲ್ಪಕಾಲವಾದರೂ ಹಂಚುವುದೂ ಈ ಅರ್ಥಶಾಸ್ತ್ರಕ್ಕೆ ಅಪವಾದವಾಗುತ್ತದೆ. ಆದರೆ, ಹಾಳಾದ್ದು, ಇದು ಪ್ರಜಾಪ್ರಭುತ್ವ! ನಮ್ಮ ಪ್ರಧಾನಿ ಮತ್ತು ಅವರ ಸರ್ಕಾರ ಆಗಾಗ ತಾವು ತೀರ ಚಿಂತಿತರಾಗಿರುವರೆಂದು ಪ್ರದರ್ಶಿಸಬೇಕು! ಮಾರ್ಗವೇನು ಎನ್ನುವ ಈ ನಾಟಕೀಯ ಚಿಂತನೆ ಪ್ರಾರಂಭವಾಗಿ ಎರಡು ತಿಂಗಳ ಮೇಲೇ ಆಯಿತು. ಇನ್ನೆಲ್ಲ ಮೂರು ವಾರದಲ್ಲಿ ಬೆಲೆ ಇಳಿಯುತ್ತದೆ ಎಂದು ಶರದ್ ಪವಾರ್ ಹೇಳಿ ಮೂರು ತಿಂಗಳಾಗುತ್ತಾ, ಏತನ್ಮಧ್ಯೆ ನಮಗೇ ಸಾಲದ ಸಕ್ಕರೆಯನ್ನು ರಫ್ತು ಮಾಡಲು ಪರವಾನಗಿ ನೀಡುತ್ತಾರೆ. ಈಗ ಈ ಖಾತೆಯನ್ನೇ ಬಿಟ್ಟುಕೊಟ್ಟು ಕೈ ತೊಳೆದುಕೊಂಡಿದ್ದಾರೆ! ಎಲ್ಲ ವಸ್ತುಗಳ ಬೆಲೆಯನ್ನು ಪ್ರಭಾವಿಸುವ ಪೆಟ್ರೋಲ್ ಇಂಧನ ಬೆಲೆಯನ್ನು ಏರಿಸುತ್ತಲೇ ಇದ್ದಾರೆ. ಅರವತ್ತು ಲಕ್ಷದ ಮೋಟರ್ ಬೈಕ್ ಆಮದು ಮಾಡಿಕೊಳ್ಳುತ್ತಾರೆ. ಆ ಬಕಾಸುರನಿಗೆ ಪೆಟ್ರೋಲೂ ತರಿಸುತ್ತಾರೆ. ಅದಕ್ಕಾಗಿ ಮುಂಚಿತವಾಗಿಯೇ ಯೋಜನೆ ಯೋಚನೆ ಮಾಡುತ್ತಾರೆ. ಆದರೆ ಬರಲಿರುವ ದೇಶದ ಆಹಾರ ಸಮಸ್ಯೆಯನ್ನು ಮುಂದಾಗಿಯೇ ಗಮನಿಸಿ, ಅದಕ್ಕೆ ಬೇಕಾದ ಆಮದನ್ನು ಮುಂಚಿತವಾಗಿಯೇ ಮಾಡುವ, ಹಾಲಿನಂತ ಅಗತ್ಯ ವಸ್ತುಗಳಿಗೆ ಸಬ್ಸಿಡಿ ನೀಡಿ ಬೆಲೆಯನ್ನು ಕಡಿಮೆ ಇಡಿಸಲು ಇವರು ಸಿದ್ಧರಿಲ್ಲ. ವರ್ಷವೆಲ್ಲಾ ಕಾಳಸಂತೆಯ ಮೇಲೆ ನಿಗಾ ಇಡದೆ, ಬೆಂಕಿ ಹತ್ತಿದಾಗ ಬಾವಿ ತೋಡುವಂತೆ, ತೋರಿಕೆಯ ರೈಡ್ ಮಾಡುತ್ತಿದ್ದಾರೆ. ಬಡ ರೇಷನ್ ಕಾರ್ಡ್ ಸಂಸಾರಕ್ಕೆ ಅಕ್ಕಿ ಎಷ್ಟು ಕೊಡಬೇಕು, ಬೆಲೆ ಏನು ಎಂದು ತೀರ್ಮಾನಿಸಲು ಅಥವಾ ತೀರ್ಮಾನವನ್ನು ಆದಷ್ಟು ತಡಮಾಡಲು ದೊಡ್ಡ ದೊಡ್ಡ ಕಮಿಟಿಗಳು ಇವೆ. ಇವು ಯಾವುವೂ ಸಾರ್ವಜನಿಕ ಹಿತಾಸಕ್ತಿಯ ತುರ್ತು ವಿಷಯವಲ್ಲ! ಆದರೆ ವಿದೇಶೀ ಬ್ಯಾಂಕುಗಳಲ್ಲಿ ಕಳ್ಳ ಹಣ ಇಟ್ಟವರ ಹೆಸರು ಬಯಲು ಮಾಡುವುದು ಸಾರ್ವಜನಿಕ ಹಿತಾಸಕ್ತಿಗೆ ಒಳ್ಳೆಯದಲ್ಲ ಎಂದು ಸುಪ್ರೀಂ ಕೋರ್ಟಿಗೇ ಹೇಳಬಲ್ಲ ಈ ಸರ್ಕಾರದ ಆದ್ಯತೆಗಳು ಏನು ಎಂಬುದನ್ನು ಇನ್ನಾದರೂ ಮತದಾರರು ಗ್ರಹಿಸಿಯಾರೆ? ರಾಜಕೀಯವಾಗಿ ಸೋನಿಯಾ, ಕಾಂಗ್ರೆಸ್ ಪಕ್ಷವನ್ನು ಉಳಿಸಿಕೊಳ್ಳಲು ಹೆಣಗಾಡುತ್ತಾ, ಬಿಪಿಎಲ್ (ಬಡತನದ ರೇಖೆಗಿಂತ ಕೆಳಗಿರುವ) ಜನಕ್ಕೆ ನೀಡುವ ರೇಷನ್ ಕುರಿತ ತೀರ್ಮಾನವನ್ನು ಹೇಳಿದರೆ, ಅದನ್ನು ವಿಶ್ವಬ್ಯಾಂಕ್ ವಿಶ್ವ ಹಣಕಾಸು ಸಂಸ್ಥೆಯ ಪರಿಣತರೆಂಬ ಏಜೆಂಟರುಗಳು, ತಾವೇ ಚುನಾವಣೆಗೆ ನಿಲ್ಲುವ, ಗೆಲ್ಲುವ ಜವಾಬ್ದಾರಿಯೇ ಇಲ್ಲದೆ ಆದರೂ ಅಧಿಕಾರ ಚಲಾಯಿಸುವ, ನಿವೃತ್ತರಾದರೂ ನಿವೃತ್ತರಾಗಲೊಲ್ಲದ ಅರ್ಥಶಾಸ್ತ್ರ ಪರಿಣತರು ''ಆಗುವುದಿಲ್ಲ'' ಎಂದು ಹೇಳಬಲ್ಲ ಈ ಎದೆಗಾರಿಕೆಯ ಮೂಲ ಈ ದೇಶದ್ದೇ? ವಿದೇಶದ್ದೇ? ಶೇಕಡ ೧೦ರ ಆರ್ಥಿಕ ಬೆಳವಣಿಗೆ ಎಂದರೆ ಶೇಕಡ ೨೦ರ ಬಡವರ ಜೀವನದ ಬೆಲೆ ಏರಿಕೆ ಎಂದು ಪರಿಣಮಿಸುವುದು ''ಸಹಜ''ವೆನ್ನುವ ಈ ವಾದವನ್ನು ರಾಜಕೀಯವಾಗಿ ಎದುರಿಸದೆ ಇಂದಿನ ಆರ್ಥಿಕ ಬಿಕ್ಕಟ್ಟಿಗೆ ಪರಿಹಾರ ಸಿಗದು.

ಏತನ್ಮಧ್ಯೆ ಯೋಜನಾ ಮಂಡಲಿಯ ಉಪಾಧ್ಯಕ್ಷ ಮಾಂಟೆಕ್ ಸಿಂಗ್‌ಗೆ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ನಿರ್ದೇಶಕರಾಗಿ ಬಡ್ತಿಯಂತೆ. ಮುಂದಿನ ವರ್ಷ ಯಾವ ದರದಲ್ಲಿ ಜಿಡಿಪಿ ಏರುತ್ತದೆ ಎಂದು ಭವಿಷ್ಯ ನುಡಿಯಬಲ್ಲ ಪ್ರಧಾನಿ, ಮಾರ್ಚ್ ಒಳಗೆ ಹಣದುಬ್ಬರ ಶೇಕಡ ೩ಕ್ಕೆ ಇಳಿಯುತ್ತದೆ ಎಂದು ಭವಿಷ್ಯ ನುಡಿಯುವ ಪ್ರಧಾನಿ, ಈಗ ಅವರ ಅಧೀನದ ಅರ್ಥಶಾಸ್ತ್ರಿ ಅದನ್ನು ಶೇಕಡ ೬.೫ರಲ್ಲಿ ತಡೆಹಿಡಿಯುವೆನೆಂದು ಹೇಳುವ ಭವಿಷ್ಯ ಹೇಳುತ್ತಿರಲಾಗಿ, ಇದೆ ಪ್ರಧಾನಿ ಆಹಾರದ ಬೆಲೆಯ ಉಬ್ಬರ ಯಾವಾಗ ಸುಧಾರಿಸುತ್ತದೆ ಎಂದರೆ ''ನಾನೇನೂ ಜ್ಯೋತಿಷಿಯಲ್ಲ'' ಎಂದು ಹೇಳಬಲ್ಲ ಈ ಶಾಣ್ಯ ಎಲ್ಲಿಂದ ಬಂತು ಇವರಿಗೆ ? ಈ ಸರ್ಕಾರ ಗದ್ದುಗೆಯಿಂದ ಇಳಿದರೆ ಬೆಲೆ ಇಳಿಯಬಹುದೆಂದು ನಾವೇ ಭವಿಷ್ಯ ಹೇಳೋಣವೆ ? ವ್ಹಾ ! ಭಾರತ ಪ್ರಕಾಶಿಸುತ್ತಿದೆ ! ಮುಂದುವರಿಯುತ್ತಿದೆ !

* * *

ನಮ್ಮ ಪ್ರಜಾಪ್ರಭುತ್ವವನ್ನು ನಿಯಂತ್ರಿಸುವ ಶಕ್ತಿಗಳು ವಾಣಿಜ್ಯ ಲೋಕದಲ್ಲಿ ಹೇಗೋ ಹಾಗೆಯೇ ರಾಜಕೀಯದಲ್ಲೂ ತಮ್ಮ ದೊಡ್ಡಣ್ಣನ ಅಧ್ಯಕ್ಷೀಯ ಮತ್ತು ಎರಡು ಪಕ್ಷಗಳ ವ್ಯವಸ್ಥೆಯನ್ನು ಮೆಚ್ಚಿಕೊಂಡಿವೆ. (ಅಲ್ಲಿ ಎರಡೇ ಪಕ್ಷ ಇರುವುದಕ್ಕೆ ಕಾರಣಗಳು ಬೇರೆ. ಅವರ ಸಂವಿಧಾನದಲ್ಲೂ ಹಲವು ಪಕ್ಷಗಳಿಗೆ ಅವಕಾಶವಿದೆ. ಒಂದೆರಡು ಪಕ್ಷಗಳು ಇವೆ ಕೂಡ) ಇವೇ ಶಕ್ತಿಗಳು ಸಾರ್ವತ್ರಿಕವಾಗಿ ಓಟು ನೀಡುವ ಹಕ್ಕನ್ನು ಸಂವಿಧಾನ ರಚಿಸುವ ಕಾಲದಲ್ಲೇ ವಿರೋಧಿಸಿದ್ದವರು. ತದನಂತರ ರಾಜಾಜಿಯವರ ಸ್ವತಂತ್ರ ಪಕ್ಷ ಉದಯವಾದ ಕಾಲದಿಂದಲೂ ಎರಡೇ ಪಕ್ಷಗಳು ಸಾಕು, ಹೆಚ್ಚು ಪಕ್ಷಗಳು ಸರಿಯಲ್ಲವೆಂತಲೂ, ಪ್ರಾದೇಶಿಕ ಪಕ್ಷಗಳು ವಿಚ್ಛಿದ್ರಕಾರಕವೆಂದೂ ಪದೇ ಪದೇ ತಾವು ಕಟ್ಟಿ ಇಟ್ಟುಕೊಂಡ ಮಾಧ್ಯಮಗಳ ಮೂಲಕ ಪ್ರಚಾರ ಮಾಡುತ್ತಲೆ ಇವೆ. ಭ್ರಷ್ಟಾಚಾರಕ್ಕೆ ಹಲವು ಪಕ್ಷಗಳೊಡನೆ ಒಕ್ಕೂಟ ಮಾಡಿಕೊಂಡಿರುವುದು ಕಾರಣವೆಂದೂ ಈಗ ಹೇಳುತ್ತಿವೆ. ವಾಸ್ತವವೆಂದರೆ ಈ ಶಕ್ತಿಗಳಿಗೆ ಭಾರತದ ಫೆಡರಲ್ ಸ್ವರೂಪ ರುಚಿಸದು.

ಬೋಫರ್-ಲೋಫರ್ ಪ್ರಕರಣ ನಡೆದಾಗ ಇದ್ದದ್ದೂ ಒಂದೇ ಪಕ್ಷದ ಆಡಳಿತವೆಂಬುದನ್ನು ಅವರು ಮರೆತರೆ ಜನ ಮರೆತಾರೆ ? ಗುಜರಾತಿನ ''ಮೋದಿಯ ಮಾದರಿ''ಯನ್ನು ಹೊಗಳುವಾಗ, ಚೀನಾದ ಮುನ್ನಡೆಯನ್ನು ವಿಶ್ಲೇಷಿಸುವಾಗ ವಾಣಿಜ್ಯ ಛೇಂಬರುಗಳ ಗಾಯಕರು ಆಗಾಗ್ಗೆ ಸೂಕ್ಷ್ಮವಾಗಿ ನಮ್ಮಲ್ಲಿ ಸರ್ವಾಧಿಕಾರವಿದ್ದಿದ್ದರೆ (ಅದು ತಮ್ಮದೇ ಸರ್ವಾಧಿಕಾರವೆಂದು ಹೇಳಬೇಕೇನು ?!) ತಾವೂ ಅದೇ ರೀತಿ ಬೆಳೆಯಬಹುದಿತ್ತು ಎನ್ನುವ ಇಂಗಿತವನ್ನು ಹೊರಗೆಡಹುತ್ತಾರೆ. ಸೈನಿಕಶಾಹಿ ಬೇಕೆಂದು ಹೇಳಿದ ಆ ಭಯೋತ್ಪಾದಕ ಪುರೋಹಿತನ ವಾದ ಅವನೊಬ್ಬನದೆ ಇರಲಾರದು. ಅಂದರೆ ಈ ದೇಶದ ಪ್ರಜಾಸತ್ತಾತ್ಮಕ ಪ್ರಗತಿಶೀಲ ಶಕ್ತಿಗಳು ಎಷ್ಟೊಂದು ಜವಾಬ್ದಾರಿಯಾಗಿ, ಎಚ್ಚರಿಕೆಯಿಂದ ಇರಬೇಕು ಎನ್ನುವುದು ತಿಳಿದೀತು. ರಾಜಕೀಯ ಪಕ್ಷಗಳು ಏಕಪಕ್ಷೀಯವಾಗಿಯೇ ಆಗಲಿ, ಅಥವಾ ಒಕ್ಕೂಟದ ಮೂಲಕವೆ ಆಗಲಿ ಜನತೆಯ ಮುಂದೆ ತಮ್ಮ ಕನಿಷ್ಠ ಸಾಮಾನ್ಯ ಕಾರ್ಯಕ್ರಮಗಳನ್ನು ಇಟ್ಟು ಪ್ರಚಾರ ಮಾಡಬೇಕು; ಹಾಗೂ ಮುಂದೆ ಅಧಿಕಾರದಲ್ಲಿರಲಿ, ವಿರೋಧ ಪಕ್ಷದಲ್ಲಿರಲಿ, ತಮ್ಮ ರಾಜಕೀಯವನ್ನು ಆ ಕಾರ್ಯಕ್ರಮಗಳ ಸುತ್ತ ನಡೆಸಬೇಕು. ಪಕ್ಷಗಳನ್ನು ಕಾನೂನುಬದ್ಧವಾಗಿ ಅವರು ಮತದಾರರಿಗೆ ನೀಡುವ ಆಶ್ವಾಸನೆಗಳಿಗೆ ಅವರನ್ನು ಬದ್ಧರನ್ನಾಗಿಸುವ ಸಾಧ್ಯತೆಯನ್ನು ನಾವು ಈಗ ಪರಿಶೀಲಿಸಬೇಕು. ಅಧ್ಯಕ್ಷ ಮಾದರಿ ಮತ್ತು ಎರಡು ಪಕ್ಷಗಳ ಆಡಳಿತವೆಂಬ ಏಕವರ್ಗ ಸರ್ವಾಧಿಕಾರದ ವಿರುದ್ಧ ನಿರಂತರ ಹೋರಾಟ ಅಗತ್ಯ. ಹಾಗೆಯೇ ಇಂದಿನ ಪರಿಸ್ಥಿತಿಗೆ ಡಿಎಂಕೆ ಅಥವಾ ತೃಣಮೂಲ ಅಥವಾ ರಾಷ್ಟ್ರೀಯ ಕಾಂಗ್ರೆಸ್ ಹೀಗೆ ತಮ್ಮನ್ನು ಬಿಟ್ಟು ಬೇರೆಲ್ಲರೂ ಕಾರಣವೆನ್ನುವ ವಾದ ತಿರಸ್ಕರಿಸಬೇಕು. ಸಂಪುಟ ಮತ್ತು ಅದರ ಪ್ರಧಾನಿ ಭ್ರಷ್ಟಾಚಾರವೂ ಸೇರಿದಂತೆ ಎಲ್ಲದಕ್ಕೂ ಜವಾಬ್ದಾರರು. ಪ್ರಜೆಗಳು ಯಾವುದೇ ಪಕ್ಷಕ್ಕೂ ಬಹುಮತ ನೀಡದೆ, ಇವರ್‍ಯಾರೂ ಆಳಲು ಅರ್ಹರಲ್ಲವೆಂದು ಸಾರಿ ಹೇಳಿದೆ. ಅವರೇ ಗದ್ದುಗೆಯಿಂದ ಇಳಿಯದಿದ್ದರೆ ಪ್ರಜೆಗಳೇ ಆ ಕೆಲಸ ಮಾಡುತ್ತಾರೆ.

## ಖಾಸಗಿ ವಿದ್ಯಾಸಂಸ್ಥೆಗಳಿಗೆ ಕಡಿವಾಣ

ಕರ್ನಾಟಕದಲ್ಲಿ ಖಾಸಗೀ ಶಿಕ್ಷಣ ಸಂಸ್ಥೆಗಳದೇ ಪಾರುಪತ್ಯ, ಉನ್ನತ ಶಿಕ್ಷಣವಾಗಲಿ, ಶಾಲಾಶಿಕ್ಷಣವಾಗಲಿ ಅವರು ಹಾಕಿದ್ದೇ ಲಕ್ಷ್ಮಣರೇಖೆ, ಅವರು ನೀಡುವ ಶಿಕ್ಷಣ ಒಂದು ದೊಡ್ಡ ವ್ಯಾಪಾರ, ಒಂದು ದೊಡ್ಡ ಧಂಧೆ. ರಾಜ್ಯ ಸರಕಾರ ಇಂಥ ಶಿಕ್ಷಣ ಸಂಸ್ಥೆಗಳನ್ನು ನಿಯಂತ್ರಣದಲ್ಲಿರಿಸಿಕೊಳ್ಳುವುದರಲ್ಲಿ ಸತತವಾಗಿ ವಿಫಲವಾಗಿದೆ. ಇದಕ್ಕೆ ಎರಡು ಕಾರಣ – ಸರಕಾರ ಕೈಗೊಂಡಂಥ ಕ್ರಮಗಳೂ ತುಂಬಾ ದುರ್ಬಲವಾದುವು, ಇನ್ನೊಂದು ಆಳವಾಗಿ ಬೇರೂರಿರುವ ಪಟ್ಟಭದ್ರ ಹಿತಾಸಕ್ತಿಗಳು. ಹೆಚ್ಚಿನ ಖಾಸಗಿ ಶಾಲೆಗಳು ರಾಜಕೀಯವಾಗಿ ಪ್ರಭಾವಿಶಕ್ತಿಗಳ, ಶಾಸಕರ, ಸಚಿವರ ಸುಪರ್ದಿನಲ್ಲೇ ಇರುವುದರಿಂದ ಸರಕಾರ ಈ ಶಾಲೆಗಳ ಸಂಬಂಧದಲ್ಲಿ ಮಧ್ಯೆ ಪ್ರವೇಶಿಸಲು ಹಿಂಜರಿಯುತ್ತದೆ. ಹಾಗಾಗಿ ಅನೇಕ ಬಾರಿ ವಿವಾದಗಳು ನ್ಯಾಯಾಲಯದ ಮೆಟ್ಟಿಲೇರಿವೆ. ರಾಜ್ಯ ಹೈಕೋರ್ಟ್ ಮತ್ತು ಸುಪ್ರೀಮ್ ಕೋರ್ಟಿನಲ್ಲಿ ಹಲವಾರು ಪ್ರಕರಣಗಳು ದಾಖಲಾಗಿವೆ. ಖಾಸಗಿ ಶಿಕ್ಷಣ ಸಂಸ್ಥೆಗಳು ರಾಜ್ಯದಲ್ಲಿ ಸಮೃದ್ಧವಾಗಿ ಬೆಳೆಯಲು ಪೋಷಕರು ಕಾರಣ. ಇಂಗ್ಲಿಷ್ ಮಾಧ್ಯಮದ ವ್ಯಾಮೋಹ. ವೃತ್ತಿಶಿಕ್ಷಣದಲ್ಲಿ ಕ್ಯಾಪಿಟೇಶನ್ ಫೀಯನ್ನು ತಂದ ಮೊದಲ ರಾಜ್ಯ ಕರ್ನಾಟಕ. ಅದು ಕಾಯಿದೆ ಪ್ರಕಾರ ಸಿದ್ಧವಾಗಿದ್ದರೂ ನಾನಾ ಬಗೆಯಲ್ಲಿ ಇಂದೂ ರೂಢಿಯಲ್ಲಿದೆ. ಅದು ಪ್ರತಿಷ್ಠಿತ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೂ ಡೊನೇಶನ್ ರೂಪದಲ್ಲಿ ವಿಸ್ತರಿಸಿದೆ. ಮತ್ತೆ ವಸೂಲಿ ಮಾಡುವ ಶಿಕ್ಷಣ ಶುಲ್ಕ ಯಾವತ್ತೂ ದುಬಾರಿ. ಈ ಸಂಸ್ಥೆಗಳಿಂದ ರಾಜ್ಯ ಸರಕಾರದ ಕಾನೂನುಗಳಿಂದ ನುಣುಚಿಕೊಳ್ಳಲು ಸುಲಭವಾದ ವಿಧಾನ ಸಿಬಿಎಸ್‌ಇ ಮತ್ತು ಐಸಿಎಸ್‌ಇ ಬೋರ್ಡುಗಳಿಗೆ ನೋಂದಾಯಿಸಿಕೊಳ್ಳುವುದು. ಖಾಸಗೀ ಶಿಕ್ಷಣ ಸಂಸ್ಥೆಗಳು ಮಾತೃಭಾಷೆ ಕನ್ನಡಕ್ಕೆ ಕಿಂಚಿತ್ತೂ ಗೌರವ ನೀಡದೆ, ಮಕ್ಕಳಿಗೆ ಕಲಿಸದೆ ಇದ್ದರೂ ಕನ್ನಡದ ನೆಲ, ಜಲ, ವಿದ್ಯುಚ್ಛಕ್ತಿ ಇವುಗಳನ್ನು ಸರಕಾರದಿಂದ ರಿಯಾಯಿತಿ ದರದಲ್ಲಿ ಪಡೆದುಕೊಳ್ಳುವುದು ತಮ್ಮ ಹಕ್ಕೆಂದು ಭಾವಿಸಿಕೊಂಡಿವೆ.




ಈಗ ಇದಕ್ಕೆಲ್ಲ ರಾಜ್ಯ ಹೈಕೋರ್ಟ್ ಕಡಿವಾಣ ಹಾಕಿದೆ. ಕೆಲ ದಿನಗಳ ಹಿಂದೆ ರಾಜ್ಯ ಹೈಕೋರ್ಟ್ ನೀಡಿರುವ ತೀರ್ಪು ರಾಜ್ಯದಲ್ಲಿರುವ ಕೇಂದ್ರೀಯ ಸಂಸ್ಥೆಗಳಿಗೆ ಸೇರ್ಪಡೆಯಾಗಿರುವ ಎಲ್ಲ ಖಾಸಗಿ ವಿದ್ಯಾಸಂಸ್ಥೆಗಳೂ ಕರ್ನಾಟಕ ವಿದ್ಯಾಭ್ಯಾಸ ಕಾಯಿದೆಯಡಿ ಬರುತ್ತವೆ. ಹಾಗಾಗಿ ಈ ಶಾಲೆಗಳು ಯದ್ವಾತದ್ವಾ ಶಿಕ್ಷಣ ಶುಲ್ಕವಿಧಿಸುವಂತಿಲ್ಲ ಎಂದು ಸ್ಪಷ್ಟಪಡಿಸಿದೆ. ಈ ವರ್ಷ ಖಾಸಗೀ ಶಾಲೆಗಳು ಶಿಕ್ಷಣ ಶುಲ್ಕವನ್ನು ವಿಪರೀತ ಹೆಚ್ಚಿಸಿವೆ. ಇದರ ವಿರುದ್ಧವಾಗಿ ಹಲವು ಪೋಷಕರ ಸಂಘಗಳು ಹೈಕೋರ್ಟಿನ ಮೊರೆಹೋಗಿದ್ದುವು. ರಾಜ್ಯಸರಕಾರ ೧೯೯೮ರಲ್ಲಿ ಶಿಕ್ಷಣಕಾಯಿದೆಗೆ ತಿದ್ದುಪಡಿ ತಂದು ರಾಜ್ಯಶಿಕ್ಷಣ ಇಲಾಖೆ ಖಾಸಗಿ ಶಾಲೆಗಳ ಫೀ ವ್ಯವಹಾರಗಳಲ್ಲಿ ಮಧ್ಯೆ ಪ್ರವೇಶಿಸದಂತೆ ಮಾಡಿತ್ತು. ರಾಜ್ಯ ಹೈಕೋರ್ಟ್ ತನ್ನ ತೀರ್ಪಿನಲ್ಲಿ ರಾಜ್ಯ ಸರಕಾರ ತಂದ ತಿದ್ದುಪಡಿ ಸಂವಿಧಾನಬದ್ಧವಾಗಿಲ್ಲ ಎಂದು ತಳ್ಳಿಹಾಕಿದೆ. ನ್ಯಾಯಾಲಯದ ಈ ತೀರ್ಪನ್ನು ವಿದ್ಯಾರ್ಥಿಗಳ ಪೋಷಕರು ಸ್ವಾಗತಿಸಿದ್ದಾರೆ. ವಿವಾದ ಸುಪ್ರೀಮ್ ಕೋರ್ಟು ಮೆಟ್ಟಲೇರುವುದು ಖಚಿತ. ಅದೇನೇ ಇರಲಿ ಸರಕಾರ ಈಗಾಲಾದರೂ ಎಚ್ಚೆತ್ತು ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ನಿಯಂತ್ರಿಸಲು ಸೂಕ್ತಕ್ರಮ ಕೈಗೊಳ್ಳುವುದು ಅಗತ್ಯ. ಈಗಾಗಲೇ ವಿದ್ಯಾರ್ಥಿಗಳ ನೋಂದಣಿ ಕುರಿತು ಕೇಂದ್ರದ ವಿದ್ಯಾಭ್ಯಾಸ ಹಕ್ಕು ಕಾಯಿದೆಯನ್ನು ಖಾಸಗೀ ವಿದ್ಯಾಸಂಸ್ಥೆಗಳು ಎದುರಿಸುತ್ತಿವೆ. ಕರ್ನಾಟಕ ಸರಕಾರದಿಂದ ಈಗಿನ ಪರಿಸ್ಥಿತಿಯಲ್ಲಿ ದಿಟ್ಟ ಕ್ರಮ ನಿರೀಕ್ಷಿಸಲು ಸಾಧ್ಯವೆ ?




### ಡಿಸೆಂಬರ್ ಸಂಚಿಕೆ

೭೭ನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ ಪ್ರೊ|| ಜಿ. ವೆಂಕಟಸುಬ್ಬಯ್ಯನವರ ಆಕರ್ಷಕ ನಗುಮುಖದ ಮುಖಪುಟದೊಂದಿಗೆ ಬಂದ ಡಿಸೆಂಬರ್ - ೨೦೧೦ರ ಕಡೆಯ ಸಂಚಿಕೆ ಎಂದಿನಂತೆ ಮಾಹಿತಿಗಳ ಆಗರವಾಗಿತ್ತು. ಸಂಚಿಕೆ ಬಂದೊಡನೆ ಮೊದಲು ನಾವು ಓದುವುದು ಈ ತಿಂಗಳು ಮತ್ತು ಸಂಪಾದಕೀಯ ಲೇಖನಗಳನ್ನು. ಏಕೆಂದರೆ ಪ್ರಚಲಿತ ವಿಷಯಗಳನ್ನೊಳಗೊಂಡಿರುತ್ತದೆ. 'ಶಿವನ ಮಾರುವ ಜನರ ನಡುವೆ' ಈ ಶೀರ್ಷಿಕೆಯಡಿಯಲ್ಲಿ ಪ್ರೊ|| ಜಿ. ಎಚ್. ಹನ್ನೆರಡುಮಠ ಅವರ ಕವನ ಸರಳವಾಗಿ ಅರ್ಥಗರ್ಭಿತವಾಗಿತ್ತು. 'ವಾಸ್ತುದೇವತೆ ನಿದ್ದೆಗಣ್ಣಲ್ಲಿರುತ್ತಾ?' ಎಂಬ ವಸುಮತಿ ಉಡುಪ ಅವರ ಲೇಖನ ವಿಶಿಷ್ಟ ರೀತಿಯಲ್ಲಿ ಓದಿಸಿಕೊಂಡು ಹೋಯಿತು. 'ಹೊಸ ಓದು' ಅಂಕಣದಲ್ಲಿ ಹಲವು ನವಪುಸ್ತಕಗಳ ಕಿರುಪರಿಚಯ ಸಾಹಿತ್ಯಪ್ರಿಯರಾದ ನಮಗೆ ಉಪಯುಕ್ತ ಮಾಹಿತಿಯನ್ನು ನೀಡುತ್ತಿದೆ, 'ಲಾವಣಿ ಸಾಹಿತ್ಯದಲ್ಲಿ ನೀರಾವರಿ ವ್ಯವಸ್ಥೆ' (ಡಾ|| ವೀರೇಶ ಬಡಿಗೇರ) ಮಾಹಿತಿದಾಯಕ. 'ನೀರು ಕಂಡಲ್ಲಿ ಮುಳುಗುವರಯ್ಯಾ, ಮರವ ಕಂಡಲ್ಲಿ ಸುತ್ತುವರಯ್ಯ'. 'ತಿಳಿವು' ಅಂಕಣದಲ್ಲಿ ಈ ಬಗ್ಗೆ ಬರೆದ ಡಾ|| ಮಲ್ಲಿಕಾರ್ಜುನ ಕುಂಬಾರ ಅವರ ಲೇಖನ ಮಾರ್ಮಿಕವಾಗಿತ್ತು. ವಿಶ್ವಕಥಾಕೋಶದಂತಹ ಅತ್ಯದ್ಭುತ ಪುಸ್ತಕ ಸಂಪುಟಗಳನ್ನು ಓದುಗ ಲೋಕಕ್ಕೆ ನೀಡುತ್ತಿರುವ ನವಕರ್ನಾಟಕ ಪ್ರಕಾಶನದ ಸಂಸ್ಥೆಯವರ ಒಂದಲ್ಲ ಒಂದು ರೀತಿಯ ರಿಯಾಯಿತಿ ದರದಲ್ಲಿ ಪುಸ್ತಕ ಗಳನ್ನು ಉಡುಗೊರೆಯನ್ನಾಗಿ ನೀಡುತ್ತಾ ಸಾಹಿತ್ಯಸಿಂಚನ ಉಣಬಡಿಸುತ್ತಿದೆ. ಅಂತೆಯೇ ಪ್ರೊ|| ಜಿ. ವೆಂಕಟಸುಬ್ಬಯ್ಯ ಅವರ 'ಇಗೋ ಕನ್ನಡ' ಹಾಗೂ 'ಎರವಲು ಪದಕೋಶ' ವನ್ನು ರಿಯಾಯಿತಿ ದರದಲ್ಲಿ ಕೊಡುತ್ತಿರುವುದು ಸಾಹಿತ್ಯ ಪ್ರಿಯರಿಗೆ ಹೆಮ್ಮೆಯ ಸಂಗತಿ. ಸಾಹಿತ್ಯ ಸೇವೆ ಹೀಗೆಯೇ ನಿರಂತರವಾಗಿ ನಡೆಯಲಿ.

ಮೈಸೂರು **ಕಾಳೀಹುಂಡಿ ಶಿವಕುಮಾರ**

*ಹೊಸತು, ಹೊಸತೇನಿದೆ ಹೇಳಿ ಗೆಳತಿ ಈ ಬಾಳಿನಲಿ*
*ಈ ಬೆಳಕಿನಲಿ*
*ಇಂದು ನಿನ್ನೆಯದೇ ಪಡಿನೆಳಲು ನಾಳೆ ಮತ್ತದೇ ಗೋಳು*
*ಎಳೆ ಬೆಳಗಿನಲಿ ಕತ್ತಲನು ಸೀಳುತ್ತ ಗಣಿಯೊಳಗೆ*
*ಇಳಿದರಿಗೆ*
*ತಲೆಯ ಮೇಲೆ ಸೈಜುಕಲ್ಲು ಮರಳ ಬಾಣಲೆ ಜೆಲ್ಲಿಕಲ್ಲು*
*ಹೊತ್ತು ಹತ್ತಿ ಇಳಿದು ಬತ್ತಿಹೋದ ಬಡಜೀವಿಗಳಿಗೆ*
*ಬಿರುಬಿಸಿಲ ಬೇಗೆಯಲಿ ಬಿರುಕೊಡೆದ ಒಣ ಹೊಲಗಳಿಗೆ*
*ನೇಗಿಲುಗಳ ಗೆರೆ ಹಾಕುತ್ತ ಉರಿದುರಿದು*
*ಬರಿದಾದವರಿಗೆ*
*ಕಸ ಕೊಳೆಯು ಕಲಸಿದ ರಾಶಿ ರಾಶಿ ತಿಪ್ಪೆಯನು ಎತ್ತಿತ್ತಿ*
*ಸುರಿದವರಿಗೆ*
*ಬಿಕ್ಕಳಿಸುವ ಬುರುಕಗಳಿಗೆ, ಹಾಡಲಾರದ ಹಕ್ಕಿಗಳಿಗೆ*
*ಕದವಿಲ್ಲದ ಜೈಲುಗಳಿಗೆ, ಅಂಬಿಗನಿಲ್ಲದ ದೋಣಿಗಳಿಗೆ*
*ಮಳೆಯಲಿ ತೊಯ್ದು ಜೋಪಡಿಯೊಳಗಿನ*
*ಮಿಣುಕು ಹಣತೆಗಳಿಗೆ*
*ಹೊಸತು ಹೊಸತೇನಿದೆ ಹೇಳಿ ಗೆಳತಿ ಈ ಇಂಥವರ*
*ನಾಳೆಗಳಲಿ.*

**ಐ. ಆರ್. ಪ್ರಮೋದ್**




ಡಿಸೆಂಬರ್ - ೨೦೧೦ರ 'ಹೊಸತು' ಕನ್ನಡ ನುಡಿ ರತ್ನ ಪ್ರೊ|| ಜಿ. ವೆಂಕಟಸುಬ್ಬಯ್ಯನವರ ಮುಖಪುಟ ದೊಂದಿಗೆ ಶೋಭಿಸುತ್ತಿದೆ.

ಒಬಾಮ ಮೋಹಕ ಮಾತುಗಳ ಒಳಮರ್ಮದ ಕುತಂತ್ರವನ್ನು ಅರಿಯದೇ ಇದ್ದಲ್ಲಿ ನಿಜವಾಗಿ ಭಾರತವೇ ಆರ್ಥಿಕ ದಂಡಯಾತ್ರೆಯನ್ನು ಅನುಭವಿಸಬೇಕಾಗುತ್ತದೆ. 'ಜಿ-೨'ರ ಕಲ್ಪನೆ ಅಚ್ಚರಿ ಮೂಡಿಸಿತು. ಅದು ವಾಸ್ತವ ಎಂಬುದು ಬೆಚ್ಚಿಬೀಳಿಸುವ ಸತ್ಯ.

'ಗೊಂದಲಪುರದಲ್ಲಿ ಇಸ್ಪಾಸ್ ಮತ !' ನಮ್ಮ ಪ್ರಸಕ್ತ ರಾಜಕೀಯ ಸನ್ನಿವೇಶದ ವಿಡಂಬನೆಯೇ ಸರಿ. ಈ ಲೇಖನ ತಿಳಿಹಾಸ್ಯದ ಜೊತೆಗೆ ಓದುಗರಲ್ಲಿ ಜಿಜ್ಞಾಸೆ ಮೂಡಿಸುತ್ತದೆ.

ಈ ಸಂಚಿಕೆಯ 'ಕುಟ್ಟುಂಡಿ', 'ಅಂದಿನಿಂದಿಂದಿಗೂ... ಮುಂದಿಗೂ', 'ವಾಸ್ತುದೇವತೆ ನಿದ್ದೆಗಣ್ಣಲ್ಲಿರುತ್ತಾ?', 'ಗಂಗವ್ವ-ಗೌರವ್ವ ಜೂಜನಾಡ್ಯಾರೆ' ಎಲ್ಲವೂ ಸ್ತ್ರೀ-ಸಂವೇದನೆಯ ಮಾರ್ಗವನ್ನು ಮನಮುಟ್ಟುವಂತೆ ಬಿಚ್ಚಿಟ್ಟಿವೆ. 'ಕುಟ್ಟುಂಡಿ' ಕಥೆಯು ತನ್ನ ಸಕಾಲಿಕ ನಿಲುವನ್ನು ಸೊಗಸಾಗಿ ಪ್ರತಿಪಾದಿಸಿದೆ. ಸಂಘರ್ಷದ ಈ ಬದುಕಿನಲ್ಲಿ ಸಂತೃಪ್ತಿಯ ಹಾದಿಯನ್ನು ಕತೆಗಾರರು ಓದುಗರಿಗೆ ತೋರಿಸಿ ಕೊಡುವಲ್ಲಿ ಸಫಲರಾಗಿದ್ದಾರೆ.

ಭೂಮಿಯ ಸಂರಕ್ಷಣೆ ಅನಿವಾರ್ಯವಾಗಿದ್ದು, ಈ ದಿಶೆಯಲ್ಲಿ ಮಾನವ ಜನಾಂಗ ಇನ್ನಾದರೂ ಎಚ್ಚೆತ್ತು ಕೊಳ್ಳಬೇಕಿದೆ.

ಒಟ್ಟಾರೆ 'ಹೊಸತು' ಸೊಗಸಾಗಿದೆ. ಜ್ಞಾನದೀವಿಗೆಯಾಗಿ ಸದಾ ಕಂಗೊಳಿಸಲಿ. ಧನ್ಯವಾದಗಳು.

ಮಂಡ್ಯ **ಎಸ್. ಶ್ರೀಧರಮೂರ್ತಿ**

ಸುಮಾರು ಒಂದು ದಶಕದ ಸಮಯದಿಂದಲೂ ತಮ್ಮ ಹಳತಾಗದ 'ಹೊಸತು' ಮಾಸಪತ್ರಿಕೆಯನ್ನು ಕೊಂಡು, ಓದಿ, ಆನಂದಿಸುತ್ತಾ ಬಂದಿದ್ದೇನೆ. ವಾರ್ಷಿಕ ವಿಶೇಷ ಸಂಚಿಕೆಯಂತೂ ರಸದೌತಣವೇ ಸರಿ. ಜಾಹೀರಾತುಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡದೆ, ಪ್ರತಿಯೊಂದು ಸಂಚಿಕೆಯಲ್ಲಿಯೂ ಅರ್ಥಪೂರ್ಣವಾದ ಸಂಪಾದಕೀಯವನ್ನೂ, ಹಲವಾರು ಆಲೋಚನಾ ಪೂರ್ವಕವಾದ ಲೇಖನಗಳನ್ನೂ ಅನೇಕ ಗಣ್ಯರೊಡನೆ ವೈಚಾರಿಕ ಸಂದರ್ಶನಗಳನ್ನು, ಮನಮುಟ್ಟುವ ಕಥೆ, ಕವನಗಳನ್ನೂ, ಕೆಲವು ಅಂಕಣಗಳನ್ನೂ ಉಣಿಸುತ್ತಾ ಬಂದಿದ್ದೀರಿ.

ಆದರೆ ತಮ್ಮ ಪತ್ರಿಕೆಯಲ್ಲಿ ಪ್ರಕಟವಾಗುವ ವ್ಯಂಗ್ಯಚಿತ್ರಗಳೂ, ಚುಟುಕಗಳೂ ಅಷ್ಟೇನೂ ಹೆಚ್ಚಿನ ಗುಣಮಟ್ಟದವಾಗಿರುವುದಿಲ್ಲವೆಂದು ಎನಿಸುತ್ತವೆ. ಒಳ್ಳೆಯ ವಸ್ತುವಿನ ಅಭಾವವೂ ಬಹುಶಃ ಇದಕ್ಕೆ ಕಾರಣ ಇರಬಹುದು. ಉಳಿದೆಲ್ಲ ವಿಷಯಗಳಲ್ಲಿ ಅಷ್ಟೊಂದು ಮುತುವರ್ಜಿ ವಹಿಸಿ, ಗುಣಮಟ್ಟಕ್ಕೆ ಪ್ರಥಮ ಆದ್ಯತೆ ಕೊಟ್ಟಿರುವ ತಾವು, ಈ ನಿಟ್ಟಿನಲ್ಲಿ ಏಕೆ ಅನಾಸಕ್ತ ರಾಗಿದ್ದೀರೋ ತಿಳಿಯದು.

ಒಳ್ಳೆಯ ಹಾಸ್ಯ, ವ್ಯಂಗ್ಯ ಭರಿತ ಶಬ್ದಗಳೊಂದಿಗೆ ನೋಡಲು ಕಣ್ ತಣಿಯುವ ಚಿತ್ರವಿದ್ದರೆ ಮಾತ್ರ ಅದು ಉತ್ತಮ ಮಟ್ಟದ ವ್ಯಂಗ್ಯ ಚಿತ್ರವಾಗಬಹುದೆಂಬುದು ಎಲ್ಲರಿಗೂ ತಿಳಿದ ವಿಷಯವೇ. ಗದ್ಯ ರೂಪದಲ್ಲಿರುವ ಒಂದೆರಡು ವಾಕ್ಯಗಳನ್ನು ಮನಬಂದಲ್ಲಿ ಕತ್ತರಿಸಿ ಹಲವಾರು ಸಾಲುಗಳಲ್ಲಿ ಬರೆದುಬಿಟ್ಟರೆ ಅದು ಚುಟುಕವಾಗಲೀ, ಕವನವಾಗಲೀ ಆಗಿಬಿಡುವುದಿಲ್ಲ. ಆದರೆ ಈಚೆಗೆ ತಮ್ಮ ಪತ್ರಿಕೆಯಲ್ಲಿ ಪ್ರಕಟವಾಗುವ ಚುಟುಕಗಳು (ಸಿ.ಪಿ.ಕೆ.ಯವರ ಚುಟುಕಗಳನ್ನೊಳಗೊಂಡು) ಕಂಡಲ್ಲಿ ತುಂಡರಿಸಿದ ಗದ್ಯದಂತೆ ಇರುತ್ತವೆ. ದಿನಕರ ದೇಸಾಯಿ, ದುಂಡಿರಾಜ್ ಮುಂತಾದ ಗಣ್ಯರ ಚುಟುಕಗಳನ್ನು ಆಸ್ವಾದಿಸಿದ ಕನ್ನಡ ಪ್ರೇಮಿಗಳಿಗೆ ಈ ಚುಟುಕಗಳು ನಿರಾಸೆಯನ್ನು ತರುವುದು ಸಹಜ. ಈ ದಿಸೆಯಲ್ಲಿ ತಮ್ಮ ಗಮನವು ಹರಿಯುವುದೆಂದು ಆಶಿಸೋಣವೇ ?

ಸಿಕಂದರಾಬಾದ್ **ಡಿ. ಟಿ. ಲೋಹಿತ್**

### ಸಂಸದರು ೬೦ಕ್ಕೆ ನಿವೃತ್ತಿ ಹೊಂದಿಬಿಡಲಿ

ಸಂಸದರೂ ಸಹ ತಮಗೆ ಮಾಸಿಕವೇತನ, ಭತ್ಯೆಗಳನ್ನು ಹೆಚ್ಚಿಸಬೇಕೆಂದು ಆಗ್ರಹಿಸಿ ಹೋರಾಡಿ ಯಶಸ್ವಿಯಾಗಿದ್ದಾರೆ. ಲೋಕಸಭೆಯಲ್ಲಿ ಈ ವಿಷಯದಲ್ಲಿ ಮಾತ್ರ ಪಕ್ಷಾತೀತವಾಗಿ, ಜಾತ್ಯತೀತವಾಗಿ ಬೇಡಿಕೆಯನ್ನು ಬೆಂಬಲಿಸಿದ್ದಾರೆ.

ಈದ್ಗಾ, ಬಾಬಾಬುಡನ್‌ಗಿರಿ, ಅಯೋಧ್ಯ ಘಟನೆಗಳಲ್ಲಿ ಬಾರದ ಸೌಹಾರ್ದತೆ, ದೇಶದ ಅಭಿವೃದ್ಧಿಯಲ್ಲಿ ಕಾಣದ ಏಕತೆ, ಕೇವಲ ಭತ್ಯೆ ಹೆಚ್ಚಿಸಿಕೊಳ್ಳುವಲ್ಲಿ ಮಾತ್ರ ಸಂಸದರು ಒಂದಾಗಿರುವುದನ್ನು ಜನಸಾಮಾನ್ಯರು

ಗಂಭೀರವಾಗಿ ಗಮನಿಸುತ್ತಿದ್ದಾರೆ. ಬೆಲೆ ಏರಿಕೆಯ ಹಿನ್ನೆಲೆಯಲ್ಲಿ ವೇತನ ಭತ್ಯೆಗಳನ್ನು ಹೆಚ್ಚಿಸಿಕೊಳ್ಳುವುದು ಅವರ ನ್ಯಾಯಸಮ್ಮತ ಬೇಡಿಕೆ, ಇದು ಪ್ರಜಾಸತ್ತಾತ್ಮಕ ಹಕ್ಕು ಕೂಡ. ಆದರೆ ಕೇವಲ ಹಕ್ಕು ಚಲಾಯಿಸುವ ಇವರು ಕಿಂಚಿತ್ತಾದರೂ ಕರ್ತವ್ಯ ದಕ್ಷತೆ ಮತ್ತು ಪ್ರಾಮಾಣಿಕತೆಗಳನ್ನು ಪಾಲಿಸಿದ್ದರೆ ಅವರ ಜವಾಬ್ದಾರಿಯುತ ವರ್ತನೆಯನ್ನು ಮೆಚ್ಚಬಹುದಾಗಿತ್ತು, ಹೇಳಬಹುದಾಗಿತ್ತು.

ಸರ್ಕಾರದ ಕಾರ್ಯದರ್ಶಿ ಪಡೆಯುತ್ತಿರುವ ರೂ. ೮೦,೦೦೦ ವೇತನಕ್ಕಿಂತ ಕನಿಷ್ಠ ೧ ರೂಪಾಯಿಯಾದರೂ ಹೆಚ್ಚಿಸಿಕೊಳ್ಳಬೇಕೆಂಬುವುದೇ ಸಂಸದರ ಪ್ರಮುಖ ಬೇಡಿಕೆ ಮತ್ತು ಹಠ. ಕಾರ್ಯದರ್ಶಿಯನ್ನು ಸರಿಗಟ್ಟುವ ಮತ್ತು ಈಗಾಗಲೇ ಪಿಂಚಣಿ ಪಡೆಯುವ ಸಂಸದರು ಅವರಂತೆಯೇ ಆಯ್ಕೆಯಲ್ಲಿ ಬೇಕಾಗುವ ಅರ್ಹತೆ ಮತ್ತು ನಿವೃತ್ತಿಯಲ್ಲಿ ಅನುಸರಿಸುವ ಕ್ರಮವನ್ನು ಖಂಡಿತವಾಗಿ ಅನುಸರಿಸಬೇಕಾಗುತ್ತದೆ. ೨೦೦೬ ರಿಂದೀಚೆಗಂತೂ ಪಿಂಚಣಿಯನ್ನು ನಿಲ್ಲಿಸಲಾಗಿದೆ, ಈ ಕ್ರಮಕ್ಕೂ ಇವರು ಬದ್ಧರಾಗಬೇಕಾಗುತ್ತದೆ. ಇನ್ನು ಮುಂದೆ ಯಾರೇ ಜನಪ್ರತಿನಿಧಿಗಳಾಗಬೇಕೆಂದರೆ ಕನಿಷ್ಠ ಅರ್ಹತೆಗಳನ್ನು ಹೊಂದಬೇಕಾಗುತ್ತದೆ. ಕನಿಷ್ಠ ಶಿಕ್ಷಣ, ನಿರಪರಾಧಿ ಪತ್ರ, ಆಸ್ತಿ ವಿವರ, ಸಾಮಾಜಿಕ ಸ್ಥಾನಮಾನ, ಇತ್ಯಾದಿ ವಿಷಯಗಳನ್ನು ಆಯ್ಕೆ ಪ್ರಕ್ರಿಯೆಯಲ್ಲಿ ಪರಿಗಣಿಸುವುದು ಸೂಕ್ತ ಎನಿಸುತ್ತದೆ. ಇಂತಹದೊಂದು ಕ್ರಾಂತಿಕಾರಕ ಬದಲಾವಣೆಯನ್ನು ತರಲೇಬೇಕಾಗಿದೆ. ಸರ್ಕಾರಿ ನೌಕರರಂತೆ ೬೦ ವರ್ಷಕ್ಕೆ ಜನಪ್ರತಿನಿಧಿಗಳು ಕೂಡ ಸಂಪೂರ್ಣ ರಾಜಕಾರಣದಿಂದ ನಿವೃತ್ತಿ ಹೊಂದಲೇಬೇಕಾಗುವಂತಹ ಕಾನೂನನ್ನು ಜಾರಿಗೆ ತರುವ ಅಗತ್ಯವಿದೆ.

ಕುಳಿತರೆ ಎದ್ದೇಳಲಾಗದವರು, ಮಲಗಿದರೆ ಕುಳಿತುಕೊಳ್ಳಲಾಗದವರು, ಅವೈಜ್ಞಾನಿಕ ಆಲೋಚನೆ ಹೊಂದಿದವರು, ಅನಕ್ಷರಿಯೊಬ್ಬ ಶಿಕ್ಷಣ ಮಂತ್ರಿಯಾಗುವುದು, ಎಲ್ಲದಕ್ಕೂ ಮಿಗಿಲಾಗಿ ಮಾನಸಿಕ ಸಮತೋಲನ ಕಳೆದುಕೊಂಡವರು, ಸಾಯುವವರೆಗೂ ಅಧಿಕಾರದಲ್ಲಿರಬೇಕೆಂದು ಹಂಬಲಿಸುವವರು – ಇಂಥವರಿಂದಲೇ ದೇಶದ ಪ್ರಗತಿಗೆ ಅಡ್ಡಿಯುಂಟಾಗುತ್ತದೆ. ಇವರಿಂದಾಗಿ ಯುವಕರು ಅವಕಾಶ ವಂಚಿತರಾಗುತ್ತಿದ್ದಾರೆ. ಜಗತ್ತಿನ ಓಟದಲ್ಲಿ ನಾವು ಹಿಂದುಳಿಯುತ್ತಿದ್ದೇವೆ ಎಂಬುವುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ರಾಜಕಾರಣದಲ್ಲಿ ಇದುವರೆಗೂ ಮುಂದುವರಿದವರು ಪಡೆದ ಪಿಂಚಣಿ ಹಣವನ್ನು ಸರ್ಕಾರಕ್ಕೆ ಹಿಂತಿರುಗಿಸಬೇಕು, ಮುಂದೆ ಪಡೆಯದಂತೆ ಜಾಗ್ರತಿ ವಹಿಸಬೇಕು, ಹಾಲಿ ಪ್ರತಿನಿಧಿಗಳು ನಿರಾಕರಿಸಬೇಕು.

ಸಂಸದರ ಪಕ್ಷಾತೀತ ಬಹುಬೆಂಬಲಿತ ಹೋರಾಟಕ್ಕೆ ಮಣಿದ ಕೇಂದ್ರ ಸರ್ಕಾರ ಇವರ ಮೂಲ ವೇತನವನ್ನು ೧೬,೦೦೦ ರೂ.ಗಳಿಂದ ೫೦,೦೦೦ ರೂ.ಗಳವರೆಗೆ ಏರಿಸಿದೆ. ಆದರೆ ಇವರ ಬೇಡಿಕೆ ೮೦,೦೦೧ ರೂ. ಇತ್ತು. ಕ್ಷೇತ್ರ ಭತ್ಯೆ, ಕಛೇರಿ ಭತ್ಯೆಗಳನ್ನು ತಲಾ ೨೦,೦೦೦ ರೂ. ಗಳಿಂದ ೪೦,೦೦೦ ರೂ.ಗಳಿಗೆ ಏರಿಸಲಾಗಿದೆ. ಇವರ ಬೇಡಿಕೆ ತಲಾ ೪೫,೦೦೦ ರೂ. ಇತ್ತು. ಅಂತೂ ಈಗವರು ೧ ಲಕ್ಷ ೪೦ ಸಾವಿರ ರೂ. ಪಡೆಯುವಂತಾಗಿದೆ. ಅಲ್ಲದೆ ಖಾಸಗಿ ವಾಹನ ಖರೀದಿಸುವ ಮೊತ್ತವನ್ನು ೧ ಲಕ್ಷದಿಂದ ೪ ಲಕ್ಷಕ್ಕೇರಿಸಲಾಗಿದೆ. ಸಾರಿಗೆ ವೆಚ್ಚವನ್ನು ಕಿ.ಮೀ.ಗೆ ೧೩ ರಿಂದ ೧೬ಕ್ಕೇರಿಸಲಾಗಿದೆ. ಅಷ್ಟೇ ಅಲ್ಲ, ಇವರ ಪತಿ, ಪತ್ನಿಯರು ಎಷ್ಟು ಬಾರಿಯಾದರೂ ಪ್ರಥಮ ದರ್ಜೆ ಅಥವಾ ಎಕ್ಸಿಕ್ಯೂಟಿವ್ ದರ್ಜೆಯ ರೈಲ್ವೆ ಪ್ರಯಾಣ ಮಾಡಬಹುದಾಗಿದೆ. ತುಂಬಾ ಮುಖ್ಯವಾಗಿ ಪಿಂಚಣಿಯನ್ನು ೮,೦೦೦ ರೂ.ದಿಂದ ೨೦,೦೦೦ರೂ.ಗಳಿಗೆ ಏರಿಸಲಾಗಿದೆ.

ಇಷ್ಟೇ ಅಲ್ಲದೆ, ಕರ್ನಾಟಕ ಸರ್ಕಾರವೂ ಕೂಡ ಕೆಲವು ಪ್ರತ್ಯೇಕ ಸೌಲಭ್ಯಗಳನ್ನು ನೀಡುತ್ತಿದೆ. (ಕರ್ನಾಟಕದಲ್ಲಿ ೨೮ ಸಂಸದರು) ಅವರವರ ಕ್ಷೇತ್ರದಲ್ಲಿ ಕಛೇರಿ ಹೊಂದಲು ಅವಕಾಶ, ರಾಜಧಾನಿ ಬೆಂಗಳೂರಿಗೆ ಬಂದಾಗ ವಾಸ್ತವ್ಯಕ್ಕಾಗಿ ಅತಿಥಿಗೃಹದ ಸೌಲಭ್ಯ ಇವೆ ಮತ್ತು ಸಂಚಾರಕ್ಕಾಗಿ ೩೦೦ ಲೀಟರ್‌ನಿಂದ ೫೦೦ ಲೀಟರ್‌ಗೆ ಇಂಧನ ಏರಿಕೆ ಮಾಡಿ ವಿತರಿಸಲಾಗುತ್ತಿದೆ.

ಇವೆಲ್ಲವೂ ಜನಸಾಮಾನ್ಯರಿಗೆ ಅನಗತ್ಯ ಹೊರೆಯಾಗುತ್ತಿದೆ. ಇದು ಕೇವಲ ಲೆಕ್ಕಕ್ಕೆ ಸಿಗುವ ಹಣ. ಆದರೆ ಜಗಜ್ಜಾಹೀರಾಗಿರುವ ಭ್ರಷ್ಟಾಚಾರದಿಂದ ಬರುವ ಲೆಕ್ಕ ಕೋಟಿ ಕೋಟಿ ರೂ.ಗಳನ್ನೆ ಇಡುವವರಾರು? ಮಟ್ಟ ಹಾಕುವವರಾರು? ಇವರು ಜನಪ್ರತಿನಿಧಿಗಳಾಗಿ ಕೆಲವೇ ವರ್ಷಗಳಲ್ಲಿ ದೇಶದ ಕೋಟ್ಯಧೀಶರಾಗಿಬಿಡುತ್ತಾರೆ. ಇದು ಭವಿಷ್ಯದಲ್ಲಿ ಅತ್ಯಂತ ಅಪಾಯಕಾರಿಯಾದುದು. ಆದರೂ ನಾವು ಕಂಡೂಕಾಣದಂತಿದ್ದೇವೆ. ಇಂಥವರ ಸ್ವಾರ್ಥದಿಂದ ಇಂದು ಭ್ರಷ್ಟಾಚಾರ ಮುಗಿಲು ತಲುಪಿ ತಾಂಡವವಾಡುತ್ತಿದೆ. ಲಂಚಕೊಡದೆ ಯಾವ ಕೆಲಸ ಕಾರ್ಯಗಳೂ ಆಗದಂಥ ಸ್ಥಿತಿ ಬಂದೊದಗಿದೆ. ಈ ಅವ್ಯವಸ್ಥೆಗೆ ಇವರನ್ನು ಮಾತ್ರ ಹೊಣೆಯಾಗಿಸುವುದು ಪ್ರಜಾಸತ್ತಾತ್ಮಕ ನಿಲುವಲ್ಲ, ಇದು ದೇಶದ ಸಂಪತ್ತನ್ನು ಹರಿದು ಹಂಚಿಕೊಳ್ಳುತ್ತಿರುವ ಮುಂದುವರಿದವರ ಅನಧಿಕೃತ ಧಂಧೆ, ಹಗಲು ದರೋಡೆ. ಇನ್ನು ಈ ದೇಶದ ನಿಜವಾದ ಮಾಲೀಕ, ಎಲ್ಲರಿಗೂ ಅನ್ನ ಬೆಳೆದು ಕೊಡುವ, ತಾನೇ ಅನ್ನಕ್ಕಾಗಿ ಪರದಾಡುವ ರೈತರ ಸ್ಥಿತಿ ನಿದ್ದೆಗೆಡಿಸುತ್ತದೆ ಮತ್ತು ನೀರಿಗಾಗಿ ನೀರುನೀರಾಗುವ, ಸೂರಿಗಾಗಿ ಸೊರಗಿ ಸುಣ್ಣಾಗಿರುವ ಜನಸಾಮಾನ್ಯ ಪ್ರಭುವಿನ ಕರಾಳ ಬದುಕು ಚಿಂತೆಗೆ ಹಚ್ಚುತ್ತದೆ. ಇಷ್ಟೆಲ್ಲ ನಡೆಯುತ್ತಿದ್ದರೂ ಈ ಜನಸಾಮಾನ್ಯನೇಕೆ ಸುಮ್ಮನಿದ್ದಾನೆಂಬುವುದೇ ನಿಗೂಢ. ಈ ಶೋಷಿತ ಜನಗಳ ಧ್ವನಿಯಾಗಿದ್ದ ಚಿಂತಕರು ಕೂಡ ಮೌನವಹಿಸಿರುವುದು ಯಾವ ಕಾರಣಕ್ಕಾಗಿ ಎಂಬುದು ತಿಳಿಯುತ್ತಿಲ್ಲ.

ಅಂತೂ ಇಂಥ ನರಭಕ್ಷಕ ಸ್ವಾರ್ಥಿಗಳಿಂದ ದೇಶವೀಗ ಸಂಪೂರ್ಣ ಭ್ರಷ್ಟಾಚಾರದಲ್ಲಿ ಮುಳುಗಿಹೋಗಿದೆ, ಭಯೋತ್ಪಾದನೆಯ ಕಪಿಮುಷ್ಟಿಯಲ್ಲಿದೆ. ಶ್ರೀಮಂತರೇ ಹೆಚ್ಚು ಹೆಚ್ಚು ಶ್ರೀಮಂತರಾಗುತ್ತಿದ್ದಾರೆ. ರಾಜಕಾರಣಿಗಳ ಮಕ್ಕಳೇ ಮಂತ್ರಿಗಳಾಗಿ ಆಡಳಿತ, ಸರ್ಕಾರದ ಚುಕ್ಕಾಣಿ ಹಿಡಿದುಕೊಳ್ಳುತ್ತಿದ್ದಾರೆ. ಜಮೀನ್ದಾರಿಕೆ, ಗಣಿಗಾರಿಕೆಗಳು ವಿಜೃಂಭಿಸುತ್ತಿವೆ. ಕೋಮುದಳ್ಳುರಿ ಹತ್ತಿ ಉರಿಯುತ್ತಿದೆ. ಅರಾಜಕತೆ ಜನಜೀವನವನ್ನು ಅಸ್ತವ್ಯಸ್ತಗೊಳಿಸುತ್ತಿದೆ. ಜಾತ್ಯತೀತ ರಾಷ್ಟ್ರ ಎಂದು ಹೇಳಿಕೊಳ್ಳುವ ನಮ್ಮ ಭಾರತದಲ್ಲಿ ಜಾತಿಗಳದೇ ದರ್ಬಾರು. ಇನ್ನು ಸಹಿಸಿಕೊಳ್ಳುವ ಕಾಲ ಮುಗಿದುಹೋಗಿದೆ, ಭ್ರಷ್ಟಾಚಾರದ ವಿರುದ್ಧವಂತೂ ಬಹುದೊಡ್ಡ ಆಂದೋಲನವೇ ಸಮಾರೋಪಾದಿಯಲ್ಲಿ ನಡೆಯಬೇಕಾಗಿದೆ. ಇಂಥ ಭತ್ಯೆಕೋರರ ವಿರುದ್ಧವೂ ಹೋರಾಡಿ ಸಮತೆಯ, ನೆಮ್ಮದಿಯ ರಾಷ್ಟ್ರ ಕಟ್ಟಿಕೊಳ್ಳುವುದನ್ನು ನಾವು ಬಹುದೊಡ್ಡ ಸವಾಲಾಗಿ ಸ್ವೀಕರಿಸಿ ಯಶ ಕಾಣಬೇಕಾಗಿದೆ. ಅಧಿಕಾರಶಾಹಿ ಮತ್ತು ರಾಜಕಾರಣಿಗಳು ಇಬ್ಬರೂ ಸೇರಿ ಕುತಂತ್ರ ಹೆಣೆದು ದೇಶದ ಸಂಪತ್ತನ್ನು ಹರಿದುಹಂಚಿಕೊಳ್ಳುತ್ತಿರುವುದನ್ನು ತಡೆಯಲು ಪ್ರತಿತಂತ್ರ ರೂಪಿಸಿ, ನಮ್ಮ ಪ್ರಜಾತಾಂತ್ರಿಕ ವ್ಯವಸ್ಥೆಯನ್ನು ಉಳಿಸಿ ಬೆಳೆಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.

ಬೆಂಗಳೂರು **ಶಾಂತಕುಮಾರ್ ಪೂಜಾರ್ (ಶಾಂಪೂ)**

---

ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್ ಅವರೊಂದಿಗೆ ಕೆ. ಎಸ್. ಪಾರ್ಥಸಾರಥಿಯವರ ಸಂದರ್ಶನವನ್ನು ನ್ಯಾಯಾಂಗಕ್ಕೆ ಸಂಬಂಧಿಸಿದ ಎಲ್ಲರೂ ಅವಶ್ಯವಾಗಿ ಓದಲೇಬೇಕು!

ಅಲ್ಲಲ್ಲಿ ಇರುವ ಕೆಲವೇ ಮಂದಿ ಕಪ್ಪು ಕುರಿಗಳಂತಿರುವ ಭ್ರಷ್ಟ ನ್ಯಾಯಾಧೀಶರ ಆಯ್ಕೆಯ ಮೂಲ, ನೇಮಕಾತಿಯಲ್ಲಿನ ಲೋಪದೋಷಗಳು, ನ್ಯೂನತೆಗಳು. ಈಗಿನ ವ್ಯವಸ್ಥೆಯಲ್ಲಿ, ಆಯ್ಕೆಯಲ್ಲಿ ನಡೆಯುವ ಭ್ರಷ್ಟಾಚಾರದಿಂದಾಗಿ ಇಂತಹ ಕರಿ ಕುರಿಗಳು ನಿಷ್ಠ ನ್ಯಾಯಾಂಗದ ವ್ಯವಸ್ಥೆಯಲ್ಲಿ ತೂರಿ ಒಳಬರುತ್ತವೆ. ಇಂತಹವರಿಂದ ದಕ್ಷ ನ್ಯಾಯಾಂಗದ ಪಾವಿತ್ರ್ಯತೆಗೂ ಕಳಂಕ. ನ್ಯಾಯಮೂರ್ತಿ ವಿ. ಆರ್. ಕೆ.ಯವರು ಅಭಿಪ್ರಾಯಪಟ್ಟಂತೆ ನೇಮಕಾತಿಗೇ ಪ್ರತ್ಯೇಕ ಪ್ರಾಧಿಕಾರವಿದ್ದು, ದಯೆ, ದಾಕ್ಷಿಣ್ಯಗಳಿಗೆ ಈಡಾಗದೆ, ನ್ಯಾಯಾಧೀಶರ ನೇಮಕಾತಿಯನ್ನು ಕಟ್ಟುನಿಟ್ಟಾಗಿ, ಗುಣಗ್ರಾಹಿಯಾಗಿ ಮಾಡುವ ಜವಾಬ್ದಾರಿ, ಇಂದಿನ ಅಗತ್ಯಗಳಲ್ಲೊಂದು. ಆಗಷ್ಟೇ ನ್ಯಾಯಾಂಗಕ್ಕೆ ತಗುಲಿರುವ ಕಪ್ಪು ಚುಕ್ಕೆಯನ್ನು ತೊಡೆದುಹಾಕಬಹುದು.

ಮೈಸೂರು **ಕೊ. ಸು. ನರಸಿಂಹಮೂರ್ತಿ**

---

ಇತ್ತೀಚೆಗೆ ಬೆಂಗಳೂರು ನಗರದಲ್ಲಿ ಆಯೋಜಿಸಲಾಗಿದ್ದ ವಿಶ್ವಸಂಸ್ಕೃತ ಪುಸ್ತಕ ಮೇಳದ ಸಂದರ್ಭದಲ್ಲಿ ಸಂಸ್ಕೃತ ಭಾಷೆಯನ್ನು ಎಲ್ಲರೂ ಕಲಿಯಬೇಕೆಂಬ ಸಂದೇಶವನ್ನು ನೀಡಲಾಯಿತು.

ಸುಂದರ ಹಾಗೂ ಹಲವು ರಮಣೀಯ ಮಹಾಕಾವ್ಯಗಳು, ನಮ್ಮ ದೇಶದ ತತ್ವಶಾಸ್ತ್ರ ಗ್ರಂಥಗಳು, ವೇದ, ಉಪನಿಷತ್ ಮತ್ತು ವಿವಿಧ ದರ್ಶನ ಸಾಹಿತ್ಯ ಸಂಸ್ಕೃತ ಭಾಷೆಯಲ್ಲಿ ಮೂಲತಃ ಲಭ್ಯ ಎಂಬುದು ವಿವಾದಾತೀತ.

---

## ತಿದ್ದುಪಡಿ

ಕಳೆದ ಸಂಚಿಕೆಯಲ್ಲಿ ಪ್ರೊ|| ಬರಗೂರು ರಾಮಚಂದ್ರಪ್ಪನವರಿಗೆ ಅಭಿನಂದನೆಯಲ್ಲಿ ಪ್ರಾಧ್ಯಾಪಕ, ಹೊಸ ಅಲೆಯ ಚಿತ್ರ ನಿರ್ದೇಶಕ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಮಾಜಿ ಅಧ್ಯಕ್ಷ – ಎಂದು ಓದಿಕೊಳ್ಳಬೇಕಾಗಿ ವಿನಂತಿ.

*– ಸಂಪಾದಕ*

ಸಂಸ್ಕೃತ ಒಂದು ಭಾಷೆಯಾಗಿ ಕಾವ್ಯ, ವ್ಯಾಕರಣ, ಭಾಷಾಲಂಕಾರ, ನಾಟಕ, ಮತ್ತಿತರ ಸಾಹಿತ್ಯ ಪ್ರಕಾರಗಳಿಂದ ಸಂಪದ್ಭರಿತ ಭಾಷೆಯಾಗಿ ಬೆಳೆದಿರುವುದು ನಿಸ್ಸಂದೇಹ. ಆದರೆ ನಮ್ಮ ಸಾಮಾಜಿಕ ವಿಕಾಸದ ಹಿನ್ನೆಲೆಯನ್ನು ಗಮನಿಸಿದಾಗ, ಒಂದು ಕಾಲಘಟ್ಟದಲ್ಲಿ ಸಮಾಜದ ಉನ್ನತ ಶ್ರೇಣಿಯನ್ನು ಆಕ್ರಮಿಸಿದ್ದ ಬ್ರಾಹ್ಮಣ ಮತ್ತು ವೈದಿಕ ಸಮುದಾಯ, ಸಂಸ್ಕೃತ ಭಾಷೆಯ ಮೇಲೆ ಏಕಸ್ವಾಮ್ಯತೆ ಯನ್ನು ಸಾಧಿಸಿ, ಸಮಾಜದ ಇತರ ವರ್ಗಗಳನ್ನು ಸಂಸ್ಕೃತ ಭಾಷೆಯಿಂದ ದೂರವಿರಿಸಿದರು.

ವೇದ-ಮಂತ್ರಗಳನ್ನು ಕೇಳಿದ ಅಪರಾಧಕ್ಕಾಗಿ ಶಂಭೂಕನ ಕಿವಿಗಳಿಗೆ ಕಾದ ಸೀಸವನ್ನು ಸುರಿಯುವ ಶಿಕ್ಷೆಯನ್ನು ನೀಡಲಾಯಿತು. ದೇವತೆಗಳು ಮಂತ್ರಾಧೀನ ಮತ್ತು ವೇದ-ಮಂತ್ರಗಳು ಬ್ರಾಹ್ಮಣರ ಅಧೀನ ಎಂದು ಘೋಷಿಸಲಾಯಿತು. ಸಂಸ್ಕೃತ ದೇವಭಾಷೆಯೆಂದು, ದೇವಲೋಕಕ್ಕೆ ಏರಿಸಿ ಭೂಲೋಕದ ಪಾಮರರಿಂದ ದೂರವಿರಿಸಲಾಯಿತು.

ಆದರೆ ಇಂದು ಅದೇ ವರ್ಗ ಸಂಸ್ಕೃತವನ್ನು ಎಲ್ಲರೂ ಕಲಿಯಬೇಕೆಂಬ ಆಶಯವನ್ನು ವ್ಯಕ್ತಪಡಿಸುತ್ತಿದೆ. ಸಂಸ್ಕೃತ ಭಾಷೆ ಮತ್ತು ಸಾಹಿತ್ಯದ ಬಗ್ಗೆ ಅಸಡ್ಡೆ ಮತ್ತು ನಿರ್ಲಕ್ಷ್ಯದ ಧೋರಣೆ ಎಷ್ಟು ಸೂಕ್ತವಲ್ಲವೋ, ಸಂಸ್ಕೃತ ಭಾಷೆ ಮತ್ತು ಸಾಹಿತ್ಯ ಪರಂಪರೆಯ ವೈಭವೀಕರಣ ಅಷ್ಟೇ ಅಸಮಂಜಸ.

ಸಂಸ್ಕೃತ ಭಾಷೆಯಲ್ಲಿ ಎಲ್ಲವೂ ಲಭ್ಯ, ಸಂಸ್ಕೃತ ಭಾಷೆ ಯೊಂದನ್ನು ಕಲಿತರೆ ಸಾಕು, ಮತ್ತೇನನ್ನೂ ಕಲಿಯುವ ಅವಶ್ಯಕತೆಯಿಲ್ಲ ಎಂಬ ಧೋರಣೆ ಅಪಾಯಕಾರಿ ಮತ್ತು ಸಂಸ್ಕೃತ ಭಾಷಾಸಕ್ತರನ್ನು ಕೂಪಮಂಡೂಕಗಳನ್ನಾಗಿಸುವ ಸಾಧ್ಯತೆ ಹೆಚ್ಚು.

ಇಂದು ವಿಜ್ಞಾನ ಮತ್ತು ತಂತ್ರಜ್ಞಾನಗಳ ವಿಸ್ತರಣೆ ಅತ್ಯಂತ ವೇಗವಾಗಿ ಜರುಗುತ್ತಿರುವ ಸಂದರ್ಭದಲ್ಲಿ, ಜಗತ್ತಿನ ಎಲ್ಲ ಭಾಷೆಗಳೂ ಮುಖ್ಯವಾಗುತ್ತವೆ. ಜ್ಞಾನ ಪ್ರಸರಣ ಪ್ರಕ್ರಿಯೆಯಲ್ಲಿ, ಭಾಷಾಂಧತೆಯನ್ನು ತಳೆಯುವುದು ಪ್ರಯೋಜನಕಾರಿ ಬೆಳವಣಿಗೆಯಲ್ಲ. ಯಾವುದೇ ಭಾಷೆ ಆಗಲಿ, ಅದೊಂದು ಅಭಿವ್ಯಕ್ತಿ ಮಾಧ್ಯಮ ಮತ್ತು ಚಿಂತನಾಲಹರಿಯ ವಾಹಕ ಎಂಬ ತಿಳುವಳಿಕೆ, ಜ್ಞಾನಾರ್ಜನೆಯ ದೃಷ್ಟಿಯಿಂದ ಸ್ವಾಗತಾರ್ಹ.

ಬೆಂಗಳೂರು **ಶಂಕರನಾರಾಯಣ**

## ದಲಿತ ಸ್ವಾಮಿ ಬ್ರಾಹ್ಮಣ ಕೇರಿಯಲ್ಲಿ...

ಚಿತ್ರದುರ್ಗ ಮತ್ತು ದಾವಣಗೆರೆಯ ಅನೇಕ ಭಾಗ ಗಳಲ್ಲಿ ಕೆಲವು ಬ್ರಾಹ್ಮಣರ ಮನೆಗಳಲ್ಲಿನ ಮದುವೆಯ ಹಿಂದಿನ ದಿನ ಮಾದಿಗ ಜನಾಂಗದ ಹೆಣ್ಣುಮಗಳೊಬ್ಬಳನ್ನು ರಾತ್ರಿ ಸಮಯದಲ್ಲಿ ಬರಮಾಡಿಕೊಳ್ಳುತ್ತಾರೆ. ಅವಳಿಗೆ ಬೇವಿನ ಉಡುಗೆ ಮಾಡಿ, ಅರಿಶಿನ ಕುಂಕುಮದಿಂದ ಅಲಂಕರಿಸಿ ಸಿಂಗರಿಸುತ್ತಾರೆ. ಮನೆಯೊಳಗೆ ಅವಳನ್ನು ಭಕ್ತಿಭಾವದಿಂದ ಕರೆದುಕೊಂಡು ಹೋಗಿ ಹಜಾರದಲ್ಲಿ 'ದೇವಿ'ಯನ್ನಾಗಿ ಕುಳ್ಳಿರಿಸುತ್ತಾರೆ. ಪ್ರತಿಯೊಬ್ಬರು ಸರತಿಯಲ್ಲಿ ಆಕೆಗೆ 'ದೇವತೆ' ಪಟ್ಟ ನೀಡಿ ಪೂಜಿಸುತ್ತಾರೆ. ಮದುವೆಯಾಗುವ ಮದುವಣಗ - ಮದುವಣಗಿತ್ತಿಯ ರಿಂದ ವಿಶೇಷ ಪೂಜೆ ಸಲ್ಲಿಸಿ ಆ ದೇವಿಯ ಆಶೀರ್ವಾದ ಪಡೆಯುತ್ತಾರೆ. ನಂತರದಲ್ಲಿ ಆ ಮನೆಯಿಂದ ತೆರಳಿ ನಿರ್ದಿಷ್ಟ ಬೇವಿನಮರದವರೆಗೆ ಮೆರವಣಿಗೆ ಹೊರಡುತ್ತಾರೆ.

### ಗಾನಗಂಧರ್ವ ಪಂ॥ ಭೀಮಸೇನ್ ಜೋಶಿ ಅವರಿಗೆ ನಮನ



ಹಿಂದುಸ್ತಾನಿ ಸಂಗೀತ ಲೋಕದ ದಿಗ್ಗಜರಾದ, ಖ್ಯಾತರಾದ ಭಾರತರತ್ನ ಡಾ॥ ಭೀಮಸೇನ್ ಜೋಶಿಯವರು ದಿನಾಂಕ ೨೪-೧-೨೦೧೧ರಂದು, ತಮ್ಮ ೮೯ನೇ ವಯಸ್ಸಿನಲ್ಲಿ ನಿಧನರಾಗಿದ್ದಾರೆ. ಇವರಿಗೆ ನವಕರ್ನಾಟಕ ಪ್ರಕಾಶನ ಹಾಗೂ 'ಹೊಸತು' ಬಳಗದ ಅಂಜಲಿ ಸಲ್ಲುತ್ತದೆ.

ರಾತ್ರಿ ಸಮಯದಲ್ಲಿ ಮೌನ ದಿಬ್ಬಣದಂತೆ ಈ ಆಚರಣೆ ಜರುಗುತ್ತದೆ. ಮುಂದೆ ಆ 'ದೇವಿ', ಹಿಂದೆ ಮದುವೆ ಯಾಗುವವರು, ಅವರ ತಂದೆ ತಾಯಿಗಳೂ, ಹತ್ತಿರದ ಬಂಧುಗಳೂ ಅತ್ಯಂತ ನಿಷ್ಠೆ, ಭಯಭಕ್ತಿಯಿಂದ ಆ ದಿಬ್ಬಣದಲ್ಲಿ ಭಾಗವಹಿಸುವರು. ಆ ಬೇವಿನ ಮರದ ಹತ್ತಿರ ಬ್ರಾಹ್ಮಣ ಮಹಿಳೆಯರು ಆ 'ದೇವಿ'ಯನ್ನು ಸುತ್ತುವರೆದು ಬೇವಿನ ಉಡುಗೆ ತೆಗಿಸಿ ತಾವು ತಂದಿರುವ ಹೊಸ ಸೀರೆ ಕುಪ್ಪಸವನ್ನು ಆಕೆಗೆ ಕಾಣಿಕೆಯಾಗಿ ನೀಡಿ ತೊಡಿಸುತ್ತಾರೆ. ನಂತರ ಆಕೆಯ ಮಡಿಲಿಗೆ ವಿವಿಧ ಭಕ್ಷ್ಯ, ಭೋಜನಗಳು ಮತ್ತು ಇತರೆ ಕಾಣಿಕೆಗಳನ್ನು ನೀಡಿ 'ದೇವಿ'ಯ ಪಾದಮುಟ್ಟಿ ನಮಸ್ಕರಿಸುತ್ತಾರೆ. ಮತ್ತೊಮ್ಮೆ ಅವಳ ಆಶೀರ್ವಾದ ಪಡೆದು ಅಲ್ಲಿಂದಲೇ ನೇರವಾಗಿ ಅವಳ ಕೇರಿ ಮನೆಗೆ ಒಬ್ಬಂಟಿಯಾಗಿ ಕಳಿಸಿಕೊಡುತ್ತಾರೆ. ಅಲ್ಲಿಗೆ ಅವಳ 'ದೇವಿ' ಪಟ್ಟ ಮುಗಿಯುತ್ತದೆ. ಆ ಕ್ಷಣದಿಂದ ಅವಳು ಪುನಃ ಅವರ ದೃಷ್ಟಿಯಲ್ಲಿ ಅಸ್ಪೃಶ್ಯಳಾಗಿ ಉಳಿಯುತ್ತಾಳೆ. ಈ ಆಚರಣೆ ರಾತ್ರಿವೇಳೆ ಗೌಪ್ಯವಾಗಿ ಜರುಗುತ್ತದೆ. ಆ ರೀತಿ ಮಾಡುವುದರಿಂದ ಈ ಬ್ರಾಹ್ಮಣರಿಗೆ ಮಂಗಳವಾಗುತ್ತದೆ; ಶುಭ ಲಗ್ನಕಾರ್ಯ ಮಾರನೇ ದಿನ ವಾಗುತ್ತದೆಂಬ ದೃಢನಂಬಿಕೆ. ಈ ಆಚರಣೆ ಚಿತ್ರದುರ್ಗ, ಹರಪನಹಳ್ಳಿ ಭಾಗಗಳಲ್ಲಿ ಇಂದಿಗೂ ಆಚರಣೆಯಲ್ಲಿದೆ.

ಅಷ್ಟೇ ಅಲ್ಲ, ಆ ಕೆಲವು ಬ್ರಾಹ್ಮಣ ಮನೆಗಳಲ್ಲಿ ಜರುಗುವ ಯಾವುದೇ ಶುಭಕಾರ್ಯಕ್ಕೆ ಮಾದಿಗನೊಬ್ಬನ ಮನೆಯಿಂದ ಚೆನ್ನಾಗಿ ನೆನೆದ 'ಕರಿಬಾನಿ'ಯಲ್ಲಿನ ನೀರನ್ನು ತರಿಸಿ ತಮ್ಮ ಮೇಲೆ ಆ ಮಾದಿಗ ಪ್ರೋಕ್ಷಿಸುವಂತೆ ಬೇಡಿ ಕೊಳ್ಳುತ್ತಾರೆ. ಅದನ್ನು ಪವಿತ್ರ ಗಂಗಾ ಜಲವೆಂದು ಭಾವಿಸಿ, ಪ್ರೋಕ್ಷಿಸಿದ ನೀರಿನಿಂದ ಪುನೀತರಾದೆವೆಂದು ಭಯ-ಭಕ್ತಿಯಿಂದ ಆ ಮಾದನಿಗೆ ಕಾಣಿಕೆ ನೀಡಿ ಕಳಿಸುತ್ತಾರೆ.

ಇನ್ನೊಂದು ನಂಬಿಕೆಯ ಆಚರಣೆ ಅವ್ಯಾಹತವಾಗಿ ಹರಪನಹಳ್ಳಿ ತಾಲ್ಲೂಕಿನ ಅರಸೀಕೆರೆ ಗ್ರಾಮದಲ್ಲಿ ಜರುಗುತ್ತದೆ. ಪ್ರತಿವರ್ಷ ಜನವರಿ ತಿಂಗಳಲ್ಲಿ ಮುಂಜಾನೆ ಐದು ಗಂಟೆಗೆ ಮಾದರ ಕೇರಿಯ ದೇವಿ ಗುಡಿಯಿಂದ ಮಾದಿಗ ಪುರುಷನ ಮೈಮೇಲೆ 'ದೇವಿ' ಅವತರಿಸಿ (ಹೆಣ್ಣು ವೇಷದಲ್ಲಿ) ಕರಗ (ಕಳಶದ ರೂಪದಲ್ಲಿ) ಹೊತ್ತುಕೊಂಡು ಆವೇಶದಿಂದ ದಾಪು ಹೆಜ್ಜೆಹಾಕುತ್ತಾನೆ. ಮಾದರ ಕೇರಿಯಿಂದ ಪ್ರಾರಂಭವಾಗುವ ಈ ಮೆರವಣಿಗೆ ಊರಿನ ಮುಖ್ಯರಸ್ತೆಯವರೆಗೂ ಸಾಗುತ್ತದೆ. ಮಡಿ ನೆಡಿಗೆಯಂತೆ 'ದೇವತೆ'ಯಾದ ಪುರುಷ ಒಂದು ಕೈಯಲ್ಲಿ ಕರಗ ಹೊತ್ತು, ಇನ್ನೊಂದು ಕೈಯಲ್ಲಿ ಬೆತ್ತ ಹಿಡಿದು ದಾಪು ಹೆಜ್ಜೆ ಹಾಕಿ ನಡೆಯುತ್ತಾನೆ. ವರ್ಷವಿಡೀ ಹರಕೆಹೊತ್ತ ಭಕ್ತಾದಿಗಳು ಸಾಲಾಗಿ ದಾರಿಯುದ್ದಕ್ಕೂ ಅಂಗಾತ ಮಲಗಿರುತ್ತಾರೆ. ಅವರ ಬೆನ್ನಮೇಲೆ ಕಾಲಿರಿಸುತ್ತಾ ಆ 'ದೇವಿ' ಸಾಗುತ್ತಾಳೆ. ಒಂದು ಪಕ್ಷ ಆ 'ದೇವಿ' ಸರಿಯಾಗಿ ತುಳಿಯಲಿಲ್ಲವೆಂದರೆ ಓಡಿಹೋಗಿ ಮುಂದಿನ ಸಾಲಿನಲ್ಲಿ ಪುನಃ ಜೋರಲಾಗಿ ಮಲಗಿಕೊಳ್ಳುತ್ತಾರೆ. ಬೆನ್ನಮೇಲೆ ಸರಿಯಾಗಿ ತುಳಿಸಿಕೊಂಡ ನಂತರವೇ ಅವರಿಗೆ 'ಹರಕೆ' ಪೂರೈಸಿದಂತೆ; ಅವರ ಇಷ್ಟಾರ್ಥಗಳು ಈಡೇರಿದಂತೆ. ಈ ಭಕ್ತಾದಿಗಳಲ್ಲಿ ದಲಿತ ಸವರ್ಣೀಯರೆಲ್ಲರೂ ಒಟ್ಟಾಗಿ ಮಲಗಿ 'ದೇವಿ'ಯ ಪಾದಸ್ಪರ್ಶ ಆಶೀರ್ವಾದ ಪಡೆಯುತ್ತಾರೆ. ಇವರಲ್ಲಿ ಬ್ರಾಹ್ಮಣರೂ ಸಹ ಇರುತ್ತಾರೆ ಎಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಸುತ್ತಲ ಗ್ರಾಮಗಳಿಂದ ಸಾವಿರಾರು ಜನ ಸೇರುತ್ತಾರೆ. ಆ ಸಮಯದಲ್ಲಿ ಈ ದೃಶ್ಯವನ್ನು ವೀಕ್ಷಿಸಲು ಸ್ಥಳವೇ ಸಿಗುವುದಿಲ್ಲ. ಸಾವಿರಾರು ಜನರು ಮನೆ ಮಾಳಿಗೆ ಹತ್ತಿ, ಮರದ ಮೇಲೆ, ಗುಡ್ಡಗಳ ಮೇಲೆ ಕುಳಿತು ವೀಕ್ಷಿಸುತ್ತಾರೆ. ಒಂದು ಒಂದೂವರೆ ಗಂಟೆ ಕಾಲ ಈ 'ಕಾರ್ಯ' ಜರುಗುತ್ತದೆ.

ಇದು ಸಾಮಾಜಿಕ ಸಮಾನತೆಯ ಬಯಕೆಯ ಈಡೇರಿಕೆ ಇರಬಹುದು. ನಿರಂತರ ಶೋಷಣೆಯನ್ನು ಪ್ರತಿಭಟಿಸಿ ಪರಿಹಾರ ಮತ್ತು ಪ್ರತೀಕಾರ ತೀರಿಸಿಕೊಳ್ಳುವ ಮಾರ್ಗೋಪಾಯವಿರಬೇಕು. ಇದೊಂದು ದಲಿತರ ಒಡಲಾಳದ ದುಮ್ಮಾನವನ್ನು ಹೊರಹಾಕುವ ಪ್ರಕ್ರಿಯೆ ಇರಬೇಕೆಂದು ಇತ್ತೀಚೆಗೆ ನಿಧನರಾದ ಖ್ಯಾತ ವಿದ್ವಾಂಸ ಪ್ರೊ॥ ಎಸ್. ಎಸ್. ಹಿರೇಮಠರು ತಮ್ಮ 'ಜಾತ್ರೆಗಳು - ಹಬ್ಬಗಳು' ಎಂಬ ವಿದ್ವತ್ ಗ್ರಂಥದಲ್ಲಿ ಅಭಿಪ್ರಾಯ ನೀಡಿದ್ದಾರೆ. ಇಂತಹ ಭಕ್ತಾದಿ ಬ್ರಾಹ್ಮಣ ಕೆಲವರು ಈ ಭಾಗದಿಂದ ವಲಸೆ ಹೋಗಿ ಮೈಸೂರಿನಲ್ಲಿಯೂ ಕೆಲವರು ನೆಲಸಿದ್ದಾರೆಂದು ತಿಳಿದಿದೆ.

ಈ ಹಿನ್ನೆಲೆಯಲ್ಲಿ ಮಾದಾರ ಚನ್ನಯ್ಯನವರ ಬ್ರಾಹ್ಮಣಕೇರಿಯ ಪಾದಯಾತ್ರೆ ಅರ್ಥಪೂರ್ಣವಾಗಿದೆ.

ಬಳ್ಳಾರಿ **ಡಾ॥ ವೆಂಕಟಯ್ಯ ಅಪ್ಪಗೆರೆ**

# ಲಹರಿಗಿಲ್ಲ ಲಗಾಮು



**ಹಾ**ಸ್ಯವೇ ಹಾಗೆ. ಮಾತಿನ ನಡುವೆ ಅಯಾಚಿತವಾಗಿ ಪುಟಿದೇಳುತ್ತದೆ. ಏನಾಯಿತು, ಏನಾಗುತ್ತಿದೆ ಎಂದುಕೊಳ್ಳುವುದಕ್ಕೂ ಬಿಡುವು ನೀಡದೆ ನಗಿಸಿಬಿಡುತ್ತದೆ. ಅಯ್ಯೋ, ಇದನ್ನು ಎಲ್ಲೋ ಆಗಲೇ ಕೇಳಿದ್ದೇನೆ, ಕಂಡಿದ್ದೇನೆ ಎಂಬ ಗೊಣಗಿಗೊಳಗಾಗಿಯೂ ನಾವು ನಕ್ಕಿರುತ್ತೇವೆ.

ಆ ಬಂಗಲೆಗೆ ಹೊಸ ಆಳು ನೇಮಕಗೊಂಡ. ಸಂಪಂಗಿ ಎಂಬ ಹೆಸರಿನ ಆತ ಸೇರಿದ ಹೊಸದರಲ್ಲಿ ಐನಾತಿ ಅನ್ನಿಸಿಕೊಂಡಿದ್ದ. ಕೆಲಸ, ಕಾರ್ಯಗಳಲ್ಲಿ ಎಲ್ಲಿಲ್ಲದ ಮುತುವರ್ಜಿ. ಗೋಣಿ ಬಟ್ಟೆಯನ್ನೂ ಸಾಬೂನು ಹಾಕಿ ಶ್ರದ್ಧೆಯಿಂದ ಒಗೆಯುವಂಥ ಸೇವಕ ಅನ್ನಿ! ಒಂದು ದಿನ ಯಜಮಾನ ಹಯವದನರಾಯರು, "ಎಲ್ಲಯ್ಯ ಇವೊತ್ತಿನ ಪೇಪರು... ಕಾಣಿಸ್ತಾನೆ ಇಲ್ವಲ್ಲ ಎಲ್ಲೆಲ್ಲೂ ಹುಡುಕಿದ್ದಾಯಿತು", ಅಂತ ಠೀಕಾಗಿ ಸೋಫಾದಲ್ಲಿ ಕಾಲುಮೇಲೆ ಕಾಲು ಹಾಕಿದರು. "ಏಯ್, ಹೌದೇಳಿ ಒಡೆಯ ನೀವು ಯೋಳಾದು... ನಾನಂತು ನಿನ್ನೆಯಿಂದ ತಡಕಾಡ್ತಾನೆ ಇದ್ದೀನಿ ಕೈಗೆ ಸಿಕ್ರಲ್ವ ಅದು", ಅನ್ನುವುದೆ ?! ಮನೆ ಮಾಲಿಕನನ್ನು ಸುಪ್ರೀತ ಗೊಳಿಸುವ ಸಡಗರದಲ್ಲಿ ಹಸಿಸುಳ್ಳು ಸಂಪಂಗಿಯಿಂದ ವಕ್ಕರಿಸಿ ಅವರನ್ನು ನಗೆಗೀಡುಮಾಡಿತ್ತು.

ಅಂದಹಾಗೆ ಹಯವದನರಾಯರೇನು ಕಡಿಮೆ ? ಅವರೂ ಒಮ್ಮೆ ಪೇಚಿಗೆ ಸಿಲುಕಿದ್ದು ಹೀಗೆ. ಆ ದಿನ ಏನಪ್ಪ ಆಯ್ತು ಅಂದರೆ ಬಂಗಲೆಗೆ ಸಕ್ರೆಪಟ್ಣಾ ದಿಂದ ಒಬ್ಬರು ಹಳೇ ಸಂಬಂಧಿ ಬಂದಿದ್ರು. ಎಂಭತ್ತು ದಾಟದ ಆಸಾಮಿ. ಹನ್ನೆರಡು ಕೆರೆ ನೀರು ಕುಡಿದ ಅನುಭವಿ. ಅಂಥವರ ಮುಂದೆ ರಾಯರು ತಮ್ಮ ಆಳಿನ ಬಗ್ಗೆ ಕೊಚ್ಚಿಕೊಂಡಿದ್ದೇ ಕೊಚ್ಚಿಕೊಂಡಿದ್ದು "ನೋಡಿ, ನಮ್ಮ ಸಂಪಂಗಿ ಎಂಥ ಐನಾತಿ ಅಂದ್ರೆ ಎಂಥದೆ ಜೋರು ಮಳೆ ಬರ್ತಿರ್ಲಿ ಗಿಡಗಳಿಗೆ ನೀರು ಹಾಕೋದ್ನ ಮಾತ್ರ ತಪ್ಪಿಸೊಲ್ಲ ಪುಣ್ಯಾತ್ಮ..." ಎನ್ನುವುದೆ ?

ನಾನು ಮೈಸೂರಿನಲ್ಲಿ ಬನುಮಯ್ಯ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದೆ. ನಮ್ಮ ವಾಣಿಜ್ಯ ಮಾಸ್ತರರು ಸಿಲೋನಿಗೆ ಹೋಗಿಬಂದ್ರು. ಹೇಳಿಕೇಳಿ ಭಾರತದಿಂದ ಸಿಲೋನು ಕೇವಲ ಇಪ್ಪತ್ತೆರಡು ಕಿಲೋಮೀಟರೇ ದೂರ. ಆದ್ರೇನು, ಬೇರೆ ದೇಶ ತಾನೆ ? ಅವರಿಗೆ ಸನ್ಮಾನವೋ ಸನ್ಮಾನ. ಗೌರವಕ್ಕೆ ಉತ್ತರ ಕೊಡ್ತ 'ಫಾರಿನ್ ರಿಟರ್ನ್ಡ್' ಹೇಳಿದ್ದು, "ಆ ಊರ್ನಲ್ಲೇನ್ರಿ ಕಥೆ ? ಅಬ್ಬಬ್ಬ !. ಪುಟ್ಟ ಪುಟ್ಟ ಹೈಕಳೂನು ಸಿಂಹಳೀ ಭಾಷೆಯಲ್ಲೇ ಮಾತಾಡ್ತಾವೆ, ಜಗಳ ಆಡ್ತವೆ ಗೊತ್ತ ?". ನಮ್ಮ ಹೆಡ್‌ಮಾಸ್ತರು ನಗು ತಡೆಯಲಾರದೆ ಮೂರು ಬಾರಿ ಎದ್ದು ಆಚೆ ಹೋಗಿಬಂದಿದ್ರು. ನಿಮಗೂ ಈಗ ನಾನು ಹೇಳುವ ಅನುಭವ ಆಗಿರಲೇಬೇಕೆಂದು ಕೊಳ್ಳುತ್ತೇನೆ. ನೀವು ಮೂರ್ನಾಲ್ಕು ದಿನಗಳ ಹಿಂದೆ ನಿಮ್ಮ ಮಿತ್ರರಿಗೊ ನೆಂಟರಿಗೊ ಕುಶಲ ವಿಚಾರಿಸಲು ಫೋನಾಯಿಸಿರುವಿರಿ. ಆಕಸ್ಮಿಕವಾಗಿ ಅವರು ಶಹರಿನಲ್ಲೊ ಉದ್ಯಾನವನದಲ್ಲೊ ಸಿಗುತ್ತಾರೆ. "ಓಹೋ ! ನಿಮ್ಮ ಫೋನು ಬಂತು ನಂಗೆ ಅನ್ನುತ್ತಾರೆ"! ನೀವು ಸರಿ ಸರಿ ಅಂತ ತಲೆಯಾಡಿಸಿ ಕಂಡೂ ಕಾಣದಂತೆ ನಕ್ಕಿರುತ್ತೀರಿ ಅಲ್ಲವೆ ? ಅಂತೆಯೆ ನೀವು ಚೀಲ ಹಿಡಿದು ಮಾರುಕಟ್ಟೆಯಲ್ಲಿ ಅಡ್ಡಾಡುತ್ತಿದ್ದರೆ ಕನಿಷ್ಠ ಒಬ್ಬರಾದರೂ "ತರಕಾರಿ ಖರೀದಿಗೆ ಬಂದಿರಾ" ಎಂದು ವಿಚಾರಿಸಿರುತ್ತಾರೆ.

ಕ್ಷಮಿಸಿ, ದಯಮಾಡಿ ಸಹಕರಿಸಿ, ಒಂದ್ನಿಮಿಶ ಇತ್ಯಾದಿ ಪ್ರಯೋಗಗಳು ಇಲ್ಲದೆ ದಿನಗಳೆ ಹರಿಯವು. 'ಕ್ಷಮಿಸಿ' ಎನ್ನುತ್ತಲೆ ನಮ್ಮ ಅನುಮತಿಗೆ ಕಾಯದೆ ನಮ್ಮ ಕೈಲಿರುವ ದಿನಪತ್ರಿಕೆಯನ್ನು ಅಪಹರಿಸುವವರಿಲ್ಲವೆ ಹೇಳಿ. ಒಳ ಬರಬಹುದೆ ಅಂತ ಒಳ ಬಂದೇ ನಮ್ಮ ಆದೇಶಕ್ಕಾಗಿ ಕಾತುರದಿಂದ ನಿರೀಕ್ಷಿಸು ವವರುಂಟು. ಒಂದ್ನಿಮಿಷ ಅಂತ ಅರ್ಧಗಂಟೆಯಾದರೂ ಬಂದವರತ್ತ ಕೊರಳನ್ನೂ ಕೊಂಕಿಸದಿರುವ ಅತಿಥೇಯರಿಗೂ ಕೊರತೆಯಿಲ್ಲ. ತಿಂಗಳ ಹಿಂದೆ ತಾನೆ ನಡೆದ ಪ್ರಸಂಗ. ಬೆಂಗಳೂರಿನಿಂದ ದೊಡ್ಡ ವ್ಯಾನ್ ಗೊತ್ತುಮಾಡಿಕೊಂಡು ನಾವು ಮನೆಯವರು, ಜೊತೆಗೆ ಹತ್ತಿರದ ಬಳಗ ಒಟ್ಟು ಡಜ಼ನ್ ಮಂದಿ. ಮಂಡ್ಯ ಬಳಿಯ ಪ್ರಸಿದ್ಧ ಯಾತ್ರಾಸ್ಥಳಕ್ಕೆ ಹೊರಟೆವು. ಪರಿಚಿತರೊಬ್ಬರು ಅವರಾಗಿಯೆ ನಮ್ಮ ಯಾತ್ರೆ ಬಗ್ಗೆ ತಿಳಿದು ಹಿಂದಿನ ದಿನ ನಮ್ಮ ಮನೆಗೆ ಬಂದು, "ನಮ್ಮ ಚಿಕ್ಕಪ್ಪನ ಮಗ ನಾಣಿ ಇದ್ದಾನೆ. ...ನಿಮಗೆ ಏನೇನು ಅನುಕೂಲ ಬೇಕೊ ಎಲ್ಲಾನು ಮಾಡ್ತಾನೆ. ಚಿಂತೆಬಿಡಿ. ಎಲ್ಲವೂ ಸರಾಗವಾಗೆ ಆಗುತ್ತೆ. ನಮ್ಮ ನಾಣಿ ಇದ್ರೆ ಹತ್ತಾನೆ ಇದ್ದ ಹಾಗೆ..." ಎಂದು ಒಂದೂವರೆ ತಾಸು ತರಗತಿ ತೆಗೆದುಕೊಂಡಿದ್ರು. ಮರುದಿನ ನಮ್ಮ ವ್ಯಾನು ಆ ಯಾತ್ರಾಸ್ಥಳವನ್ನು ಸೇರಿದ್ದು ನಿಜ. ನಾಣಿಯ ಮನೆ ಸಿಕ್ಕಿದ್ದೂ ನಿಜ. ಆದರೆ ಆ ಮಹಾನುಭಾವನ ತರಗತಿ ಅವನ ದೊಡ್ಡಪ್ಪನ ಮಗನದಕ್ಕಿಂತ ಭರ್ಜರಿಯಾಗಿತ್ತು. "ಛೆ ! ಎಂಥ ಕೆಲಸವಾಯ್ತು ? ನೀವು ಒಂದು ಫೋನಾದ್ರು ಮಾಡಿ ಬಂದಿದ್ರೆ ಎಷ್ಟು ಪಸಂದಾಗಿತ್ತು. ದೊಡ್ಡ ಮನೇನೆ ಬಿಡಿಸಿಕೊಂಡು ರಾಜಾತಿಥ್ಯ ನೀಡಬಹುದಿತ್ತು. ಅಯ್ಯೋ ನೀವು ಹೀಗಾ ಮಾಡೋದು ? ಈ ಊರಿನಲ್ಲೋ ಪಾಕೆಟ್ ಹಾಲು ಕೂಡ ಸಿಗೋಲ್ಲ. ಸಾಲದಕ್ಕೆ ಇವೊತ್ತು ನಲ್ಲೀಲಿ ನೀರು ಬೇರೆ ಬರ್ತಿಲ್ಲ. ಏನು ಮಾಡ್ಲಿ ಹೇಳಿ. ಈ ತರಹ ಬರ್ತೀರಲ್ಲ ನಮ್ಮ ಮನಸ್ಸು ನೋಯಿಸೋಕೆ"... ಹೀಗೆ ಸಾಗಿತ್ತು ನಾಣಿಯ ಕೊರಗು (?)

ಘನತೆ ಪ್ರದರ್ಶಿಸಿಕೊಳ್ಳಲು ಹೋಗಿ ತಾವೇ ಅಪಹಾಸ್ಯಕ್ಕೆ ಗುರಿಯಾಗುವ ಸಂದರ್ಭಗಳುಂಟು. ಒಮ್ಮೆ ಒಂದು ಮದುವೆ ಮನೆಯಲ್ಲಿ ಸುಮಾರು ನಲವತ್ತರ ಒಬ್ಬ ಹೆಂಗಸು. ಬಹಳ ಹೊತ್ತು ಯಾರೂ ತನ್ನನ್ನು ಮಾತನಾಡಿಸಲಿಲ್ಲವಲ್ಲ, ಯಾವಾಗ ಬಂದಿರಿ ಎಂದು ವಧುವಿನ ತಂದೆ, ತಾಯಿ ವಿಚಾರಿಸಲಿಲ್ಲವಲ್ಲ ಎನ್ನುವುದು ಆಕೆಯ ಪೇಚಿಗೆ ಕಾರಣವಾಗಿರಬೇಕು. ಅಂತೂ ಇಂತೂ ಹೇಗಾದರೂ ಸರಿ ತಾನು ಐಡೆಂಟಿಟಿ ಕ್ರೈಸಿಸ್‌ನಿಂದ ಹೊರಬರಬೇಕೆಂದುಕೊಂಡರು ಅವರು. ಇದ್ದಕ್ಕಿದ್ದಂತೆ ತನ್ನ ಎದುರಿಗೆ ಕುಳಿತವರನ್ನು ಆಕೆ, "ನೋಡೀಮ್ಮ, ವಿಪರೀತ ಸೆಕೆ ನಂಗೆ ಈ ಭಾರಿ ನೆಕ್ಲೇಸು ಹಾಕಿ ಬಂದಿದ್ರಿಂದ... ಅಯ್ಯೋ !! ಭಾರಾನಪ್ಪ ಬಹಳ..." ಎಂದು ಪ್ರಲಾಪಿಸಿಯೆಬಿಡುವುದೆ ? ಆಕೆಯ ಉಪಾಯ ಖಂಡಿತ ಫಲಿಸಿತು. ಆಕೆಯ ಸುತ್ತಮುತ್ತ ಹಲವು ಮಹಿಳೆಯರು ಜಮಾಯಿಸಿ ನೆಕ್ಲೇಸಿನ ಮಾತಿರಲಿ ಒಡವೆ, ಸೀರೆಗಳ ವಿಶ್ವಕೋಶವನ್ನೇ ಪರಾಮರ್ಶಿಸಿದ್ದರು. ನಂಬಿದರೆ ನಂಬಿ, ಬಿಡಿ. ಆ ಮಾರಾಯ್ತಿ ಇಡೀ ಮದುವೆ ಮನೆಯಲ್ಲಿ ದೊಡ್ಡ ನಕ್ಷತ್ರವಾಗಿದ್ದರು, ಕ್ಷಣ ಮಾತ್ರದಲ್ಲಿ.

**ಬಂಡಿಗನವಿಲೆ ಭಗವಾನ್**

೩೬ ಬಿ, ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ೨ನೇ ಬ್ಲಾಕ್, ಬೆಂಗಳೂರು - ೫೬೦ ೦೫೦

# ಅಭಿವೃದ್ಧಿ ಪಥದಲ್ಲಿ ಮಾನವ ಹಕ್ಕು ಉಲ್ಲಂಘನೆ

**ಪ್ರೊ॥ ಶಿವರಾಮಯ್ಯ**

ರಾಜ್ಯದ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷ, ನ್ಯಾಯಮೂರ್ತಿ ಎಸ್.ಆರ್. ನಾಯಕ್, ಪ್ರೊ॥ ಹಿ. ಶಿ. ರಾಮಚಂದ್ರೇಗೌಡರ 'ರೈತ ಹೋರಾಟ ಸಾಹಿತ್ಯ', 'ರೈತ ಚಳುವಳಿ ಸುಮ್ಮನೆ' ಮತ್ತು 'ನಮಗೆ ನಾವು' ಎಂಬ ವೈಚಾರಿಕ ಲೇಖನಗಳನ್ನುಳ್ಳ ಮೂರು ಕೃತಿಗಳನ್ನು ನವೆಂಬರ್ ೫, ೨೦೧೦ರಂದು ನಗರದಲ್ಲಿ ಬಿಡುಗಡೆ ಮಾಡುವ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡುತ್ತ, ''ರಾಜ್ಯದ ಅಧಿಕಾರ ಚುಕ್ಕಾಣಿಯನ್ನು ಇಲ್ಲಿಯವರೆಗೆ ಹಿಡಿದುಕೊಂಡು ಬಂದವರೆಲ್ಲ ತಮ್ಮನ್ನು ತಾವು ಮಣ್ಣಿನ ಮಕ್ಕಳು, ರೈತಮಕ್ಕಳು ಎಂದು ಹೇಳಿಕೊಳ್ಳುತ್ತಲೇ ಬಂದಿದ್ದಾರೆ. ಆದರೂ, ಇವರಿಂದ ರೈತರ ಆತ್ಮಹತ್ಯೆಗಳನ್ನು ತಡೆಯಲು ಏಕೆ ಸಾಧ್ಯವಾಗುತ್ತಿಲ್ಲ?'' ಎಂದು ಭಾವನಾತ್ಮಕವಾಗಿ ನೇರವಾಗಿಯೇ ಪ್ರಶ್ನಿಸಿದರು.

ನ್ಯಾಯಮೂರ್ತಿಗಳ ಮಾತು ಕರ್ನಾಟಕದ ಇಂದಿನ ಕಟುವಾಸ್ತವವನ್ನು ತೆರೆದಿಡುತ್ತಿದೆ. ಅಭಿವೃದ್ಧಿಯ ಜಪ ಪಠಿಸುತ್ತ ಒಂದಲ್ಲ ಒಂದು ರೀತಿಯಲ್ಲಿ ರೈತಾಪಿವರ್ಗವನ್ನು ಮರುಳುಗೊಳಿಸಿ, ಅವರ ಬದುಕುವ ಹಕ್ಕನ್ನು ಕಸಿದುಕೊಳ್ಳುವ ಮೂಲಕ ಅಧಿಕಾರಶಾಹಿ ಅವರನ್ನು ಹಂಗಿನಲ್ಲಿರುವಂತೆ ಬಲೆ ಬೀಸುತ್ತಲೇ ಬಂದಿದೆ ನಮ್ಮ ಪ್ರಭುತ್ವ. ಪ್ರಜಾಪ್ರಭುತ್ವ ಉಳಿದೆಲ್ಲಾ ವ್ಯವಸ್ಥೆಗಳಿಗಿಂತ ಉತ್ತಮವೆಂದು ನಾವು ಸ್ವೀಕರಿಸಿದ್ದೇವೆ. ಆದರೂ ಅದೀಗ ಪುಢಾರಿ ರಾಜಕಾರಣಿಯ ಕಟ್ಟಕಡೆಯ



ಕೆಲಸವೆಂಬಂತೆ ವಾಣಿಜ್ಯೀಕರಣಗೊಳ್ಳುತ್ತಿದೆ. ನಮ್ಮ ಜನಪ್ರತಿನಿಧಿಗಳೇ ನಮ್ಮ ಅಭಿವೃದ್ಧಿಯ ನಿರ್ಣಾಯಕ ಶಾಸನಕರ್ತರು ಎಂದರೆ ಅವರು ಬರಬರುತ್ತ ಶಾಸನಸಭೆಗಳಲ್ಲಿ ನಡೆದುಕೊಳ್ಳುವ ರೀತಿ ನೋಡಿದರೆ ಅಸಹ್ಯ ಹುಟ್ಟಿಸುತ್ತದೆ. ಇವರೆಲ್ಲ ಬಹುತೇಕ ರೈತಕುಟುಂಬಗಳಿಂದಲೇ ಬಂದವರಾದರೂ ಒಮ್ಮೆ ಆಯ್ಕೆಗೊಂಡ ತರುವಾಯ ಬಂದ ದಾರಿಯನ್ನೇ ಮರೆತು ಬಿಡುತ್ತಾರೆ. ಹತ್ತಿ ಬಂದ ಏಣಿಯನ್ನೇ ಒದೆಯುವ ಇವರಿಗೆ ರೈತರ ಮೇಲೆ ಕಿಂಚಿತ್ತೂ ಕಾಳಜಿ ಇಲ್ಲ. ಹಣ-ಅಧಿಕಾರಕ್ಕಾಗಿ ಬಡಿದಾಡುವ ಇವರಿಗೆ ಜನರ ಕಷ್ಟ-ಕಾರ್ಪಣ್ಯಗಳು ಕಾಣಿಸುತ್ತಿಲ್ಲ; ಅವರ ದುಃಖ-ದುಮ್ಮಾನ, ನಿಟ್ಟುಸಿರು ಕೇಳಿಸುತ್ತಿಲ್ಲ. ಇಂತಲ್ಲಿ ಮತದಾರರು ಏನು ಮಾಡಬೇಕು ? ಕಳೆದ ಐವತ್ತು-ಅರವತ್ತು ವರ್ಷಗಳಿಂದಲೂ 'ಈ ಪಕ್ಷ ಸರಿ, ಆ ಪಕ್ಷ ಸರಿ ಎಂದು, ಈ ವ್ಯಕ್ತಿ ಸರಿ, ಆ ವ್ಯಕ್ತಿ ಸರಿ' ಎಂದು ಮತದಾರ ಆಯ್ಕೆ ಮಾಡುವುದರಲ್ಲಿಯೇ ಸೋತು ಸುಣ್ಣವಾಗಿಹೋಗಿದ್ದಾನೆ. 'ದಿನ ಕಳೆದ ಹಾಗೆಲ್ಲಾ ಭುವಿಯ ಮೇಲಣ ಚಿಂತೆ ಸುತ್ತಿ ಸುತ್ತುವುದೇ ಹೊರತು ಬಿಚ್ಚಿಬಿಡುವುದೆಂಬ ನೆಚ್ಚ ನಾಕಾಣೆ' ಎಂಬ ಕವಿವಾಣಿಯಂತಾಗಿದೆ ನಮ್ಮ ಬದುಕು. ರೈತರ, ಕಾರ್ಮಿಕರ, ಬುಡಕಟ್ಟು ಜನರ, ಹೆಂಗಸರ, ಮಕ್ಕಳ, ದೀನದಲಿತರ ದುಃಖ-ದುಮ್ಮಾನಗಳನ್ನು, ಸಾವು-ನೋವುಗಳನ್ನು, ಅಳು-ಆಕ್ರಂದನಗಳನ್ನು ಕೇಳುವವರೇ ಇಲ್ಲವಾಗಿದೆ. ಅಭಿವೃದ್ಧಿ ಎಂದರೆ ಉಳ್ಳವರಿಗೆ ಮಾತ್ರ. ಲಾಭಕೋರ ಉದ್ಯಮಿಗಳ ಕಬ್ಬಿಣದ ಅದಿರು, ಗ್ರಾನೈಟ್ ಮುಂತಾದ ಕಣಿಗಾರಿಕೆಗಳಿಂದ ಕಾಡು, ನಾಡು ಎಲ್ಲವೂ ಕೊಳ್ಳೆಹೋಗುತ್ತಿವೆ. ವಿಶೇಷ ಆರ್ಥಿಕ ಯೋಜನೆಗಳಿಂದ ರೈತರ ಫಲವತ್ತಾದ ಹೊಲಗಳು ಸರ್ಕಾರಿ ರೇಟಿನಲ್ಲಿ ಮಾರಾಟವಾಗುತ್ತಿವೆ. ಹೀಗೆ ಆದಿವಾಸಿ ಗಿರಿಜನರು, ಬುಡಕಟ್ಟುಗಳು, ರೈತರು ಎಲ್ಲರೂ ಈಗ ಅತಂತ್ರ ಸ್ಥಿತಿಗೆ ಮುಟ್ಟುತ್ತಿದ್ದಾರೆ; ಎತ್ತಂಗಡಿಯಾಗುತ್ತಿದ್ದಾರೆ. ಒಂದು ಕಾಲಕ್ಕೆ 'ಉಳುವವನಿಗೇ ಭೂಮಿ' ಎಂದು ಹೇಳುತ್ತಿದ್ದ ಸರ್ಕಾರ ಈಗ 'ಜಮೀನು ನೀಡಿರಿ, ಉದ್ಯೋಗ ಪಡೆಯಿರಿ' ಎಂಬ ಘೋಷಣೆ ಹಾಕಿ ಜನರನ್ನು ಒಕ್ಕಲೆಬ್ಬಿಸುತ್ತಿದೆ. ವಿಶೇಷ ಆರ್ಥಿಕ ವಲಯ (ಎಸ್‌ಇಝಡ್)ಗಳಿಗೆ, ಜಿಲ್ಲಾ ಕೇಂದ್ರ ವಿಮಾನ ನಿಲ್ದಾಣಗಳಿಗೆ, ಕಾರಿಡಾರ್ ರಸ್ತೆಗಳಿಗೆ, ಐಷಾರಾಮ

ನಮ್ಮ ರಾಜ್ಯದಲ್ಲಿ ಸಾಮಾಜಿಕ ನ್ಯಾಯವೆಂಬುದು ಕ್ಷೀಣಿಸುವ ಗತಿ ತಲುಪಿದೆ, ಒಂದೆಡೆ ವರಮಾನವೇನೊ ಅಧಿಕಗೊಳ್ಳುತ್ತಿದೆ. ಆದರೆ ಅದು ಕೇವಲ ಕೆಲವೇ ಶ್ರೀಮಂತರಿಗೆ ಮಾತ್ರ. ಉಳಿದಂತೆ ಬಹುಪಾಲು ಜನರ ಬದುಕು ಕಂಗಾಲಾಗುತ್ತಿದೆ. ಬಡವರ ಮಕ್ಕಳು ಶಾಲೆ ಬಿಡುತ್ತಿದ್ದಾರೆ; ದುಡಿಮೆಗಾರ ಮಹಿಳೆಯರಿಗೆ ಒಳ್ಳೆಯ ಅನ್ನ ಆಹಾರವಿಲ್ಲ. ಆದರೆ ಆರ್ಥಿಕ ಸಲಹೆಗಾರರು ರಾಜ್ಯದ ವರಮಾನ ಏರುಗತಿಯಲ್ಲಿದೆ ಎಂದು ಹೇಳುತ್ತಿದ್ದಾರೆ. ಆಹಾರ ಧಾನ್ಯಗಳು ಗೋದಾಮುಗಳಲ್ಲಿ ಹಾಳಾಗಬಾರದು ಎಂದು ಸುಪ್ರೀಮ್ ಕೋರ್ಟ್ ಎಚ್ಚರಿಸಿ ಸೂಕ್ತ ವಿತರಣೆಗೆ ಆಗ್ರಹಿಸುತ್ತಿದೆ. ಆಹಾರವನ್ನು ಮಾನವ ಹಕ್ಕಾಗಿ ಯಾವ ರಾಜ್ಯವೂ ಇನ್ನೂ ಅನುಷ್ಠಾನಗೊಳಿಸುತ್ತಿಲ್ಲ. ಬಜೆಟ್ಟಿನಲ್ಲಿ ಅಂಥ ಸಾಮಾಜಿಕ ನ್ಯಾಯದ ಲಕ್ಷಣಗಳೇ ಕಾಣುತ್ತಿಲ್ಲ. ಜನರನ್ನು ಸ್ವಾವಲಂಬನೆಗೊಳಿಸುವುದಕ್ಕೆ ಬದಲಾಗಿ ಸೀರೆ-ಕಣ-ತಾಳಿ-ಪಂಚೆ ಹಂಚುವ ಮೂಲಕ ಅವರನ್ನು ಹಂಗಿನಲ್ಲಿಡಲು ಹವಣಿಸುತ್ತಿದೆ ಸರ್ಕಾರ.

ಹೋಟೆಲ್-ರೆಸಾರ್ಟ್‌ಗಳಿಗೆ, ವಿದೇಶಿಯರ ಟೌನ್‌ಶಿಪ್‌ಗಳಿಗೆ ರೈತರ ಫಲವತ್ತಾದ ಗದ್ದೆ, ತೋಟ, ಹೊಲಗಳು ಹರಾಜು ಹೋಗುತ್ತಿವೆ. ಕಡೆಗೆ ಉದ್ಯೋಗ ಹುಡುಕಿ ನಗರಗಳಿಗೆ ವಲಸೆ ಬರುವ ಜನರೆಲ್ಲ ಶುದ್ಧ ನೀರು, ಗಾಳಿ, ಪೌಷ್ಟಿಕ ಆಹಾರದ ಕೊರತೆಯಿಂದ ಕೊಂಪೆಗಳಲ್ಲಿ ನರಕ ಅನುಭವಿಸಬೇಕಾಗಿದೆ; ಉಳ್ಳವರಿಗೆ ಮಾತ್ರ ಶಿಲ್ಪಶಿಲಾಸೌಧಗಳು !

ನಮ್ಮ ರಾಜ್ಯದಲ್ಲಿ ಸಾಮಾಜಿಕ ನ್ಯಾಯವೆಂಬುದು ಕ್ಷೀಣಿಸುವ ಗತಿ ತಲುಪಿದೆ; ಒಂದೆಡೆ ವರಮಾನವೇನೂ ಅಧಿಕಗೊಳ್ಳುತ್ತಿದೆ. ಆದರೆ ಅದು ಕೇವಲ ಕೆಲವೇ ಶ್ರೀಮಂತರಿಗೆ ಮಾತ್ರ. ಉಳಿದಂತೆ ಬಹುಪಾಲು ಜನರ ಬದುಕು ಕಂಗಾಲಾಗುತ್ತಿದೆ. ಬಡವರ ಮಕ್ಕಳು ಶಾಲೆ ಬಿಡುತ್ತಿದ್ದಾರೆ; ದುಡಿಮೆಗಾರ ಮಹಿಳೆಯರಿಗೆ ಒಳ್ಳೆಯ ಅನ್ನ ಆಹಾರವಿಲ್ಲ. ಆದರೆ ಆರ್ಥಿಕ ಸಲಹೆಗಾರರು ರಾಜ್ಯದ ವರಮಾನ ಏರುಗತಿಯಲ್ಲಿದೆ ಎಂದು ಹೇಳುತ್ತಿದ್ದಾರೆ. ಆಹಾರ ಧಾನ್ಯಗಳು ಗೋದಾಮುಗಳಲ್ಲಿ ಹಾಳಾಗಬಾರದು ಎಂದು ಸುಪ್ರೀಮ್ ಕೋರ್ಟ್ ಎಚ್ಚರಿಸಿ ಸೂಕ್ತ ವಿತರಣೆಗೆ ಆಗ್ರಹಿಸುತ್ತಿದೆ. ಆಹಾರವನ್ನು ಮಾನವ ಹಕ್ಕಾಗಿ ಯಾವ ರಾಜ್ಯವೂ ಇನ್ನೂ ಅನುಷ್ಠಾನಗೊಳಿಸುತ್ತಿಲ್ಲ. ಬಜೆಟ್ಟಿನಲ್ಲಿ ಅಂಥ ಸಾಮಾಜಿಕ ನ್ಯಾಯದ ಲಕ್ಷಣಗಳೇ ಕಾಣುತ್ತಿಲ್ಲ. ಜನರನ್ನು ಸ್ವಾವಲಂಬನೆಗೊಳಿಸುವುದಕ್ಕೆ ಬದಲಾಗಿ ಸೀರೆ-ಕಣ-ತಾಳಿ-ಪಂಚೆ ಹಂಚುವ ಮೂಲಕ ಅವರನ್ನು ಹಂಗಿನಲ್ಲಿಡಲು ಹವಣಿಸುತ್ತಿದೆ ಸರ್ಕಾರ.

ಹಿಂದೆಂದೂ ಕಂಡು ಕೇಳರಿಯದ ಬಿಕ್ಕಟ್ಟುಗಳು ಈಗ ನಮ್ಮ ರಾಜ್ಯದಲ್ಲಿ ಕಾಣಿಸಿಕೊಳ್ಳುತ್ತಿವೆ. ಶಿಕ್ಷಣ ಕ್ಷೇತ್ರದಲ್ಲಿ ವಿಶ್ವವಿದ್ಯಾಲಯಗಳ ಕುಲಪತಿಗಳೇ ಕ್ರಿಮಿನಲ್ ಮೊಕದ್ದಮೆಗಳನ್ನು ಎದುರಿಸುತ್ತಿದ್ದಾರೆ; ಆರೋಗ್ಯ ಮಂತ್ರಿಗಳ ಸಮ್ಮುಖದಲ್ಲಿಯೇ ಬಾಲ್ಯವಿವಾಹಗಳು ಜರುಗುತ್ತಿವೆ; ಗೋದಾಮುಗಳಲ್ಲಿ ದವಸ ಧಾನ್ಯಗಳು ಕೊಳೆತುಹೋಗುತ್ತಿದ್ದರೂ ಸೂಕ್ತ ವಿತರಣೆಯಾಗುತ್ತಿಲ್ಲ. ರಾಜಧಾನಿಯನ್ನು ಬಿಟ್ಟರೆ ಕರ್ನಾಟಕದ ಉಳಿದ ಭಾಗವೆಲ್ಲಾ ಮಲತಾಯಿ ಧೋರಣೆಗೆ ತುತ್ತಾಗುತ್ತಿದೆ. ಹೀಗೆ ಉಚಿತ ದಾನ-ಧರ್ಮಗಳ ಮೂಲಕ ಜನರನ್ನು ತಮ್ಮ ಹಂಗಿನಲ್ಲಿಟ್ಟುಕೊಳ್ಳುವುದು ಸರ್ಕಾರಕ್ಕೆ ಶೋಭೆ ತರುವುದಿಲ್ಲ. ಮಠಮಾನ್ಯಗಳಿಗೆ ದಾನ ಮಾಡುವುದು, ತೀರ್ಥಯಾತ್ರೆ ಮಾಡುವುದು, ತುಂಬಿದ ಕೆರೆಗೆ ಬಾಗಿನ ಬಿಡುವುದು, ಎಂದೋ ಒಂದು ದಿನ ಬಡವರ ಮನೆಯಲ್ಲಿ ಉಂಡು ಬರುವುದು ಸಂಸ್ಕೃತಿಯಲ್ಲ. ಇಂಥ ಸಂಗತಿಗಳನ್ನು ಸಮರ್ಥಿಸುವುದೇ ನಮ್ಮ ಸಾಂಸ್ಕೃತಿಕ ದಿವಾಳಿತನಕ್ಕೆ ಸಾಕ್ಷಿಯಾಗುತ್ತದೆ.

ಉದ್ಯೋಗ ಕ್ಷೇತ್ರಕ್ಕೆ ಬಂದರೆ ಸದ್ಯ ಎಲ್ಲಿ ನೋಡಿದರೂ ಕೇವಲ 'ಹೈರ್ ಅಂಡ್ ಫೈರ್' ಪದ್ಧತಿಯೇ ಜಾರಿಯಾಗುತ್ತಿದೆ. ಅದಕ್ಕೆ ಶಿಕ್ಷಣ ಕ್ಷೇತ್ರವೂ ಹೊರತಲ್ಲ. ಕೇವಲ ಹತ್ತು ತಿಂಗಳಿಗೆ ಶಿಕ್ಷಕರನ್ನು ತಾತ್ಕಾಲಿಕವಾಗಿ ನೇಮಿಸಿಕೊಂಡು ದಿನಗೂಲಿ ಸಂಬಳ ನೀಡಿ ಕೈಬಿಟ್ಟರೆ ಅವರಿಗೆ ಬೋಧಿಸುವ ಉತ್ಸಾಹವಾದರೂ ಎಲ್ಲಿರುತ್ತದೆ ? ಮಿಕ್ಕಂತೆ ಕೈಗಾರಿಕೆ, ಕುಶಲ ಕಸುಬುಗಳು, ಕೃಷಿಕ್ಷೇತ್ರ ಮುಂತಾಗಿ ಎಲ್ಲೆಡೆಯೂ 'ಒಪ್ಪಂದದ ಮೇರೆಗೆ' ಕೆಲಸ ತೆಗೆಯಲಾಗುತ್ತಿದೆ. ಈಗ ಸಾರ್ವಜನಿಕ ಉದ್ಯೋಗಿಗಳಿಗೆ ಯಾವ ಹಕ್ಕು ಬಾಧ್ಯತೆಗಳೂ ಅನ್ವಯವಾಗುತ್ತಿಲ್ಲ. ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು ಕಾರ್ಮಿಕ ವರ್ಗ ಸಂಘಟಿಕರಾಗುವುದು ಈಗ ಸಾಧ್ಯವೇ ಇಲ್ಲ; ಏಕೆಂದರೆ ಉದ್ಯೋಗ ಖಾತ್ರಿಯೇ ಇಲ್ಲ; ಎಲ್ಲವೂ ತಾತ್ಕಾಲಿಕ.

ಇನ್ನು ಚಳುವಳಿಗಳ ಹಾಡು ಪಾಡು ಹೇಳುವಂತೆಯೇ ಇಲ್ಲ. ೭೦-೮೦ರ ದಶಕದ ರೈತ ಚಳುವಳಿ, ದಲಿತ ಸಂಘರ್ಷ ಸಮಿತಿ, ಭಾಷಾ ಚಳುವಳಿಗಳು ಎರಡನೇ, ಮೂರನೇ ತಲೆಮಾರುಗಳ ನಾಯಕ, ಮರಿನಾಯಕರ ಸ್ವಾರ್ಥ ಹಾಗೂ ಪ್ರತಿಷ್ಠೆಯ ಪರಿಣಾಮವಾಗಿ ಮೂಲೆಗುಂಪಾಗಿ ನೆಲಕಚ್ಚಿ ಹೋಗುತ್ತಿವೆ. ಕನ್ನಡ ನಾಡು, ನುಡಿಯನ್ನು ರಕ್ಷಣೆ ಮಾಡುತ್ತೇವೆ ಎಂದು ಆರ್ಭಟಿಸುವ ಕೆಲವು ಗುಂಪುಗಳು ಹಫ್ತಾ ವಸೂಲಿಯ ಅನೈತಿಕ ಧಂಧೆಗೆ ಇಳಿದಿವೆ ಎಂಬ ಆರೋಪಕ್ಕೆ ಗುರಿಯಾಗಿವೆ. ಕಂಫರ್ಟ್ ಝೋನಿನ ಬುದ್ಧಿಜೀವಿಗಳು ತಟಸ್ಥರಾಗುತ್ತಿದ್ದಾರೆ. ದೂರದರ್ಶನ ಸುದ್ದಿ ಮಾಧ್ಯಮಗಳು ರಂಜನೀಯ ಸುದ್ದಿ ನೀಡುವುದರಲ್ಲಿಯೇ ಮಗ್ನವಾಗಿವೆ; ಪ್ರಜಾಪ್ರಭುತ್ವದ ನಾಲ್ಕನೆಯ ಸ್ತಂಭವೆನಿಸಿದ ಪತ್ರಿಕೆಗಳು ಜಾಹೀರಾತಿಗೆ ಜೋತುಬಿದ್ದು ಸುದ್ದಿ ವಿಶ್ಲೇಷಣೆಯನ್ನೇ ಕೈಬಿಡುತ್ತಿವೆ. ಆದುದರಿಂದ ಪ್ರಭುತ್ವದ 'ಹಲ್ಲುಗುರು' ಇನ್ನಷ್ಟು ಚೂಪಾಗುವ ಲಕ್ಷಣಗಳು ಕಂಡುಬರುತ್ತಿವೆ. ಉಳಿದಂತೆ ಕೆಲವು ಪ್ರಾಮಾಣಿಕ ಜನಪರ ಸಂಘಟನೆಗಳು ನಿಯತ್ತಿನಿಂದ ಜನರ ಮಧ್ಯೆ ಹೋಗಿ ಅವರ ಕಷ್ಟಸುಖಗಳಲ್ಲಿ ಪಾಲುಗೊಂಡರೂ ಜನರ ಉದಾಸೀನತೆಯಿಂದ ಗುಟುಕುಜೀವ ಹಿಡಿದುಕೊಂಡಿವೆಯಷ್ಟೆ. ಹೀಗಿದ್ದೂ ಸಾಮಾಜಿಕ ನ್ಯಾಯಕ್ಕಾಗಿ ಸಿಡಿದೇಳುವ ಹೋರಾಟಗಾರರಿಗೆ ಉಳಿಗಾಲವೇ ಇಲ್ಲ. 'ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು' ಎಂದು ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ, ಕೋಮುವಾದವನ್ನು ಪ್ರತಿಭಟಿಸುವ, ಜಾತಿವಿನಾಶಕ್ಕಾಗಿ ಹಂಬಲಿಸುವ, ಮಹಿಳೆಯರ, ಮಕ್ಕಳ, ದಲಿತರ ಮೇಲಿನ ದೌರ್ಜನ್ಯಗಳ ವಿರುದ್ಧ ಬಂಡೇಳುವ, ಸಂವಿಧಾನಬದ್ಧ ಹಕ್ಕು-ಬಾಧ್ಯತೆಗಳಿಗಾಗಿ ಹೋರಾಡುವ ಯುವಶಕ್ತಿಯನ್ನು ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಬಂದೂಕಿನ ಮೊನೆಯಿಂದ ಬಾಯಿ ಮುಚ್ಚಿಸಲಾಗುತ್ತಿದೆ.



ಹಾಗೂ ಕೆಲವರು ದಮನಿತರ ದನಿಯಾಗಿ ಬಾಯಿ ತೆರೆದರೆ ಸಾಕು ಅಂಥವರನ್ನು 'ನಕ್ಸಲೈಟ್ಸ್' ಎಂಬ ಹಣೆಪಟ್ಟಿ ಕಟ್ಟಿ 'ಇವರು ಜನಪರ ಹೋರಾಟಗಾರರು, ಇವರು ಭೂಗತ ಕ್ರಿಮಿನಲ್ಸ್' ಎಂದು ಭೇದಭಾವ ಅರಿಯದ, 'ಟ್ರಿಗರ್‌ಹ್ಯಾಪಿ'ಯಾಗಿ ಸುಖಿಸುವ ಪೊಲೀಸ್ ಪಡೆಯಿಂದ 'ಫೇಕ್ ಎನ್‌ಕೌಂಟರ್' ನಡೆಸಿ ಅವರ ಕಥೆ ಮುಗಿಸಿಬಿಡಲಾಗುತ್ತದೆ. ಇದು ನಮ್ಮ ಪ್ರಜಾತಂತ್ರ ರಾಷ್ಟ್ರದ 'ರಕ್ತ ಚರಿತಂ' ಎಂಬ ಹೊಸ ಇತಿಹಾಸ ! ಈ ಕುರಿತು ಮಾನವ ಹಕ್ಕು ಹೋರಾಟ ಸಂಸ್ಥೆಯ ಸದಸ್ಯರು ದೇಶದ ಎಂಟು ದಿಕ್ಕುಗಳಿಗೂ ಹೋಗಿ, ಸತ್ಯಶೋಧನೆ ಮಾಡಿ, ರಾಜ್ಯ ಹಾಗೂ ಕೇಂದ್ರ ಸರ್ಕಾರಗಳಿಗೆ ಸಲ್ಲಿಸಿದ ಟನ್ನುಗಟ್ಟಲೆ ವರದಿಗಳು ಆ 'ಫೇಕ್ ಎನ್‌ಕೌಂಟರ್'ಗಳಲ್ಲಿ ಸತ್ತವರ ಹೆಣದ ಮೂಳೆ ಮಜ್ಜೆಗಳು ಮಣ್ಣಲ್ಲಿ ಮಣ್ಣಾಗಿ ಬೆರೆತುಹೋದರೂ ಕೇಳುವ ದಾತಾರರಿಲ್ಲದೆ ಕತ್ತಲ ಕೋಟೆಯ ಸಂಗ್ರಹಾಲಯದ ಕಡತಗಳೊಂದಿಗೆ ಬಿದ್ದು ಮುಗ್ಗಿಹೋಗುತ್ತಿವೆ. ಇದು ನಮ್ಮ ಬೃಹತ್ ಭಾರತದ ಪ್ರಜಾತಂತ್ರದ ವೈಖರಿ. ಇಂತಲ್ಲಿ ಮಾನವಹಕ್ಕುಗಳ ಸಂರಕ್ಷಣೆಯ ಬಗ್ಗೆ ಹೇಳುವುದಕ್ಕೇನಿದೆ ? ಹೇಳಿದರೂ ಕೂಡ ಹೀಗೆ ಎಲ್ಲರ ಹಕ್ಕುಗಳನ್ನೂ ಕಸಿದುಕೊಂಡು ಹೆಲಿಕಾಪ್ಟರ್, ವಿಮಾನಗಳಲ್ಲಿ ಹಾರಾಡುವ, ನೆಲ ಮುಟ್ಟದ ನಮ್ಮ ಜನಪ್ರತಿನಿಧಿಗಳು ಎನಿಸಿಕೊಂಡವರ ಕಿವಿಗೆ ಬೀಳುವುದೆ ? ಬಿದ್ದರೂ ಅಂಥ ಭ್ರಷ್ಟರಿಂದ ಜನಹಿತ ಕಾರ್ಯ ಎಂದಾದರೂ ಸಾಧ್ಯವೇ ?

ಹೀಗೆ ದೇಶ ಎದುರಿಸುತ್ತಿರುವ ಇಂಥ ಇಕ್ಕಟ್ಟು-ಬಿಕ್ಕಟ್ಟಿನ ಸನ್ನಿವೇಶದಲ್ಲೂ ನಮ್ಮ ರಾಜ್ಯದ, ಮಾನವ ಹಕ್ಕು ಹೋರಾಟ ಆಯೋಗದ ಅಧ್ಯಕ್ಷರಾದ ನ್ಯಾಯಮೂರ್ತಿ ಎಸ್. ಆರ್. ನಾಯಕ್ ಅವರು ನಿರಾಶರಾಗದೆ ಮತದಾರನ ಗುರುತರ ಜವಾಬ್ದಾರಿ ಏನೆಂಬುದನ್ನು ಹೇಳಿ ಹೀಗೆ ಎಚ್ಚರಿಸುತ್ತಾರೆ : ''ಇಂತಹ ಜನಪ್ರತಿನಿಧಿಗಳನ್ನು ಆರಿಸಿ ಕಳಿಸಿದ್ದು ನಮ್ಮ-ನಿಮ್ಮೆಲ್ಲರ ತಪ್ಪಲ್ಲವೆ ? ಇವರಿಂದ ನಿರೀಕ್ಷಿತ ಮಟ್ಟದಲ್ಲಿ ಕೆಲಸವಾಗದಿದ್ದರೆ ನೀವೇ (ವಿದ್ಯಾವಂತ ಜನರು) ಏಕೆ ರಾಜಕೀಯಕ್ಕೆ ಪ್ರವೇಶಿಸಬಾರದು ? ರಾಜಕೀಯ ಶಕ್ತಿ ಇಲ್ಲದಿದ್ದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಏನನ್ನೂ ಸಾಧಿಸಲಾಗದು. ರೈತರು, ಕಾರ್ಮಿಕರು, ಹಿಂದುಳಿದವರು, ಮಹಿಳೆಯರು – ಹೀಗೆ ಎಲ್ಲರ ಹಕ್ಕುಗಳನ್ನು ಕಸಿದುಕೊಂಡು ಜನಪ್ರತಿನಿಧಿಗಳು 'ದರ್ಬಾರು' ನಡೆಸುತ್ತಿದ್ದಾರೆ. ಇವರ ಹೆಲಿಕಾಪ್ಟರ್‌ಗಳನ್ನು ಇಳಿಸಲು ಫಲವತ್ತಾದ ಜಮೀನು ಏಕೆ ಬೇಕು ? ಹೀಗೆ ಜಮೀನು ಸ್ವಾಧೀನಪಡಿಸಿಕೊಳ್ಳುವುದರಿಂದ ರೈತರ ಹಕ್ಕುಗಳು ನಾಶವಾದಂತೆ. ಆದ್ದರಿಂದ ದುಡ್ಡಿನ ಆಸೆಗೆ ನೀವು ಜಮೀನು ಮಾರಿಕೊಳ್ಳಬೇಡಿ'' ಇದು ಅವರ ರೈತಪರ ಕಳಕಳಿಯನ್ನೇ ಎತ್ತಿ ತೋರಿಸುತ್ತಿದೆ. ಈ ಸಂದರ್ಭದಲ್ಲಿ ಅಭಿವೃದ್ಧಿ ದುಃಸ್ಥಿತಿಯ ಕೂಪದಲ್ಲಿ ಬಿದ್ದಿರುವ ಕರ್ನಾಟಕದ ಬಗ್ಗೆ ನಮ್ಮ ಅರ್ಥಶಾಸ್ತ್ರಜ್ಞ ಡಾ|| ಟಿ. ಆರ್. ಚಂದ್ರಶೇಖರ್ ಅವರ ಪ್ರತಿಕ್ರಿಯೆ ಹೀಗಿದೆ : ''ಸದ್ಯ ಆಳುವ ಪಕ್ಷದವರು ನೂರಾನಾಲ್ಕೋ ಅಥವಾ ನೂರಾಐದೋ ಮಂದಿಯಿದ್ದರೆ, ವಿರೋಧ ಪಕ್ಷದಲ್ಲಿ ನೂರಕ್ಕಿಂತ ಅಧಿಕ ಮಂದಿಯಿದ್ದಾರೆ. ಆದರೆ ನಮ್ಮನ್ನು ಆಳುತ್ತಿರುವವರಿಗೆ ಸರ್ಕಾರವೆಂದರೆ ಆಳುವ ಪಕ್ಷ ಮಾತ್ರ ಎನ್ನುವಂತೆ ಕಾಣುತ್ತಿದೆ. ಪ್ರಜಾತಂತ್ರದ ಅರ್ಥವೇ ಗೊತ್ತಿಲ್ಲದಂತೆ ಅವರು ವರ್ತಿಸುತ್ತಿದ್ದಾರೆ. ಕರ್ನಾಟಕವು ಇಂದು ಮತ್ತೊಮ್ಮೆ ಜನಾಂದೋಳನಕ್ಕಾಗಿ ಕಾದು ಕುಳಿತಿದೆ'' (ಸಂವಾದ. ನವೆಂಬರ್, ೨೦೧೦). ಆದಷ್ಟು ಬೇಗ ಈ ಆಂದೋಳನ ಕೈಗೂಡಿ ಅಭಿವೃದ್ಧಿಯ ಹೆಸರಿನಲ್ಲಿ ನಡೆವ ಮಾನವಹಕ್ಕು ಉಲ್ಲಂಘನೆ ನಿಲ್ಲುವಂತಾಗಲಿ.

**ಪ್ರೊ|| ಶಿವರಾಮಯ್ಯ**
ನಂ. ೧೬೨, ಹೊಂಗೆಸಾಲುಮನೆ, ಐಸೆಕ್ ರಸ್ತೆ, ನಾಗರಬಾವಿ ಗ್ರಾಮ, ಬೆಂಗಳೂರು - ೫೬೦ ೦೭೨



# ಉಚಿತ, ಕಡ್ಡಾಯ ಶಿಕ್ಷಣ ಯೋಜನೆ : ಜಾರಿಯಾದೀತೆ ?

**ಪ್ರೊ॥ ಆರ್. ಪಿ. ಪುನಗಿನ**

**ಭಾ**ರತ ಸರಕಾರದ ಸಂವಿಧಾನ ಜಾರಿಯಾದ ಕ್ಷಣದಿಂದ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಪ್ರಯತ್ನ ದೇಶದ ಎಲ್ಲ ರಾಜ್ಯಗಳಲ್ಲಿ ನಡೆದಿದೆ. ಅಂದಿನಿಂದ ಇಂದಿನವರೆಗೆ ಕೇಂದ್ರ ಸರಕಾರವಾಗಲಿ ಅಥವಾ ರಾಜ್ಯ ಸರಕಾರಗಳಾಗಲಿ ಶಿಕ್ಷಣಕ್ಕೆ ಕೊಟ್ಟ ಮಹತ್ವ, ವಾರ್ಷಿಕ ಬಜೆಟ್‌ನಲ್ಲಿ ತೆರೆದಿಟ್ಟ ಮತ್ತು ವ್ಯಯಿಸಿದ ಹಣ ಅಷ್ಟಕ್ಕಷ್ಟೆ. ಈ ದಿಶೆಯಲ್ಲಿ ಮೂರು ದಶಕಗಳವರೆಗೆ, ಅಂದರೆ, ೧೯೭೮ರವರೆಗೆ, ದೂರ ದೂರದ ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳು ಪ್ರಾರಂಭವಾದುವೇ ಹೊರತು ಉಚಿತ ಮತ್ತು ಕಡ್ಡಾಯ ಶಿಕ್ಷಣ ಕನಸಾಗಿಯೇ ಉಳಿಯಿತು. ೧೯೫೦ರಲ್ಲಿ ಸುಮಾರು ೨ ಲಕ್ಷದಷ್ಟಿದ್ದ ಪ್ರಾಥಮಿಕ ಶಾಲೆಗಳು ೧೯೭೮ರ ಹೊತ್ತಿಗೆ ೪.೭ ಲಕ್ಷದಷ್ಟಾದವು. ಸುಮಾರು ಏಳು ಕೋಟಿ ಮಕ್ಕಳು ಕಲಿಯಲು ನೋಂದಾಯಿಸಿಕೊಂಡವು. ಮೂರು ದಶಕಗಳ ನಂತರ ಕೂಡ ಆಗ ಇದ್ದ ಸುಮಾರು ಶೇಕಡ ೪೦ರಷ್ಟು ಶಾಲೆಗಳು ಸುಸಜ್ಜಿತ ಕಟ್ಟಡಗಳಿಲ್ಲದೆ, ತರಬೇತಿ ಪಡೆದ ಶಿಕ್ಷಕರಿಲ್ಲದೆ ಹೀನಾಯ ಸ್ಥಿತಿಯಲ್ಲಿದ್ದುವು ಎಂದು ೧೯೮೪ರಲ್ಲಿ ಪ್ರಕಟವಾದ ಯುನೆಸ್ಕೊ ವರದಿಯಲ್ಲಿ ಉಲ್ಲೇಖಿಸಲಾಗಿದೆ. ಸರಕಾರಗಳ ನಿರ್ಲಕ್ಷ್ಯಕ್ಕೆ ಇದು ಸಾಕ್ಷಿ.

ಈ ವರದಿಯ ಪ್ರಕಾರ, ನಮ್ಮ ದೇಶ ಸ್ವತಂತ್ರವಾಗಿ ಮೂರು ದಶಕಗಳು ಕಳೆದರೂ ಸುಮಾರು ಶೇಕಡ ೩೮ರಷ್ಟು ಗಂಡುಮಕ್ಕಳು ಶೇಕಡ ೬೨ರಷ್ಟು ಹೆಣ್ಣುಮಕ್ಕಳು ಪ್ರಾಥಮಿಕ ಶಿಕ್ಷಣದಿಂದ ದೂರ ಉಳಿದಿದ್ದರು. ಇದಕ್ಕೆ ಕಾರಣ ಕಡುಬಡತನ, ಸಮೀಪದಲ್ಲಿ ಶಾಲೆಗಳಿಲ್ಲದಿರುವುದು ಮತ್ತು ಪಾಲಕರ ನಿರ್ಲಕ್ಷ್ಯ. ಇನ್ನು ಶಾಲೆ ಕಲಿಯಲು ಪ್ರಾರಂಭ ಮಾಡಿ ಅರ್ಧಕ್ಕೇ ಕಲಿಕೆ ನಿಲ್ಲಿಸಿದ ಮಕ್ಕಳ ಪ್ರಮಾಣ ನಮ್ಮ ದೇಶದಲ್ಲಿಯೇ ಹೆಚ್ಚು. ೧೯೬೦ ಮತ್ತು ೧೯೮೦ರ ಅವಧಿಯಲ್ಲಿ ಮಲೇಶಿಯಾ, ಸಿಂಗಾಪುರ ಮತ್ತು ಕೊರಿಯಾ ದೇಶಗಳಲ್ಲಿ ಶೇಕಡ ೯೫ರಷ್ಟು ಮಕ್ಕಳು ಪ್ರಾಥಮಿಕ ಶಿಕ್ಷಣ ಪಡೆಯಲು ನೋಂದಾಯಿಸಿದರು. ಮತ್ತು ಶೇಕಡ ೧೦೦ರಷ್ಟು ಮಕ್ಕಳನ್ನು ಪ್ರಾಥಮಿಕ ಶಿಕ್ಷಣ ಪೂರ್ತಿಯಾಗುವವರೆಗೆ ಉಳಿಸಿಕೊಳ್ಳಲು ಈ ದೇಶಗಳಿಗೆ ಶಕ್ಯವಾಯಿತು. ಆದರೆ, ಈ ಅವಧಿಯಲ್ಲಿ ಭಾರತದಲ್ಲಿ ಶೇಕಡ ೯೫ರಷ್ಟು ಮಕ್ಕಳು ಪ್ರಾಥಮಿಕ ಶಿಕ್ಷಣ ಪಡೆಯಲು ನೋಂದಾಯಿಸಿದರೂ ಶೇಕಡ ೫೦ರಷ್ಟು ಮಕ್ಕಳು ಅರ್ಧಕ್ಕೇ ಶಾಲೆ ಬಿಟ್ಟದ್ದಕ್ಕೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾನೂನು ಜಾರಿಯಾಗದಿರುವುದು ಮತ್ತು ರಾಜಕೀಯ ಇಚ್ಛಾಶಕ್ತಿಯ ಕೊರತೆ ಇವು ಪ್ರಮುಖ ಕಾರಣಗಳಾಗಿವೆ.

ಯುನೆಸ್ಕೊ ೧೯೮೪ರಲ್ಲಿ ನೀಡಿದ್ದ ವರದಿಯ ಕೆಲವು ಶಿಫಾರಸ್ಸುಗಳು :

* ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾನೂನನ್ನು ಜಾರಿಗೆ ತರುವುದು
* ಪ್ರತಿ ಹಳ್ಳಿಯಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಯುವುದು
* ಉತ್ತಮ ಮೂಲಭೂತ ಸೌಕರ್ಯ ಒದಗಿಸುವುದು
* ಮಕ್ಕಳು ಶಾಲೆಗೆ ಬರಲು ಮತ್ತು ಕಲಿಯಲು ಉತ್ಸಾಹ ಬೆಳೆಸಬಲ್ಲ ಕ್ರಮಗಳನ್ನು ಜಾರಿಗೊಳಿಸುವುದು
* ಒಂದು ವರ್ಗದಿಂದ ಎಲ್ಲ ಮಕ್ಕಳು ಮುಂದಿನ ವರ್ಗಕ್ಕೆ ಅಡೆತಡೆಯಿಲ್ಲದೆ ಹೋಗುವ ಪ್ರಕ್ರಿಯೆ ಜಾರಿಗೊಳಿಸುವುದು

ಈ ಯುನೆಸ್ಕೊ ವರದಿಯನ್ನಾಧರಿಸಿ, ಶಾಲೆಬಿಟ್ಟ ಮಕ್ಕಳಿಗೆ ಶಿಕ್ಷಣ ಮುಂದುವರಿಸಲು, ಸಂಜೆ ಶಾಲೆಗಳನ್ನು ತೆರೆಯಲಾಯಿತು. ೬೬೩೧ ಶಾಲೆಗಳಲ್ಲಿ ೧.೯೪ ಕೋಟಿ ಮಕ್ಕಳು ಹಾಜರಾತಿ ಪಡೆದರು. ಆದರೆ, ಇದು ನಮ್ಮ ದೇಶದ ೫.೭ ಕೋಟಿ ಹಳ್ಳಿಗಳಿಗೆ ಸಾಕಾಗಲಿಲ್ಲ. ಮಕ್ಕಳನ್ನು ಶಾಲೆಗೆ ಆಕರ್ಷಿಸಲು ಉಚಿತ ಪಠ್ಯಪುಸ್ತಕ ವಿತರಣೆ, ಮಧ್ಯಾಹ್ನದ ಊಟ, ಸಮವಸ್ತ್ರ ವಿತರಣೆ, ಶಿಷ್ಯವೇತನ ಮುಂತಾದ ಚಿಕ್ಕ ಪುಟ್ಟ ಉತ್ತೇಜಕ ಕಾರ್ಯಕ್ರಮಗಳನ್ನು ಜಾರಿ ಮಾಡಿದ್ದೇ ತಮ್ಮ ಸಾಧನೆ ಎಂದು ರಾಜಕಾರಣಿಗಳು ಬೀಗಿದರು. ಈ ಎಲ್ಲ ಕ್ರಮಗಳು ೧೪ ವರ್ಷದೊಳಗಿನ ಮಕ್ಕಳಿಗೆ ಉಚಿತ ಶಿಕ್ಷಣ ಒದಗಿಸುವ ಪ್ರಯತ್ನಗಳಾದವೇ ಹೊರತು ಕಡ್ಡಾಯ ಶಿಕ್ಷಣ ಕಾನೂನು ಜಾರಿಯಾಗಲಿಲ್ಲ. ದೇಶದಲ್ಲಿಯ ಈ ಶಿಕ್ಷಣ ಸ್ಥಿತಿಗೆ, ಕೇಂದ್ರ ಮತ್ತು ರಾಜ್ಯ ಸರಕಾರಗಳ 'ನಾನಲ್ಲ, ನೀನು', ಎಂದು ಪರಸ್ಪರ ಬೊಟ್ಟು ಮಾಡಿ ಕಾಲ ಮುಂದೂಡುವ ಬೇಜವಾಬ್ದಾರಿತನ ಮತ್ತೊಂದು ಕಾರಣ. ಕೇಂದ್ರ ಸರಕಾರ ಒಮ್ಮೊಮ್ಮೆ ನೆನಪಾದಾಗ ೪೫ನೇ ಕಲಮನ್ನು ಉದಾಹರಿಸಿ, ರಾಜ್ಯಗಳ ಮೇಲೆ ಕಡ್ಡಾಯ ಶಿಕ್ಷಣ ಕಾನೂನು ರಚಿಸಲು ಮತ್ತು ಜಾರಿ ಮಾಡಲು ಒತ್ತಡ ಹೇರುವ ಘನ ಕೆಲಸ ಮಾಡಿದ್ದು ಸರ್ವರಿಗೂ ಗೊತ್ತಿರುವ ವಿಷಯ. ನಮ್ಮ ರಾಜಕಾರಣಿಗಳು ಸಂಸತ್ತಿನಲ್ಲಾಗಲಿ, ವಿಧಾನಸಭೆಗಳಲ್ಲಾಗಲಿ ಭರ್ಜರಿ ಭಾಷಣ ಬಿಗಿಯುವುದರಲ್ಲಿ ನಿಸ್ಸೀಮರು. ೪೫ನೇ ಕಲಮಿಗೆ ಡಿಸೆಂಬರ್ ೧೨, ೨೦೦೨ರಲ್ಲಿ ತಿದ್ದುಪಡಿ ತರಲಾಯಿತು. ಈ ೮೬ನೇ ತಿದ್ದುಪಡಿಯ ಪ್ರಕಾರ, ೪೫ನೇ ಕಲಮಿನಲ್ಲಿ '೧೪ ವರ್ಷದೊಳಗಿನ ಎಲ್ಲ ಮಕ್ಕಳಿಗೆ' ಎಂದಿದ್ದುದನ್ನು '೬ ಮತ್ತು ೧೪ ವರ್ಷದೊಳಗಿನ ಎಲ್ಲಾ ಮಕ್ಕಳಿಗೆ' ಎಂದು

ತಿದ್ದುಪಡಿ ತರಲು ನಮ್ಮ ರಾಜಕಾರಣಿಗಳಿಗೆ ೪೫ ವರ್ಷಗಳು ಬೇಕಾದವು. ಮೇ ೨೦೦೨ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮೂಲಭೂತ ಹಕ್ಕೆಂದು ಪರಿಗಣಿಸಬೇಕೆಂದು ಕೈಗೊಂಡ ೯೩ನೇ ತಿದ್ದುಪಡಿಯು ಮತ್ತೊಂದು ಮಹತ್ವದ ಹೆಜ್ಜೆ.

ಭಾರತದ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಒದಗಿಸುವ ಪ್ರಯತ್ನ ಇಂದು ನಿನ್ನೆಯದಲ್ಲ, ಇದಕ್ಕೆ ಶತಮಾನದ ಇತಿಹಾಸವಿದೆ. ೧೯ನೇ ಶತಮಾನದಲ್ಲಿ, ಸುಶಿಕ್ಷಿತ ಭಾರತೀಯರು ಯೂರೋಪ್ ಮತ್ತು ಬ್ರಿಟನ್ ದೇಶಗಳ ಪ್ರವಾಸದಲ್ಲಿದ್ದಾಗ, ಅಲ್ಲಿಯ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಒದಗಿಸುವ ಮಾಹಿತಿ ಗಮನಿಸಿದ್ದರು. ಆಗಿನ ಬ್ರಿಟನ್‌ನಲ್ಲಿ ೧೮೭೦-೮೦ರ ದಶಕದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣ ಜಾರಿಯಲ್ಲಿದ್ದುದನ್ನು ಕಂಡ ಭಾರತೀಯರು, ಭಾರತದಲ್ಲಿಯೂ ಇಂಥ ಕಾನೂನು ತರಬೇಕು ಎಂದು ೧೮೮೨ರಲ್ಲಿ ಒತ್ತಾಯ ತಂದಿದ್ದರು. ೧೮೮೩ರಲ್ಲಿ ಬರೋಡಾದ ಮಹಾರಾಜರು ಅಮ್ರೇಲಿ ತಾಲೂಕಿನ ಗಂಡುಮಕ್ಕಳಿಗೆ ಇಂಥ ಕಾನೂನು ಜಾರಿ ಮಾಡಿ, ಮುಂದೆ ೧೯೦೬ರಲ್ಲಿ ತಮ್ಮ ಪ್ರಾಂತ್ಯದ ಉಳಿದೆಡೆಗೂ ವಿಸ್ತರಿಸಿದ್ದರು. ಅಲ್ಲದೆ, ತಿರುವಾಂಕೂರು ಮತ್ತು ಮಣಿಪುರ್ ರಾಜವಂಶಸ್ಥರೂ ಈ ದಿಶೆಯಲ್ಲಿ ಪ್ರಯತ್ನಿಸಿದ್ದರು. ೧೯೦೬ರಿಂದ ೧೯೧೧ರ ವರೆಗೆ ಗೋಪಾಲಕೃಷ್ಣ ಗೋಖಲೆಯವರು ಇಂಥ ಕಾನೂನು ಜಾರಿಗೆ ತರಲು ಪ್ರಯತ್ನಿಸಿ ಅಯಶಸ್ವಿಯಾಗಿದ್ದರೂ, ೧೯೧೭ರಲ್ಲಿ ವಿಠ್ಠಲಭಾಯಿ ಪಟೇಲ್ ಅವರು ಜಾರಿಗೊಳಿಸಿದ್ದ ಕಡ್ಡಾಯ ಶಿಕ್ಷಣ ಕಾನೂನು, ಪಟೇಲ್ ಆ್ಯಕ್ಟ್ ಎಂದೇ ಪ್ರಸಿದ್ಧಿ ಪಡೆದಿತ್ತು. ಸ್ವಾತಂತ್ರ್ಯಪೂರ್ವದಲ್ಲಿ ಮದ್ರಾಸ್, ಮೈಸೂರು ಮತ್ತು ಮುಂಬೈ ಮುಂತಾದ ಸುಮಾರು ೨೨ ಪ್ರಾಂತ್ಯಗಳಲ್ಲಿ ಇಂಥ ಕಾನೂನನ್ನು ರಚಿಸಲಾಗಿತ್ತು. ಸ್ವಾತಂತ್ರ್ಯ ನಂತರದಲ್ಲಿಯೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾಯ್ದೆ ರಚಿಸಲು ನಮ್ಮ ರಾಜ್ಯ ಸರಕಾರಗಳು ಹಿಂದೆಬಿದ್ದಿಲ್ಲ. ೧೯೪೭ರಿಂದ ೧೯೬೨ರ ಅವಧಿಯಲ್ಲಿ ಸುಮಾರು ೨೦ ರಾಜ್ಯಗಳು ಇಂಥ ಕಾಯ್ದೆಗಳನ್ನು ಪಾಸ್ ಮಾಡುವಲ್ಲಿ ಯಶಸ್ವಿಯಾಗಿವೆ. ಬರೀ ಕಾಯ್ದೆಗಳು ಮಾತ್ರ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವದಾಗಿದ್ದರೆ, ಭಾರತ ಈಗಾಗಲೇ ಶೇಕಡ ೧೦೦ರಷ್ಟು ಶಿಕ್ಷಿತ ಪ್ರಜೆಗಳನ್ನು ಹೊಂದಿರಬೇಕಿತ್ತು. ಆದರೆ, ವಸ್ತುಸ್ಥಿತಿ ಬೇರೆಯೇ ಇದೆ. ಉಳಿದ ದೇಶಗಳಿಗಿಂತ ನಮ್ಮ ದೇಶದಲ್ಲಿ ಅಶಿಕ್ಷಿತ ಮತ್ತು ಬಾಲಕಾರ್ಮಿಕ ಮಕ್ಕಳ ಸಂಖ್ಯೆ ಹೆಚ್ಚಿರುವುದು ಸರಕಾರಗಳ ಇಚ್ಛಾಶಕ್ತಿಯ ಕೊರತೆಗೆ ಹಿಡಿದ ಕೈಗನ್ನಡಿ. ಬದಲಾಗಿ, ೧೯೯೬ರಿಂದೀಚೆಗೆ ಅಲ್ಲಲ್ಲಿ ಜಾರಿಗೊಳಿಸಿದ ಕಡ್ಡಾಯ ಶಿಕ್ಷಣ ಕಾನೂನು ಕ್ರಮಗಳನ್ನು ಕೈಬಿಟ್ಟು, ಮಕ್ಕಳನ್ನು ಕಡ್ಡಾಯವಾಗಿ ಶಾಲೆಗೆ ಕಳಿಸಬೇಕೆಂದು ಪಾಲಕರ ಮನವೊಲಿಸಬೇಕೆಂಬ ಸಡಿಲ ಧೋರಣೆಗೆ ಶರಣಾದ ರಾಜ್ಯ ಸರಕಾರಗಳು, ರಚಿಸಿದ ಕಾನೂನನ್ನು ಕಾಗದದ ಮೇಲೆಯೇ ಉಳಿಸಿಕೊಂಡಂತಹ ಉದಾಹರಣೆಗಳು ಅನೇಕ.

ಏಪ್ರಿಲ್ ೧, ಮೂರ್ಖರ ದಿನ. ಆದರೆ, ಅದೇ ಏಪ್ರಿಲ್ ೧, ೨೦೧೦ ಭಾರತದ ಮಕ್ಕಳ ಮುಖದಲ್ಲಿ ಮತ್ತೆ ಮಂದಹಾಸ ಮೂಡಿಸಿದ ಶುಭ ದಿನ. ಆಗಸ್ಟ್ ೨೭, ೨೦೦೯ರ ಭಾರತ ಸರಕಾರದ ಗೆಜೆಟ್‌ನಲ್ಲಿ ಪ್ರಕಟಿಸಿದ '೬ರಿಂದ ೧೪ ವರ್ಷದೊಳಗಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾಯ್ದೆ'ಯನ್ನು ಜಾರಿ ಮಾಡಿದ ದಿನ. ಈ ಕಾಯ್ದೆಯ ಮುಖ್ಯಾಂಶಗಳು :

* ೬ರಿಂದ ೧೪ ವರ್ಷದೊಳಗಿನ ಎಲ್ಲ ಮಕ್ಕಳು ಉಚಿತ ಮತ್ತು ಕಡ್ಡಾಯ ಶಿಕ್ಷಣ ಪಡೆಯಲು ಹಕ್ಕುದಾರರು.

**ಉಚಿತ ಮತ್ತು ಕಡ್ಡಾಯ ಶಿಕ್ಷಣ ಯೋಜನೆಯ ಉದ್ದೇಶ, ಅದರಲ್ಲಡಕವಾದ ಅಂಶಗಳು ಆಕರ್ಷಕವಾಗಿವೆ ಮತ್ತು ಪ್ರಶಂಶಾರ್ಹವಾಗಿವೆ ನಿಜ. ಅವುಗಳನ್ನು ಓದಿದರೆ ಸಂತೋಷವಾಗುವುದಂತೂ ಸತ್ಯ. ಸರಕಾರಗಳ ಯೋಜನೆಗಳು ಒಳ್ಳೆಯವೇ ಆಗಿರುತ್ತವೆ, ಆದರೆ, ಯೋಜನೆಯ ಅನುಷ್ಠಾನದ ಬಗೆಗೆ ಯೋಚಿಸಿದರೆ, ನೂರಾರು ಸಂದೇಹಗಳು ಪ್ರಜ್ಞಾವಂತ ಪ್ರಜೆಗಳ ಮನದಲ್ಲಿ ಮೂಡುವುದು ಸಹಜ. ಏಕೆಂದರೆ, ಕಾನೂನು ಮಾಡುವವರು ಚಾಪೆಯ ಕೆಳಗೆ ನುಸುಳುವವರಾದರೆ, ಅದನ್ನು ಅನುಷ್ಠಾನಗೊಳಿಸಲು ಹೊಣೆಗಾರರಾದ ಕೆಲವು ರಾಜಕಾರಣಿಗಳು ಮತ್ತು ಅಧಿಕಾರಿಗಳು, ರಂಗೋಲಿಯ ಕೆಳಗೆ ನುಸುಳುವಂಥವರು. ನಮ್ಮ ದೇಶದಲ್ಲಿ ಇಂಥ ಭ್ರಷ್ಟರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ದಿನಪತ್ರಿಕೆಯ ಕೆಲವು ಸುದ್ದಿಗಳು ಇದನ್ನು ಪುಷ್ಟೀಕರಿಸುತ್ತವೆ. 'ವೃದ್ಧಾಪ್ಯ ವೇತನ, ವಿಧವಾ ವೇತನ, ಉದ್ಯೋಗ ಖಾತ್ರಿ ಯೋಜನೆಗಳಲ್ಲಿ ಕೋಟ್ಯಂತರ ರೂಪಾಯಿಗಳ ಅವ್ಯವಹಾರ, ತನಿಖೆ ಮುಂದುವರಿದಿದೆ', 'ಮಕ್ಕಳು, ಮಹಿಳೆಯರು, ಬಾಣಂತಿಯರಿಗೆ ಪೌಷ್ಟಿಕ ಆಹಾರ ನೀಡುವ ಮೂಲಕ ಅವರನ್ನು ಸದೃಢರನ್ನಾಗಿಸಲು ಜಾರಿಗೆ ತಂದ ಸಮಗ್ರ ಶಿಶು ಅಭಿವೃದ್ಧಿ ಯೋಜನೆ ಇಂದು ಭ್ರಷ್ಟಾಚಾರದ ಕಣಜವಾಗಿದೆ. ಇದರಿಂದ ಸರಕಾರದ ಕೋಟ್ಯಂತರ ರೂಪಾಯಿ ಅನುದಾನ ಸೋರಿಹೋಗುತ್ತಿದ್ದು ಯೋಜನೆಯ ಉದ್ದೇಶವೇ ಕವಲು ದಾರಿಯಲ್ಲಿ ಸಾಗಿದೆ.**

* ಯೋಜನೆ ೨೦೧೧ರಿಂದ ಆರಂಭ. ೮ ವರ್ಷಗಳಲ್ಲಿ ಸಂಪೂರ್ಣ ಗುರಿ ಸಾಧನೆ.

* ಯೋಜನೆ ಜಾರಿಗೆ ಹಣಕಾಸು ಆಯೋಗದಿಂದ ರಾಜ್ಯಗಳಿಗೆ ೨೫ ಸಾವಿರ ಕೋಟಿ ರೂಪಾಯಿ ಮಂಜೂರು.

* ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಶೇಕಡ ೨೫ ಸೀಟು ಮೀಸಲಿಡಬೇಕು. ತಪ್ಪಿದರೆ ದಂಡ.

* ಖಾಸಗಿ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ಮಕ್ಕಳ ವೆಚ್ಚವನ್ನು ಸರಕಾರವೇ ಭರಿಸುವುದು.

* ಸಮೀಪದ ಶಾಲೆ ಎಂದರೆ ಅದು ೧ ಕಿ.ಮೀ. ವ್ಯಾಪ್ತಿಯಲ್ಲಿರಬೇಕು. (೧ರಿಂದ ೫ನೇ ತರಗತಿಯವರೆಗೆ)

* ೬ರಿಂದ ೮ನೇ ತರಗತಿಯವರೆಗೆ ಶಾಲೆ ೩ ಕಿ.ಮೀ. ಅಂತರದಲ್ಲಿರಬೇಕು.

* ಶಾಲೆಗಳು ಈ ನಿರ್ದಿಷ್ಟ ದೂರದಲ್ಲಿರದಿದ್ದರೆ, ರಾಜ್ಯ ಸರಕಾರಗಳು ಉಚಿತ ಸಾರಿಗೆ ವ್ಯವಸ್ಥೆ ಕಲ್ಪಿಸಿಕೊಡಬೇಕು.

* ಸದ್ಯಕ್ಕೆ ೫ನೇ ತರಗತಿಯವರೆಗೆ ಇದ್ದ ಶಾಲೆಗಳಲ್ಲಿ ೬, ೭ ಮತ್ತು ೮ನೇ ತರಗತಿಗಳನ್ನು ಪ್ರಾರಂಭ ಮಾಡಬೇಕು.

* ಪ್ರತಿ ವರ್ಗಕ್ಕೊಂದು ಸುಸಜ್ಜಿತ ಕ್ಲಾಸ್‌ರೂಮು, ಆಟದ ಮೈದಾನ, ಪ್ರಧಾನ ಗುರುಗಳಿಗೆ ಮತ್ತು ಆಡಳಿತಕ್ಕಾಗಿ ಕಟ್ಟಡ, ಗಂಡು ಮತ್ತು ಹೆಣ್ಣುಮಕ್ಕಳಿಗೆ ಪ್ರತ್ಯೇಕ ಶೌಚಾಲಯಗಳು ಇರಬೇಕು.

* ಪ್ರತಿ ೪೦ ಮಕ್ಕಳಿಗೆ ಒಬ್ಬ ಮಾಸ್ತರರು ಇರಬೇಕು.

ಆಹಾ! ಉಚಿತ ಮತ್ತು ಕಡ್ಡಾಯ ಶಿಕ್ಷಣ ಯೋಜನೆಯ ಉದ್ದೇಶ, ಅದರಲ್ಲಡಕವಾದ ಅಂಶಗಳು ಆಕರ್ಷಕವಾಗಿವೆ ಮತ್ತು ಪ್ರಶಂಶಾರ್ಹವಾಗಿವೆ ನಿಜ. ಅವುಗಳನ್ನು ಓದಿದರೆ ಸಂತೋಷವಾಗುವುದಂತೂ ಸತ್ಯ. ಸರಕಾರಗಳ ಯೋಜನೆಗಳು ಒಳ್ಳೆಯವೇ ಆಗಿರುತ್ತವೆ, ಆದರೆ, ಯೋಜನೆಯ ಅನುಷ್ಠಾನದ ಬಗೆಗೆ ಯೋಚಿಸಿದರೆ, ನೂರಾರು ಸಂದೇಹಗಳು ಪ್ರಜ್ಞಾವಂತ ಪ್ರಜೆಗಳ ಮನದಲ್ಲಿ ಮೂಡುವುದು ಸಹಜ. ಏಕೆಂದರೆ, ಕಾನೂನು ಮಾಡುವವರು ಚಾಪೆಯ ಕೆಳಗೆ ನುಸುಳುವವರಾದರೆ, ಅದನ್ನು ಅನುಷ್ಠಾನಗೊಳಿಸಲು ಹೊಣೆಗಾರರಾದ ಕೆಲವು ರಾಜಕಾರಣಿಗಳು ಮತ್ತು ಅಧಿಕಾರಿಗಳು, ರಂಗೋಲಿಯ ಕೆಳಗೆ ನುಸುಳುವಂಥವರು. ನಮ್ಮ ದೇಶದಲ್ಲಿ ಇಂಥ ಭ್ರಷ್ಟರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ದಿನಪತ್ರಿಕೆಯ ಕೆಲವು ಸುದ್ದಿಗಳು ಇದನ್ನು ಪುಷ್ಟೀಕರಿಸುತ್ತವೆ. 'ವೃದ್ಧಾಪ್ಯ ವೇತನ, ವಿಧವಾ ವೇತನ, ಉದ್ಯೋಗ ಖಾತ್ರಿ ಯೋಜನೆಗಳಲ್ಲಿ ಕೋಟ್ಯಂತರ ರೂಪಾಯಿಗಳ ಅವ್ಯವಹಾರ, ತನಿಖೆ ಮುಂದುವರಿದಿದೆ', 'ಮಕ್ಕಳು, ಮಹಿಳೆಯರು, ಬಾಣಂತಿಯರಿಗೆ ಪೌಷ್ಟಿಕ ಆಹಾರ ನೀಡುವ ಮೂಲಕ ಅವರನ್ನು ಸದೃಢರನ್ನಾಗಿಸಲು ಜಾರಿಗೆ ತಂದ ಸಮಗ್ರ ಶಿಶು ಅಭಿವೃದ್ಧಿ ಯೋಜನೆ ಇಂದು ಭ್ರಷ್ಟಾಚಾರದ ಕಣಜವಾಗಿದೆ. ಇದರಿಂದ ಸರಕಾರದ ಕೋಟ್ಯಂತರ ರೂಪಾಯಿ ಅನುದಾನ ಸೋರಿ ಹೋಗುತ್ತಿದ್ದು ಯೋಜನೆಯ ಉದ್ದೇಶವೇ ಕವಲು ದಾರಿಯಲ್ಲಿ ಸಾಗಿದೆ.

**ಪ್ರೊ॥ ಆರ್. ಪಿ. ಪುನಗಿನ**
ನಂ. ೯೮೩, 'ಸರಸ್ವತಿ', ಮಹಾವೀರನಗರ
ಬೆಳಗಾವಿ - ೫೯೦ ೦೦೮

ಪ್ರೊ|| ಬರಗೂರು ರಾಮಚಂದ್ರಪ್ಪ

(ದಿನಾಂಕ: ೮-೬-೧೯೯೧ರಂದು ನಾನು, ಬೆಂಗಳೂರಿನ ರಾಜಾಜಿನಗರದ 'ಕುಮಾರವ್ಯಾಸ ಮಂಟಪ'ದಲ್ಲಿ ಮಂಡಿಸಿದ ಉಪನ್ಯಾಸವಿದು. ಈ ಉಪನ್ಯಾಸದ ಹಸ್ತಪ್ರತಿಯು ಸ್ಥಳಾಂತರಗೊಂಡು ಇತ್ತೀಚೆಗೆ ನನಗೆ ಸಿಕ್ಕಿತು. ಸುಮಾರು ೨೦ ವರ್ಷಗಳ ಹಿಂದೆ ಮಂಡಿಸಿದ ಈ ಉಪನ್ಯಾಸದ ಕೆಲವು ವಾಕ್ಯಗಳನ್ನು ಪುನರ್ ಸಂಯೋಜನೆ ಮಾಡಿದ್ದೇನೆ. ಆದರೆ ಅಂದಿನ ಅಭಿಪ್ರಾಯಗಳನ್ನು ಹಾಗೇ ಉಳಿಸಿಕೊಂಡಿದ್ದೇನೆ – ಲೇಖನದಲ್ಲಿ ಮತ್ತು ಮನಸ್ಸಿನಲ್ಲಿ.)

*– ಲೇಖಕ*



# ಬಸವಣ್ಣ ಮತ್ತು ಗಾಂಧಿ



ಬಸವಣ್ಣ ಮತ್ತು ಗಾಂಧಿ – ಇಬ್ಬರೂ ಮಹಾನ್ ಸಾಧಕರು. ಆದರೆ ಇಬ್ಬರನ್ನೂ ಒಟ್ಟಿಗೆ ಇಟ್ಟು ತೌಲನಿಕವಾಗಿ ಅರ್ಥಮಾಡಿಕೊಳ್ಳುವುದಕ್ಕೆ ಇರುವ ಪ್ರೇರಣೆಗಳೇನು ಎಂಬ ಪ್ರಶ್ನೆ ನನ್ನನ್ನು ಕಾಡಿಸಿದ್ದುಂಟು. ಪ್ರಶ್ನೆಗಳು ಉತ್ತರ ಹುಡುಕುವ ಶೋಧಗಳಾದಾಗ ಅರ್ಥಪೂರ್ಣವಾಗುತ್ತವೆ ಮತ್ತು ಅರ್ಥಪೂರ್ಣವಾದದ್ದನ್ನು ಉತ್ತರ ರೂಪದಲ್ಲಿ ದೊರಕಿಸಿಕೊಡುತ್ತವೆ. ಈ ನಿಟ್ಟಿನಲ್ಲಿ ನನಗೆ ಮೊದಲು ಎದುರಾದದ್ದು ಈ ಇಬ್ಬರ ಚಾರಿತ್ರಿಕ ಸಂದರ್ಭಗಳು.

ಬಸವಣ್ಣನವರ ಚಾರಿತ್ರಿಕ ಸಂದರ್ಭಕ್ಕೂ ಗಾಂಧೀಜಿಯವರ ಚಾರಿತ್ರಿಕ ಸಂದರ್ಭಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಬಸವಣ್ಣನವರ ಚಾರಿತ್ರಿಕ ಸಂದರ್ಭದ ಚಾಲಕಶಕ್ತಿಯಾಗಿದ್ದದ್ದು ರಾಜಕೀಯವಾಗಿ ರಾಜಶಾಹಿ, ಸಾಮಾಜಿಕವಾಗಿ ವೈದಿಕ ಪುರೋಹಿತಶಾಹಿ. ಗಾಂಧೀಜಿಯವರ ಚಾರಿತ್ರಿಕ ಸಂದರ್ಭದ ಚಾಲಕಶಕ್ತಿಯಾಗಿದ್ದದ್ದು ಬ್ರಿಟಿಷ್ ವಸಾಹತುಶಾಹಿ ಮತ್ತು ಸಾಮಾಜಿಕವಾಗಿ ಸ್ಥಿತ್ಯಂತರದ ಅಂಚಿನಲ್ಲಿದ್ದ ತಲ್ಲಣಗಳ ಬಹುರೂಪಿ. ಹೀಗಾಗಿ ಇಬ್ಬರ ಆದ್ಯತೆ ಮತ್ತು ಆಯ್ಕೆಯ ಮಾರ್ಗಗಳನ್ನು ಅವರವರ ಚಾರಿತ್ರಿಕ ಸಂದರ್ಭಗಳೂ ಪ್ರೇರೇಪಿಸಿದವು. ಹೀಗಾಗಿ ಬಸವಣ್ಣನವರಿಗೆ ಸಮುದಾಯದ ಧಾರ್ಮಿಕ ಸ್ವಾತಂತ್ರ್ಯ, ಗಾಂಧೀಜಿಯವರಿಗೆ ರಾಜಕೀಯ ಸ್ವಾತಂತ್ರ್ಯ ಮುಖ್ಯವಾಯಿತು. ಇವರಿಬ್ಬರ ಕ್ರಿಯೆ ಮತ್ತು ಚಿಂತನೆಗಳಲ್ಲಿ ಬೇರೆ ಸಂಗತಿಗಳೂ ಇದ್ದವಾದರೂ ಅವು ಮೊದಲ ಸಾಲಿನಲ್ಲಿರಲಿಲ್ಲ. ಇದು ಸಹಜವೂ ಹೌದು. ಬಹುಮುಖ್ಯ ಸಂಗತಿಯೆಂದರೆ – ಇವರಿಬ್ಬರೂ ತಂತಮ್ಮ ವೈಯಕ್ತಿಕ ಲಾಭಕ್ಕಾಗಿ ಏನನ್ನೂ ಮಾಡಲಿಲ್ಲ. ಉತ್ತಮ ಸಮಾಜದ ನಿರ್ಮಾಣಕ್ಕೆ ಬೇಕಾದ ಕ್ರಿಯಾಶೀಲತೆಯಲ್ಲಿ ವೈಯಕ್ತಿಕತೆಯನ್ನು ಅಂತರ್ಗತಗೊಳಿಸಿಕೊಂಡರು. ವೈಯಕ್ತಿಕ ಮತ್ತು ಸಾಮಾಜಿಕಗಳ ನಡುವೆ ಅಭೇದ ಸಂಬಂಧವನ್ನು ಮೂಡಿಸಿದರು. ತನ್ಮೂಲಕ ನಾಡಿನ ನೆಲಕ್ಕೆ ತಮ್ಮದೇ ಆದ ಜೀವಶಕ್ತಿಯನ್ನು ತುಂಬಿದರು. ಒಂದು ವ್ಯತ್ಯಾಸವೆಂದರೆ, ಬಸವಣ್ಣನವರ ಕಾಲದಲ್ಲಿ ವಚನ ಚಳವಳಿಯೇ ಪ್ರಧಾನ ಮತ್ತು ಪ್ರಮುಖ ಧಾರೆಯಾಗಿತ್ತು. ಉಳಿದ ಧಾರೆಗಳು ವಿರುದ್ಧ ವಲಯದಲ್ಲಿದ್ದವು. (ಉದಾಹರಣೆಗೆ – ವೈದಿಕ ಹಾಗೂ ಜೈನ ಧಾರೆಗಳು). ಆದರೆ ಗಾಂಧೀಜಿಯವರ ಕಾಲದಲ್ಲಿ ವಿರುದ್ಧ ವಲಯಗಳ ಜೊತೆಗೆ ರಾಷ್ಟ್ರೀಯ ಚಳವಳಿಯ ಭಿನ್ನಧಾರೆಗಳೂ ಅಸ್ತಿತ್ವದಲ್ಲಿದ್ದವು. (ಉದಾಹರಣೆಗೆ – ಬಾಲಗಂಗಾಧರ ತಿಲಕರ ರಾಷ್ಟ್ರೀಯ ಧಾರೆ) ಜೊತೆಗೆ ಅಂಬೇಡ್ಕರ್ ಅವರು ಗಾಂಧಿ ವಿಚಾರಗಳ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯ ಹೊಂದಿದ್ದರು. ಸಾಮಾಜಿಕವಾಗಿ ಈ ಭಿನ್ನಾಭಿಪ್ರಾಯ ಸಹಜವೂ ಆಗಿತ್ತು.

ಮತ್ತೊಂದು ಮುಖ್ಯ ಅಂಶವನ್ನು ಇಲ್ಲಿಯೇ ಹೇಳಬೇಕು: ಬಸವಣ್ಣನವರದು ರಾಜಕೀಯ ಸಾಮರಸ್ಯ ಮತ್ತು ಧಾರ್ಮಿಕ ಸಂಘರ್ಷದ ದಾರಿ. ಗಾಂಧಿಯವರದು ರಾಜಕೀಯ ಸಂಘರ್ಷ ಮತ್ತು ಧಾರ್ಮಿಕ ಸಾಮರಸ್ಯದ ದಾರಿ. ನಿಜ; ಬಸವಣ್ಣನವರು ರಾಜಶಾಹಿಯನ್ನು ವಿಮರ್ಶೆಗೆ ಒಳಪಡಿಸಿದ ಕೆಲವು ವಚನಗಳನ್ನು ರಚಿಸಿದ್ದಾರೆ. 'ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಲಿವರಯ್ಯ। ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯ।' ಎಂಬ ಸಾಲುಗಳ ಜೊತೆಗೆ 'ಅರಸನ ಮನೆಯಲ್ಲಿ ಅರಸಿಯಾಗಿಪ್ಪುದರಿಂದ। ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯ' ಎಂಬ ಸಾಲುಗಳನ್ನೂ ಇಲ್ಲಿ ಉಲ್ಲೇಖಿಸಬಹುದು; ಅಲ್ಲದೆ, ಹರಿಹರ ಕವಿಯ 'ಬಸವರಾಜದೇವರ ರಗಳೆ'ಯಲ್ಲಿ ಬರುವ ಬಿಜ್ಜಳ ಮತ್ತು ಬಸವಣ್ಣನವರ ಮುಖಾಮುಖಿಯನ್ನೂ ಗಮನಿಸಬಹುದು. ಈ ಮುಖಾಮುಖಿಯ ಹಿಂದೆ ಇದ್ದದ್ದು ಧಾರ್ಮಿಕ ಕಾರಣವೇ ಹೊರತು ರಾಜಕೀಯ ಕಾರಣವಲ್ಲ. ರಾಜಶಾಹಿಯನ್ನು ಒಪ್ಪಿಕೊಂಡೇ ಸಮಾಜೋಧಾರ್ಮಿಕ ಪಲ್ಲಟಗಳಲ್ಲಿ ರಚನಾತ್ಮಕವಾಗಿ ತೊಡಗುವುದು ಬಸವಣ್ಣನವರ ಕಾಲದ ಅನಿವಾರ್ಯತೆ. ಆದರೆ ಗಾಂಧೀಜಿಯವರ ಪ್ರಧಾನ ಕ್ರಿಯಾಶೀಲತೆಯಿದ್ದದ್ದು ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ. ಅವರು ಸಮುದಾಯವನ್ನು ಸಂಘಟಿಸಹೊರಟದ್ದು ಬ್ರಿಟಿಷರ ಆಡಳಿತದಿಂದ ಮುಕ್ತವಾದ ಸ್ವತಂತ್ರ ಭಾರತದ ಅಸ್ತಿತ್ವಕ್ಕಾಗಿ. ಈ ರಾಜಕೀಯ ಸಂಘರ್ಷಕ್ಕಿಳಿದ ಅವರ ವಿಚಾರ ಪ್ರಣಾಲಿಯ ವಿಶೇಷವೆಂದರೆ ಸಾಮಾಜಿಕ ಮತ್ತು ಧಾರ್ಮಿಕ ಚಿಂತನೆ ಮತ್ತು

ಪ್ರತಿಪಾದನೆಗಳ ನಿರಂತರತೆ. ಅತ್ಯಂತ ಜಾತ್ಯತೀತ ಹಾಗೂ ಧರ್ಮಾತೀತ ಸ್ವಾತಂತ್ರ್ಯ ಹೋರಾಟವನ್ನು ಕಟ್ಟಿದ ಗಾಂಧೀಜಿ ಸನಾತನ ಹಿಂದೂ ಧರ್ಮದಲ್ಲಿ ಅಚಲ ನಂಬಿಕೆಯನ್ನಿಟ್ಟು ಕೊಂಡಿದ್ದರು. ಈ ಅಚಲ ನಂಬಿಕೆಯು ಅವರ ಸಾಮಾಜಿಕ ಚಿಂತನೆಗಳನ್ನೂ ಪ್ರೇರೇಪಿಸುತ್ತ ಬಂದಿತು. ಇದರ ಫಲವಾಗಿ, ಅವರು ಧಾರ್ಮಿಕ ಸನಾತನ ಮೌಲ್ಯಗಳ ಜೊತೆ ಸಂಘರ್ಷ ಕ್ಕಿಳಿಯಲಿಲ್ಲ; ಬದಲಾಗಿ ವ್ಯಾಖ್ಯಾನ-ಪುನರ್ ವ್ಯಾಖ್ಯಾನಗಳ ಮೂಲಕ ತಮ್ಮದೇ ಆದ ತಿಳುವಳಿಕೆಯನ್ನು ಮಂಡಿಸ ತೊಡಗಿದರು. ರಾಜಕೀಯವಾಗಿ ಮಾತ್ರ ಸದಾ ಸಂಘರ್ಷಕ್ಕೆ ಸಿದ್ಧವಾಗಿದ್ದರು; ಸತ್ಯಾಗ್ರಹವೆಂಬ ಮೌಲಿಕ ಸಾಧನವನ್ನು ಸಂಘರ್ಷದ ಕೇಂದ್ರಕ್ಕೆ ತಂದು ನಿಲ್ಲಿಸಿದರು.

ಹೀಗೆ, ಬಸವಣ್ಣ ಮತ್ತು ಗಾಂಧೀಜಿಯವರ ಚಾರಿತ್ರಿಕ ಅನಿವಾರ್ಯತೆ ಮತ್ತು ಆದ್ಯತೆಯ ಆಯ್ಕೆಗಳು ಮನೋ ಧರ್ಮ ಮತ್ತು ಕ್ರಿಯಾಧರ್ಮಗಳಲ್ಲೂ ವ್ಯತ್ಯಾಸವನ್ನು ಕಾಣಿಸಿದವು. ಸಂತ ಮನೋಧರ್ಮ ಹೊಂದಿದ್ದ ಗಾಂಧೀಜಿ ರಾಜಕೀಯ ಕ್ರಿಯೆಯಲ್ಲಿ ತೊಡಗಿದರು. ರಾಜಕೀಯ ಕ್ರಿಯೆಯಲ್ಲಿ ತೊಡಗಿದ್ದ ಬಸವಣ್ಣ ಸಂತ ಮನೋಧರ್ಮ ರೂಪಿಸಿಕೊಂಡರು. ಗಾಂಧೀಜಿ ರಾಜಕೀಯ ಸ್ವಾತಂತ್ರ್ಯಕ್ಕೆ ಆದ್ಯತೆ ನೀಡಿದರೆ, ಬಸವಣ್ಣ ಧಾರ್ಮಿಕ ಸ್ವಾತಂತ್ರ್ಯಕ್ಕೆ ಆದ್ಯತೆ ನೀಡಿದರು. ಗಾಂಧೀಜಿಯವರನ್ನು 'ಸಂತ ರಾಜಕಾರಣಿ' ಎಂದು ಬಸವಣ್ಣನವರನ್ನು 'ರಾಜಕೀಯ ಸಂತ' ಎಂದು ಕರೆಯಬಹುದೇನೊ.

ರಾಜಶಾಹಿ ರಾಜಕೀಯದ ನಡುವೆಯಿದ್ದೂ ಬಸವಣ್ಣ ನವರು ನಡೆಸಿದ ಧಾರ್ಮಿಕ ಸ್ವಾತಂತ್ರ್ಯ ಹೋರಾಟದ ಸ್ವರೂಪವನ್ನು ಒಂದಷ್ಟು ವಿಶ್ಲೇಷಿಸುವುದು ಅಗತ್ಯ. ಜಾತಿ ಮತ್ತು ವರ್ಣವ್ಯವಸ್ಥೆ ಪ್ರಬಲವಾಗಿದ್ದು ವೈದಿಕೇತರರನ್ನು ಧಾರ್ಮಿಕವಾಗಿ ದೂರವಿಟ್ಟಿದ್ದ ಸಂದರ್ಭದಲ್ಲಿ ಬಸವಣ್ಣ ನವರು ಹೊಸ ಧಾರ್ಮಿಕತೆಗೆ ಕಾರಣರಾದರು. ಜಾತಿಯ ಕಾರಣಕ್ಕಾಗಿ ದೇವಾಲಯಗಳಿಗೆ ಪ್ರವೇಶ ನಿರಾಕರಿಸಲ್ಪಟ್ಟ ಕರಾಳ ನೀತಿಗೆ ವಿರುದ್ಧವಾಗಿ 'ದೇಹವೇ ದೇವಾಲಯ' ಎಂದರು. ಶಿವಕೇಂದ್ರಿತ ಧಾರ್ಮಿಕ ಚಳವಳಿಯ ಮುಖ್ಯ ಚಾಲಕ ಶಕ್ತಿಯಾದರು; ಕಾಯಕ ಜೀವಿಗಳೆಲ್ಲ ಈ ಧಾರ್ಮಿಕ ಚಳವಳಿಯ ಭಾಗವಾದರು. ಹಿಂದುಳಿದ, ದಲಿತ ಹಾಗೂ ಮಹಿಳಾಲೋಕಕ್ಕೆ ಶಿವಕೇಂದ್ರಿತ ಧಾರ್ಮಿಕ ಸಮಾನತೆಯನ್ನು ದೊರಕಿಸಿಕೊಟ್ಟರು. ಅಂದಿನ ವೈದಿಕ ಧರ್ಮದಾಚೆಗೆ ನಿಂತು ಹೊಸ ಚಿಂತನೆ ಮತ್ತು ಕ್ರಿಯೆಯಲ್ಲಿ ತೊಡಗಿದರು. 'ಶರಣಸತಿ ಲಿಂಗಪತಿ' ಎಂಬ ಕಲ್ಪನೆಯ ಮೂಲಕ ಭಕ್ತಿಯ ಖಾಸಗೀತನವನ್ನು ಪ್ರತಿಪಾದಿಸಿದರು. ಈ ಶಿವಕೇಂದ್ರಿತ ಧಾರ್ಮಿಕ ಚಳವಳಿಯ ಫಲವಾಗಿ ಹುಟ್ಟಿದ್ದು 'ವಚನ ಸಾಹಿತ್ಯ'. ಇದು ಕನ್ನಡಕ್ಕೆ ಸಂದ ಅಪೂರ್ವ ಕೊಡುಗೆ. ದೇವರ ದಾಸಿಮಯ್ಯ, ಅಲ್ಲಮ ಪ್ರಭುವಾದಿಯಾಗಿ ಅನೇಕ ಹಿಂದುಳಿದ ವರ್ಗದವರು, ಮಾದಾರ ಚೆನ್ನಯ್ಯನವ ರಾದಿಯಾಗಿ ದಲಿತರು, ಅಕ್ಕಮಹಾದೇವಿ, ಸೂಳೆ ಸಂಕವ್ವೆ, ಕಾಳವ್ವೆ, ದುಗ್ಗವ್ವೆ, ಮುಕ್ತಾಯಕ್ಕ ಮುಂತಾದ ಮಹಿಳೆಯರು ವಚನ ರಚನೆ ಮಾಡಿದ್ದು ಒಂದು ಐತಿಹಾಸಿಕ ಘಟನೆಯೇ ಸರಿ. ಬಹುದೊಡ್ಡ ಬದಲಾವಣೆಗೆ ಕಾರಣವಾದ ಈ ವಚನ ಚಳವಳಿ ಅಥವಾ ಧಾರ್ಮಿಕ ಸ್ವಾತಂತ್ರ್ಯ ಚಳವಳಿಯು ಆ ಕಾಲಕ್ಕೆ ಒಂದು ಶಕ್ತಿ; ಆದರೆ ಏಕದೈವ ಬದ್ಧತೆಯು ಈ ಕಾಲಕ್ಕೆ ಒಂದು ಮಿತಿ. ಯಾಕೆಂದರೆ, ಇಂದು ಒಂದೇ ದೈವವನ್ನು ಶ್ರೇಷ್ಠ ಎನ್ನುವ ಸಂದರ್ಭದಲ್ಲಿ ನಾವಿಲ್ಲ. ಹರಿ-ಹರ ಶ್ರೇಷ್ಠತೆಯ ಮುಖಾಮುಖಿಯೂ ಇಂದು ಮುಖ್ಯವಲ್ಲ. ಹಿಂದುಳಿದ ವರ್ಗಗಳ ಹಾಗೂ ದಲಿತ ವರ್ಗಗಳ ದೇವರುಗಳು ಕನಿಷ್ಠ ಎನ್ನುವಂತಿಲ್ಲ. ಹೀಗಾಗಿ ಏಕದೇವೋಪಾಸನೆಯ ತತ್ವ ಇಂದಿಗೆ ಪ್ರಸ್ತುತವಾಗು

## ಬಕಾಸುರರು

ಸರದಿಯಂತೆ ದಿನಕ್ಕೊಂದು ಬಂಡಿಯನ್ನವ
ಕಳಿಸಬೇಕೆಂದು ಒಪ್ಪಂದ ಮಾಡಿಕೊಂಡ
ಬಕಾಸುರರಲ್ಲ ಇವರು.

ದೇಶ ದೇಶಗಳ ನಡುವೆ ಕೋಮುವಾದ
ಗಡಿವಿವಾದಗಳೆಂಬ ಸರಣಿ ಸಮಸ್ಯೆಗಳ ಸೃಷ್ಟಿಸಿ
ಆಹಾರ ಸಂಪತ್ತನ್ನು ಕೊಳ್ಳೆಹೊಡೆಯಲು
ಸಂಚು ಹೂಡಿ ಹೊಂಚುಹಾಕಿ ಕುಳಿತ
ಬಕಾಸುರರಿವರು.

ಸರದಿಯಂತೆ ದಿನಕ್ಕೊಂದು ಪ್ರಾಣಿಯನ್ನು
ಭಕ್ಷಣೆಗೆ ಕಳಿಸಬೇಕೆಂದು ಒಪ್ಪಂದ
ಮಾಡಿಕೊಂಡ ಬಕಾಸುರರಲ್ಲ ಇವರು.

ಅಭಿವೃದ್ಧಿಯ ನೆಪದಲ್ಲಿ ಬಡದೇಶಗಳ
ಕಾಡು ಮೇಡುಗಳ ವನ್ಯಸಂಪತ್ತನ್ನು
ಲೂಟಿಮಾಡಿ ಜೀವಸಂಕುಲವನ್ನೇ
ನಾಶಮಾಡಲು ಹುನ್ನಾರ ಹೂಡಿರುವ
ಬಕಾಸುರರಿವರು.

ಸರದಿಯಂತೆ ದಿನಕ್ಕೊಬ್ಬನನ್ನು ಆಹಾರಕ್ಕಾಗಿ
ಕಳಿಸಬೇಕೆಂದು ಒಪ್ಪಂದ ಮಾಡಿಕೊಂಡ
ಬಕಾಸುರರಲ್ಲ ಇವರು.

ತಾವು ತಯಾರಿಸಿದ ಬಂದೂಕು ಬಲಾಮುಗಳನ್ನು
ಮಾರಾಟ ಮಾಡಿ ದೇಶ ದೇಶಗಳ ಮಧ್ಯ
ಜಗಳ ಹಚ್ಚಿ ಯುದ್ಧಕ್ಕೆ ದಾರಿಮಾಡಿಕೊಟ್ಟು
ಮಾನವ ಸಂತತಿಯನ್ನೇ ನಾಶಮಾಡಲು ಹೊರಟಿರುವ
ಬಕಾಸುರರಿವರು.



**ಈಶ್ವರಪ್ಪ ಕಟ್ಟಿಮನಿ**
ಮನೆ ನಂ. ೪೮, ಸಾಯಿರಾಮನಗರ, ರಾಘವೇಂದ್ರ ಲೇಔಟ್, ಹಳೇ ಆಕಾಶವಾಣಿ
ವಿತರಣಾ ಕೇಂದ್ರದ ಹಿಂದುಗಡೆ, ಜೇವರ್ಗಿ ರಸ್ತೆ, ಕಲಬುರ್ಗಿ

ವುದಿಲ್ಲ. ಹಾಗೆಂದು ಶಿವಕೇಂದ್ರಿತ ಧಾರ್ಮಿಕ ಚಳವಳಿಯ ಚಾರಿತ್ರಿಕ ಮಹತ್ವ ಖಂಡಿತ ಕಡಿಮೆಯಾಗುವುದಿಲ್ಲ. ವೈದಿಕ ಜಡತ್ವಕ್ಕೆ ಉತ್ತರವಾಗಿ ಒಂದು ಕೇಂದ್ರಕ್ಕೆ ಧಾರ್ಮಿಕ ವಂಚಿತ ಸಮುದಾಯಗಳನ್ನು ಕರೆತರಲು ಮತ್ತು ಹೊಸ ಧರ್ಮಕ್ಕೆ ಕೇಂದ್ರಶಕ್ತಿಯಾಗಲು ಅಂದು 'ಶಿವ'ನ ಅಗತ್ಯವಿತ್ತು. ಆದರೆ ಈಗ ಧರ್ಮ ಮತ್ತು ದೇವರನ್ನು ನಂಬುವವರು, ಎಲ್ಲ ಧರ್ಮ-ದೇವರುಗಳನ್ನೂ ಸಮಾನವೆಂದು ಭಾವಿಸುವ ಕಾಲಕ್ಕೆ ಕಾಲಿಟ್ಟಿದ್ದೇವೆ. ನಮ್ಮ ಕಾಲದ ಈ ಚಿಂತನೆ ಮತ್ತು ಭಾವನೆಯನ್ನು ಒಳಗೊಳ್ಳುತ್ತಲೇ ವಚನ ಚಳವಳಿಗೆ ಚಾರಿತ್ರಿಕ ಗೌರವ ತೋರಿಸಬೇಕು.

ಬಸವಣ್ಣನವರು ಯಾವ ಧರ್ಮವನ್ನು ವಿರೋಧಿಸಿದರೋ ಅದೇ ಧರ್ಮದ ಆಧುನಿಕ ರೂಪದಲ್ಲಿ ಗಾಂಧೀಜಿಯವರು ನಂಬಿಕೆಯಿಟ್ಟುಕೊಂಡಿದ್ದರು. ಮೂಲ ವೈದಿಕ ಧರ್ಮವೇ ಆನಂತರ ವಿಸ್ತಾರವಾಗುತ್ತ ಹಿಂದೂ ಧರ್ಮವಾಗಿದೆಯೆಂಬ ತಿಳುವಳಿಕೆಯ ಆಧಾರದಲ್ಲಿ ಈ ಮಾತನ್ನು ಹೇಳುತ್ತಿದ್ದೇನೆ. ಅಂದಿನ ವೈದಿಕ ಧರ್ಮ, ಇಂದಿನ ಹಿಂದೂ ಧರ್ಮ - ಜಾತಿ ಮತ್ತು ವರ್ಣವ್ಯವಸ್ಥೆಯನ್ನು ಒಡಲಲ್ಲಿ ಇಟ್ಟುಕೊಂಡೇ ಬೆಳೆದದ್ದು ಈಗ ಇತಿಹಾಸ. ಜಾತಿಯನ್ನು ಹಿಂದೂ ಧರ್ಮದ ಅಡಿಪಾಯವೆಂದು ಭಾವಿಸಿದ್ದ ಗಾಂಧೀಜಿ ಹಿಂದೂ ಧರ್ಮದವರೆಲ್ಲ ಒಂದೇ ಜಾತಿಯೆಂದರು; ಜಾತಿ ಮತ್ತು ವರ್ಣವ್ಯವಸ್ಥೆಗೆ ವಿರುದ್ಧವಾಗಿ ಬಸವಣ್ಣನವರು ಶಿವಭಕ್ತರೆಲ್ಲ ಒಂದೇ ಜಾತಿಯೆಂದರು. ಅದರಂತೆ ಶಿವಭಕ್ತ ಸಂಕುಲವನ್ನು ವಿಸ್ತರಿಸಿದರು. 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲರನು ಒಂದೆ ಎಂಬೆ' ಎನ್ನುವ ಬಸವಣ್ಣನವರು 'ಶಿವಭಕ್ತಿ'ಯನ್ನು ಜಾತಿಭೇದಕ್ಕೆ ವಿರುದ್ಧವಾಗಿ ರೂಪಿಸಿದರು. ಜಾತಿಭೇದಕ್ಕೆ ವಿರುದ್ಧವಾದ 'ಶಿವಭಕ್ತಿ' ಇವತ್ತು 'ಜಾತಿ ಶಕ್ತಿ'ಯಾದದ್ದು ಒಂದು ವಿಪರ್ಯಾಸ. ಅಂದು ಶಿವಭಕ್ತಿಯೆನ್ನುವುದು ವೈದಿಕ ವಿರೋಧದಲ್ಲಿ ಹುಟ್ಟಿದ ಒಂದು ವಿಂಗಡಣೆಯಾಗಿತ್ತು. ಹೀಗಾಗಿ 'ಶಿವಭಕ್ತ'ರಲ್ಲದವರು 'ಭವಿ'ಗಳೆನ್ನಿಸಿಕೊಂಡರು. ಅಲ್ಲಮಪ್ರಭುಗಳು ಭಕ್ತ ಮತ್ತು ಭವಿಗಳ ನಡುವಿನ ವಿಂಗಡನೆಯನ್ನೇ ವಿಡಂಬನೆ ಮಾಡಿದ್ದು, ಇಂದಿಗೂ ಪ್ರಸ್ತುತವಾಗಿದೆ; ಈ ವಿಂಗಡನೆಯ ಮಿತಿಯನ್ನು ಅಲ್ಲಮರು ಅಂದೇ ಹೇಳಿದಂತಾಗಿದೆ: 'ಭವಿಯ ಕಳೆದೆವೆಂಬ ಮರುಳು ಜನಂಗಳು ನೀವು ಕೇಳಿರೆ। ಭವಿಯಲ್ಲವೆ ನಿಮ್ಮ ತನುಗುಣಾದಿಗಳು ?' ಎಂದು ಪ್ರಶ್ನಿಸುವ ಅವರು 'ನಾನು ಭವಿಯ ಪೂಜಿಸಿ ಭವಂ ನಾಸ್ತಿಯಾದೇನು' ಎನ್ನುತ್ತಾರೆ. ಅದು ಬೇರೆಯೇ ಚರ್ಚೆಯಾಗುತ್ತದೆ; ಬಿಡಿ.

ಈಗ ಗಾಂಧಿ ವಿಷಯಕ್ಕೆ ಬರೋಣ. ಗಾಂಧಿಯವರು ಜಾತಿ ಮತ್ತು ವರ್ಣವ್ಯವಸ್ಥೆಯ ಬಗ್ಗೆ ಮಾಡಿದ ಆರಂಭಿಕ ಚಿಂತನೆಗಳು ಬಸವಣ್ಣನವರ ವಿಚಾರಧಾರೆಗೆ ಹೊಂದುವುದಿಲ್ಲ. ಗಾಂಧಿಯವರ ಹಿಂದೂಧರ್ಮ ನಿಷ್ಠೆಯೇ ಅವರ ಚಿಂತನೆಗಳ ಒಂದು ಮಿತಿಯಾಗಿದೆ; ಗಾಂಧಿಯಂತಹ ಅಪ್ರತಿಮ ವ್ಯಕ್ತಿತ್ವದ ಒಂದು ವಿಪರ್ಯಾಸವೂ ಆಗಿದೆ. ೧೯೨೦ರ ದಶಕದಲ್ಲಿ ಗಾಂಧೀಜಿ ಜಾತಿಪದ್ಧತಿಯು ವೈಜ್ಞಾನಿಕ ಎಂದೇ ಪ್ರತಿಪಾದಿಸಿದರು. ''ಹಿಂದೂ ಸಮಾಜವು ಜಾತಿಪದ್ಧತಿಯ ಅಸ್ತಿಭಾರದ ಮೇಲೆ ನಿಂತಿರುವುದರಿಂದಲೇ ಅದು ಹೀಗೆ ಗಟ್ಟಿಯಾಗಿದೆ... ಜಾತಿಪದ್ಧತಿಯು ಸಮಾಜದ ನೈಸರ್ಗಿಕ ನಿಯಮ'' ಎಂದು ಹೇಳುತ್ತಾ ನಂಬುತ್ತಾ ಬಂದರು. ಆದರೆ ಅದೇ ಸಂದರ್ಭದಲ್ಲಿ

ಅಡುಗೆಗೆ ದಿನಾ ಒಂದೊಂದು
ಬೇಡಿಕೆ ಇಡ್ತಿದ್ದೀರಲ್ಲಾ
ಇದೇನು ರೆಸಾರ್ಟ್ ಮಾಡಿದ್ರಾ

''ನನಗೆ ಉತ್ತಮ ಅಥವಾ ಕನಿಷ್ಠ ಎಂಬ ಪ್ರಶ್ನೆಯಿಲ್ಲ. ಬೇರೆ ಜಾತಿಗಳಿಗಿಂತ ತಾನು ಉತ್ತಮ ಎಂದು ಭಾವಿಸುವ ಬ್ರಾಹ್ಮಣನು ಬ್ರಾಹ್ಮಣನೇ ಅಲ್ಲ'' (೧೯೨೫) ಎಂದರು. ಆನಂತರ ''ವರ್ಣವ್ಯವಸ್ಥೆಯ ಕಲ್ಪನೆಯಲ್ಲಿ ಯಾವನೇ ಒಬ್ಬನು ಮಿಕ್ಕವರಿಗಿಂತ ಶ್ರೇಷ್ಠನಲ್ಲ. ಬ್ರಾಹ್ಮಣನಿಗಿರುವ ಗೌರವ ಒಬ್ಬ ಭಂಗಿಗೂ ಇದೆ'' ಎಂದು ಭಾವಿಸಿದರು (೧೯೨೭). ಅಂದರೆ ಗಾಂಧಿಯವರ ಜಾತಿ-ವರ್ಣಗಳ ಗ್ರಹಿಕೆಯಲ್ಲೇ ನನ್ನಂಥವರು ಒಪ್ಪದೆ ಇರುವ ಅಂಶಗಳಿವೆ. ಅವರ ಪ್ರಕಾರ ''ಜಾತಿಪದ್ಧತಿಯು ಇಂದಿನ ದುಸ್ಥಿತಿಗೆ ಕಾರಣವಲ್ಲ. ನಮ್ಮ ದುರಾಸೆ ಮತ್ತು ದುರಭಿಮಾನಗಳು ನಮ್ಮನ್ನು ಇಂದಿನ ದಾಸ್ಯಕ್ಕೆ ನೂಕಿವೆ.'' ಗಾಂಧೀಜಿಯವರ ಒಳಗೆ ಒಬ್ಬ ಸನಾತನ ಸಂತನಿದ್ದಾನೆ. ಹಳೆಯದನ್ನು ಅಪನಂಬಿಕೆಯಿಂದ ನೋಡಲು ಆತನಿಗೆ ಸಾಧ್ಯವಾಗುತ್ತಿಲ್ಲ. ಆದರೆ ಎದುರಿನ ವಾಸ್ತವವನ್ನು ಕಾಣುವ ಕಣ್ಣುಗಳೂ ಆತನಿಗಿವೆ. ಹೀಗಾಗಿ ಜಾತಿ ಮತ್ತು ವರ್ಣದ ಕಾರಣಕ್ಕಾಗಿ ಉಂಟಾಗಿರುವ ಅಂತರಗಳ ಅರಿವು ಎದುರಿಗಿದೆ. ಒಳಗೆ ಸನಾತನ ಶ್ರೇಷ್ಠತೆಯ ಸುಳಿಯಿದೆ. ಈ ಒಳ-ಹೊರಗಿನ ವೈರುಧ್ಯದಲ್ಲಿ ಮೂಲ ಜಾತಿತತ್ವದಲ್ಲಿ ನಂಬಿಕೆಯನ್ನೂ ಆಚರಣೆಯಲ್ಲಿನ ಅಸಮತೆಗಳಿಗೆ ವಿರೋಧವನ್ನೂ ವ್ಯಕ್ತಪಡಿಸುವ 'ವೇದಾಂತಿ'ಯಾಗಿ ಗಾಂಧಿ ಕಾಣಿಸುತ್ತಾರೆ. ಆಚರಣೆಯಲ್ಲಿನ ಅಸಮತೆಗಳಿಗೆ ಮೂಲವಿರುವುದು ಜಾತಿ ಮತ್ತು ವರ್ಣವ್ಯವಸ್ಥೆಯಲ್ಲಿ – ಎಂಬ ಅಂಶವನ್ನು ಅವರು ಅರ್ಥಮಾಡಿಕೊಳ್ಳುವ ಮನಸ್ಥಿತಿಯಲ್ಲಿ ಇರಲಿಲ್ಲ. ಇದು ಅವರ ಅಪ್ರಾಮಾಣಿಕತೆಯಲ್ಲ. ತಾವು ಪ್ರಾಮಾಣಿಕವಾಗಿ ನಂಬಿದ್ದನ್ನೇ ಪ್ರತಿಪಾದಿಸುತ್ತಾರೆ; ಆದರೇನು ಮಾಡುವುದು ? ಅವರದು ಪ್ರತಿರೋಧಕ್ಕೆ ಅರ್ಹವಾದ ಪ್ರತಿಪಾದನೆ.

ಬಸವಣ್ಣನವರಿಗೂ ಗಾಂಧೀಜಿಯವರಿಗೂ ವ್ಯತ್ಯಾಸ ಇರುವುದೇ ಇಲ್ಲಿ. ಅಸಮ ಸಮಾಜದ ಮೂಲಗಳನ್ನು ಬಸವಣ್ಣನವರು ಜಾತಿ ಮತ್ತು ವರ್ಣವ್ಯವಸ್ಥೆಯ ತತ್ವದಲ್ಲೇ ಗುರುತಿಸುತ್ತಾರೆ. ಗಾಂಧೀಜಿಯವರು ಮೂಲತತ್ವದಲ್ಲಿ ಸಮತೆ ಮತ್ತು ಆಚರಣೆಯಲ್ಲಿ ಅಸಮತೆಯನ್ನು ಕಾಣುತ್ತಾರೆ. ಗಾಂಧಿ ಕಾಣ್ಕೆಯಲ್ಲಿ ಒಂದು ಅಂಶ ಪ್ರಮುಖವಾಗಿದೆ. ಜಾತಿ ಮತ್ತು ವೃತ್ತಿಗಳನ್ನು ಒಂದಾಗಿ ಕಾಣುವುದು ಗಾಂಧಿಯವರ ಕಾಣ್ಕೆ. ಅವರವರು ಅವರವರ ವೃತ್ತಿಯನ್ನು ಮಾಡುತ್ತಾರೆ. ಅದರಲ್ಲಿ ಪಲ್ಲಟಗಳೇಕೆ ಎಂಬ ಪ್ರಶ್ನೆ ಗಾಂಧೀಜಿಯವರಿಗಿದೆ. ವಂಶವೃತ್ತಿಯನ್ನು ಜಾತಿಪದ್ಧತಿಯ ಆತ್ಮವೆಂದು ಅವರು ಭಾವಿಸುತ್ತಾರೆ. ಕುತೂಹಲದ ಪ್ರಶ್ನೆಯೆಂದರೆ - ಬಸವಣ್ಣನವರ ನೇತೃತ್ವದ ಚಳವಳಿಯಲ್ಲಿ ಶಿವಭಕ್ತರಾಗಿ ಸಮಾನರಾದವರು ತಂತಮ್ಮ ವಂಶವೃತ್ತಿಯನ್ನು (ಕಾಯಕವನ್ನು) ಬಿಟ್ಟರೆ ? ಬಿಡಬೇಕೆಂಬ ಜರೂರು ಇತ್ತೇ ? ಅವತ್ತಿನ ಕಾಯಕ ನಿಷ್ಠೆಯೆಂಬುದು ವಂಶವೃತ್ತಿಯ ನಿಷ್ಠೆಯೇ ಆಗಿತ್ತಲ್ಲವೆ ? ಜಾತಿಮೂಲ ಉತ್ಪಾದನಾ ವಿಧಾನವು ಹಾಗೇ ಮುಂದುವರಿಯಿತಲ್ಲವೆ ? ಪರಿಣಾಮದಲ್ಲಿ ಇದು ಜಾತಿಮೂಲ ಉತ್ಪಾದನಾ ಪದ್ಧತಿಯ ದೃಢೀಕರಣವಾಯಿತಲ್ಲವೆ ?

ಜಾತಿಮೂಲ ಉತ್ಪಾದನಾ ವಿಧಾನವನ್ನು ಸಡಿಲಗೊಳಿಸಲು ಸಾಧ್ಯವಾದದ್ದು ಕೈಗಾರಿಕೀಕರಣದಿಂದ ಎಂಬ ಅಂಶವನ್ನಿಲ್ಲಿ ಗಮನಿಸಬೇಕು. ಇಪ್ಪತ್ತನೇ ಶತಮಾನದಲ್ಲಿ ಕಾಲಿಟ್ಟ ಕೈಗಾರಿಕೀಕರಣವು ಕಾರ್ಖಾನೆಗಳ ಮೂಲಕ ಜಾತಿಮತಗಳನ್ನು ಮೀರಿದ ಸಾಮೂಹಿಕ ಉತ್ಪಾದನಾ ವಿಧಾನಕ್ಕೆ ಕಾರಣವಾಯಿತು. ಕುಲಕಸುಬುಗಳನ್ನು ಮೀರಿದ ಉತ್ಪಾದನಾ ಕ್ರಮದಲ್ಲಿ ಜನರು ಭಾಗವಹಿಸತೊಡಗಿದರು. ಕೈಗಾರಿಕೀಕರಣ ಮಾತ್ರದಿಂದಲೇ ಜಾತಿಪದ್ಧತಿ ನಾಶವಾಗದಿದ್ದರೂ ಶಿಥಿಲವಾದದ್ದು ಸತ್ಯ. ಜಾತಿಮೂಲ ಅಥವಾ ವಂಶಮೂಲ ವೃತ್ತಿಯಿಂದ ಉತ್ಪಾದನಾ ವಿಧಾನ ಸ್ಥಿತ್ಯಂತರಗೊಂಡದ್ದು ವಾಸ್ತವ. ಹನ್ನೆರಡನೇ ಶತಮಾನದಲ್ಲಿ ಕೈಗಾರಿಕೀಕರಣದ ಅಸ್ತಿತ್ವವೇ ಇರಲಿಲ್ಲವಾದ್ದರಿಂದ ಮತ್ತು ಧಾರ್ಮಿಕ ಸಮಾನತೆಯ ಚಳವಳಿಯು ಆರ್ಥಿಕ ಬದಲಾವಣೆಯ ಆಯಾಮಗಳನ್ನು ಪ್ರಧಾನವಾಗಿ ಪಡೆಯಲು ಸಾಧ್ಯವಾಗದ್ದರಿಂದ ಕಾಯಕನಿಷ್ಠೆಯೆನ್ನುವುದು ಗಾಂಧೀಜಿ ಪ್ರತಿಪಾದಿಸಿದ 'ವಂಶವೃತ್ತಿ ಗೌರವ'ವೇ ಆಗಿತ್ತೆಂದು ಭಾವಿಸಬಹುದು. ಹನ್ನೆರಡನೇ ಶತಮಾನದ ಕಾಯಕನಿಷ್ಠೆಯು ಜಾತಿವಿರೋಧದ ನಡುವೆಯೂ ಜಾತಿಮೂಲ ಉತ್ಪಾದನೆಯನ್ನು ಉಳಿಸಿಕೊಂಡ ವೈರುಧ್ಯವನ್ನು ನಾವು ಅಂದಿನ ಚಾರಿತ್ರಿಕ ಸಂದರ್ಭ ಮತ್ತು ಧಾರ್ಮಿಕ ಚಳವಳಿಯ ಸ್ವರೂಪದಲ್ಲಿ ಅರ್ಥಮಾಡಿಕೊಳ್ಳಬಹುದು. ಇಪ್ಪತ್ತನೇ ಶತಮಾನದಲ್ಲಿಯೂ ಗಾಂಧೀಜಿ ಅದೇ ಮಾದರಿಯ ಪ್ರತಿಪಾದನೆ ಮಾಡಿದ್ದು ಅರ್ಥಪೂರ್ಣವೆಂದು ಭಾವಿಸಲಾಗದು.

ಆದರೆ, ಗಾಂಧೀಜಿಯವರ ಚಿಂತನೆ ಇಲ್ಲಿಗೇ ನಿಲ್ಲಲಿಲ್ಲ ಎಂಬುದು ತುಂಬಾ ಮುಖ್ಯವಾದುದು. ಜಾತಿ ಮತ್ತು ವರ್ಣವ್ಯವಸ್ಥೆಯ ಅಪಾಯಗಳನ್ನು ಮುಂದೆ ಮನಗಂಡ ಗಾಂಧೀಜಿ ಅಂತರಜಾತೀಯ ವಿವಾಹಗಳ ಅಗತ್ಯವನ್ನು ಒಪ್ಪಿಕೊಂಡರು. ಇಪ್ಪತ್ತನೇ ದಶಕದಿಂದ ಮೂವತ್ತನೇ ದಶಕದ ಆರಂಭದವರೆಗೆ ಅಂತರಜಾತಿ ವಿವಾಹಗಳಿಗೆ ವಿರುದ್ಧವಾಗಿದ್ದ ಅವರಲ್ಲಾದ ಈ ಬದಲಾವಣೆಯು ಗಾಂಧೀಜಿಯವರ ತೆರೆದ ಮನಸ್ಸಿನ ಸಂಕೇತ. ಬಹುಶಃ ಮೂವತ್ತರ ದಶಕದ ಆರಂಭದಿಂದ ಅಂಬೇಡ್ಕರ್ ಅವರ ಜೊತೆಗಿನ ಭೇಟಿ ಮತ್ತು ಮುಖಾಮುಖಿಯ ಮೂಲಕ ಜಾತಿ ಮತ್ತು ವರ್ಣವ್ಯವಸ್ಥೆಯ ಅಪಾಯಗಳ ಅರಿವು ಗಾಂಧೀಜಿಯವರಿಗೆ ಆಗಿರಬೇಕು. ಈ ಅವಧಿಯಲ್ಲೇ ಅವರಲ್ಲಿ ಬದಲಾವಣೆ ಕಾಣಿಸಿಕೊಂಡದ್ದರಿಂದ ಈ ಮಾತನ್ನು ಹೇಳುತ್ತಿದ್ದೇನೆ. ಗಾಂಧೀಜಿಯವರೇ ಒಂದು ಕಡೆ, ''ನನ್ನ ಮನಸ್ಸು ನಿರಂತರವಾಗಿ ಬೆಳೆಯುತ್ತಿದೆ'' ಎಂದು ಹೇಳಿಕೊಂಡಿದ್ದಾರೆ. ಇದರ

ಫಲವಾಗಿಯೆಂಬಂತೆ ''ಜಾತಿ ಉಪ ಜಾತಿಗಳು ಅಳಿಯ ಬೇಕು'' ಎಂದು ನಲವತ್ತರ ದಶಕದಲ್ಲಿ ಪ್ರತಿಪಾದಿಸ ತೊಡಗಿದರು. ಒಂದೇ ಜಾತಿಯ ಮದುವೆಗಳಿಗೆ ತನ್ನ ಆಶೀರ್ವಾದ ಇಲ್ಲ ಎಂದರು. ತಮ್ಮ ಆಶ್ರಮದಲ್ಲಿ ಬ್ರಾಹ್ಮಣ ಮತ್ತು 'ಹರಿಜನ'ರ ನಡುವಿನ ವಿವಾಹ ನಡೆಸಿಕೊಟ್ಟರು. ಮುಂದೆ ಸವರ್ಣೀಯರು ಮತ್ತು 'ಹರಿಜನ'ರ ನಡುವಿನ ವಿವಾಹಗಳಿಗೆ ಮಾತ್ರ ತಾವು ಹೋಗುವುದಾಗಿ ಘೋಷಿಸಿದರು.

ಇಪ್ಪತ್ತನೇ ಶತಮಾನದಲ್ಲಿಯೂ ಗಾಂಧೀಜಿಯವರಿಗೆ ಅಂತರಜಾತೀಯ ವಿವಾಹಗಳ ಅರ್ಥಪೂರ್ಣತೆ ಅರ್ಥ ವಾಗಲು ತಡವಾಯಿತು. ಆದರೆ ಬಸವಣ್ಣನವರಿಗೆ ಹನ್ನೆರಡನೇ ಶತಮಾನದಲ್ಲಿ ಅದು ಅರ್ಥಪೂರ್ಣವೆನಿಸಿತು; ಅವರ ನೇತೃತ್ವದಲ್ಲಿ ಆಗಲೇ ಅಂತರ್‌ಜಾತೀಯ ವಿವಾಹವೊಂದು ನಡೆಯಿತು. ಅದಕ್ಕೆ ಶಿವಭಕ್ತಿಯ ಮಾನದಂಡವೂ ಇತ್ತೆಂಬುದನ್ನು ಮರೆಯಲಾಗದು. ಈ ಕಾರಣಕ್ಕೆ ಅದರ ಚಾರಿತ್ರಿಕ ಮಹತ್ವವನ್ನು ಮರೆಮಾಚ ಲಾಗದು. ಅಂದಿಗದು ಖಂಡಿತ ಮಹತ್ವದ ಹೆಜ್ಜೆ. ಜಾತಿ ಮತ್ತು ಅಸ್ಪೃಶ್ಯತೆ ವಿರೋಧಿ ಹೆಜ್ಜೆ.

ಗಾಂಧೀಜಿಯವರು ಯಾವತ್ತೂ ಅಸ್ಪೃಶ್ಯತೆಯ ವಿರೋಧಿಯಾಗಿದ್ದರು. ಅಸ್ಪೃಶ್ಯತೆಯನ್ನು 'ಹಿಂದೂ ಧರ್ಮದ ದುರ್ಮಾಂಸ' ಎಂದು ಕರೆದರು. 'ಅಸ್ಪೃಶ್ಯತೆ ನಾಶವಾದರೆ ಹಿಂದೂ ಧರ್ಮ ಜೀವಂತವಾಗಿರುತ್ತದೆ. ಅಸ್ಪೃಶ್ಯತೆ ಜೀವಂತವಾಗಿದ್ದರೆ ಹಿಂದೂ ಧರ್ಮ ನಾಶ ವಾಗುತ್ತದೆ' ಎಂದು ಸ್ಪಷ್ಟವಾಗಿ ಹೇಳಿದರು.

ಬಸವಣ್ಣನವರು ಮತ್ತು ಗಾಂಧೀಜಿಯವರ ವ್ಯಕ್ತಿತ್ವ ದಲ್ಲಿ ಸಮಾನ ಅಂಶಗಳೆಂದರೆ – ಆತ್ಮನಿರೀಕ್ಷೆ, ನಿಷ್ಠುರ ಪ್ರಾಮಾಣಿಕತೆ ಮತ್ತು ನೈತಿಕತೆ. ಈ ಮೂರು ಅಂಶಗಳೂ ಪರಸ್ಪರ ಪೂರಕ ಮತ್ತು ಏಕ ಎಂದೇ ಹೇಳಬಹುದು. ಬಸವಣ್ಣನವರು ಯಾವತ್ತೂ ತನ್ನೊಳಗಿನ ತಳಮಳಗಳನ್ನು ಮುಚ್ಚಿಡಲಿಲ್ಲ, ಪ್ರಲೋಭನೆಗೆ ಒಳಗಾಗುವ ಮನಸ್ಥಿತಿಯನ್ನು ಮರೆಮಾಚಲಿಲ್ಲ. 'ಮರವನೇರಿದ ಮರ್ಕಟ'ನಂತಿರುವ ಮನಸ್ಸನ್ನು ಅವರು ತೆರೆದಿಟ್ಟರು. 'ಅತ್ತಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ। ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ। ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ।' ಎಂದು ಶಿವನಲ್ಲಿ ನಿವೇದಿಸಿ ಕೊಂಡರು. ಗಾಂಧೀಜಿಯವರ ಮೂರು ಮರ್ಕಟಗಳ ಕಲ್ಪನೆಗೂ ಬಸವಣ್ಣನವರ ಈ ವಚನಕ್ಕೂ ಸಾಮ್ಯವಿದೆ. ಗಾಂಧೀಜಿಯವರ ಮೂರು ಮರ್ಕಟಗಳಲ್ಲಿ ಕಣ್ಣು, ಕಿವಿ ಮುಚ್ಚಿದ ಎರಡರ ಆಶಯಗಳು ಹನ್ನೆರಡನೇ ಶತಮಾನ ದಲ್ಲೇ ಅಭಿವ್ಯಕ್ತಗೊಂಡಿವೆ. (ಕಿವುಡನ ಮಾಡಯ್ಯ - ಅಂಧಕನ ಮಾಡಯ್ಯ) ಗಾಂಧೀಜಿಯವರ ಇನ್ನೊಂದು ಮರ್ಕಟ 'ಕೆಟ್ಟದ್ದನ್ನು ನುಡಿಯಬೇಡ' ಎಂಬ ಸಂಕೇತ ನೀಡುತ್ತದೆಯಲ್ಲ – ಅದು ಬಸವಣ್ಣನವರ 'ನುಡಿದರೆ ಮುತ್ತಿನ ಹಾರದಂತಿರ ಬೇಕು...' ಎಂಬ ವಚನದಲ್ಲೇ ಇದೆ. ಇದರರ್ಥ ಗಾಂಧೀಜಿಯವರು ಕನ್ನಡದ ವಚನಗಳನ್ನು ಓದಿದ್ದಾರೆ ಎಂದಲ್ಲ, ಎರಡು ಮಹಾನ್ ಮನಸ್ಸುಗಳ ಏಕರೂಪದ ಚಿಂತನೆಗೆ ಇದೊಂದು ಸಂಕೇತ.

ಗಾಂಧೀಜಿಯವರ 'ಆತ್ಮಕತೆ'ಯನ್ನು ಓದಿದವರಿಗೆ ಬಸವಣ್ಣನವರಂತೆಯೇ ಅವರು ಆತ್ಮನಿರೀಕ್ಷಕರಾಗಿದ್ದದ್ದು, ನಿಷ್ಠುರ ಪ್ರಾಮಾಣಿಕತೆಯಲ್ಲಿ ಬದುಕಿದ್ದು ಸ್ಪಷ್ಟವಾಗುತ್ತದೆ. ಆತ್ಮನಿರೀಕ್ಷೆ ಮತ್ತು ಪ್ರಾಮಾಣಿಕತೆಗಳು ನೈತಿಕತೆಯನ್ನು ಮೌಲ್ಯದ ಮಟ್ಟಕ್ಕೆ ಏರಿಸುತ್ತವೆ. ಗಾಂಧೀಜಿ ಸ್ಪಷ್ಟವಾಗಿ ಹೇಳಿದ್ದರು : "I reject everything that contradicts the fundamental principles of morality." ಸತ್ಯವನ್ನು ಕುರಿತ ಗಾಂಧಿ ನಿಲುವೂ ಸ್ಪಷ್ಟ: "Search after truth through non-violent means."

ಬಸವಣ್ಣನವರೂ ಅಷ್ಟೆ. ಸತ್ಯದ ನಿಲುವಿಗೆ ಅವರ ಬದ್ಧತೆ. ಆ ನೆಲೆಯಲ್ಲೇ ಅವರ ಚಿಂತನೆ : 'ಆನೆಯನೇರಿ ಕೊಂಡು ಹೋದಿರೇ ನೀವು। ಕುದುರೆಯನೇರಿಕೊಂಡು ಹೋದಿರೆ ನೀವು। ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ನೀವು। ಸತ್ಯದ ನಿಲುವನರಿಯದೆ ಹೋದಿರಲ್ಲ।' – ಎಂಬ ವಚನ ಸತ್ಯದ ನಿಲುವಿಗೆ ಸಾಕ್ಷಿ. ಆನೆ, ಕುದುರೆ ಸವಾರಿಗಳು ರಾಜಶಾಹಿಯನ್ನೂ ಕುಂಕುಮ ಕಸ್ತೂರಿಗಳು ಪುರೋಹಿತಶಾಹಿಯನ್ನೂ ಸಂಕೇತಿಸುತ್ತವೆ. ಸತ್ಯದ ನಿಲುವರಿಯದ ಅವು ವ್ಯರ್ಥ ಎಂಬ ವ್ಯಂಜನಾರ್ಥ ಈ ವಚನದಲ್ಲಿದೆ.

''ಹಿಂದೂಗಳು ತಿಲಕದಿಂದ ಮಂತ್ರ ಪಠಣದಿಂದ ನಿರ್ಧರಿತವಾಗುವುದಿಲ್ಲ'' ಎಂದು ಹೇಳುವ ಗಾಂಧೀಜಿ ವೇದ, ಪುರಾಣಗಳಲ್ಲಿ ನಂಬಿಕೆಯಿಡುತ್ತಾರೆ : "I believe in Vedas, Upanishads, Puranas and all that goes by the name of Hindu Scriptures and therefore in avatharas and rebirth."

ಆದರೆ ಬಸವಣ್ಣನವರ ನಿಲುವು ಇದಕ್ಕೆ ವಿರುದ್ಧ ವಾದದ್ದು: 'ಶಾಸ್ತ್ರ ಘನವೆಂಬೆನೆ ಕರ್ಮವ ಭಜಿಸುತ್ತಿದೆ। ವೇದ ಘನವೆಂಬೆನೆ ಪ್ರಾಣಿವಧೆಯ ಹೇಳುತ್ತಿದೆ। ಸ್ಮೃತಿ ಘನವೆಂಬೆನೆ ಮುಂದಿಟ್ಟು ಅರಸುತ್ತಿದೆ।' – ಇದು ಬಸವಣ್ಣ ನವರ ಅಭಿಮತ. ಅಲ್ಲಮ ಪ್ರಭುಗಳು 'ಪುರಾಣವೆಂಬುದು ಪುಂಡರಗೋಷ್ಠಿ। ತರ್ಕವೆಂಬುದು ತಗರ ಹೋರಟೆ' ಎಂದು ಟೀಕಿಸಿದ್ದನ್ನು ಇಲ್ಲಿ ನೆನೆಯಬಹುದು.

ಗಾಂಧೀಜಿ ಹಿಂದೂ ಧರ್ಮದಲ್ಲಿ ನಂಬಿಕೆಯಿಟ್ಟು ಕೊಂಡಿದ್ದರೂ ಎಂದೂ ಮೂಲಭೂತವಾದಿಯಾಗಲಿಲ್ಲ, ಧಾರ್ಮಿಕ ಮೂಲಭೂತವಾದಕ್ಕೆ ವಿರುದ್ಧವಾಗಿ ಹೋರಾಟ ನಡೆಸಿದರು. ಧಾರ್ಮಿಕ ಸಾಮರಸ್ಯಕ್ಕಾಗಿ ಜೀವ-ಜೀವನವನ್ನೇ ಅರ್ಪಿಸಿದರು.

ಬಸವಣ್ಣನವರದು ಶಿವಭಕ್ತಿ ಬದ್ಧತೆಯಾದರೂ ಮೂಲ ಮಾನವೀಯ ಮೌಲ್ಯಗಳನ್ನು ಬಿಟ್ಟುಕೊಡಲಿಲ್ಲ. ಎಲ್ಲ ಧರ್ಮಗಳ ನೈತಿಕ ನೇತಾರರು ಪ್ರತಿಪಾದಿಸುವ ಸಮಾನ ಸಂದೇಶಗಳು ಬಸವಣ್ಣನವರ ಅಭಿವ್ಯಕ್ತಿಯಲ್ಲಿ ಆದ್ಯತೆ ಪಡೆದವು. ಕಾಲ ಬದಲಾದಂತೆ ಬಸವಣ್ಣನವರ ಆಶಯಗಳು ಮತ್ತು ಗಾಂಧೀಜಿಯವರ ಆಶಯಗಳು ಅಪಮೌಲ್ಯಕ್ಕೆ ಒಳಗಾದದ್ದು – ಇಬ್ಬರ ವಿಷಯದಲ್ಲೂ ಸಮಾನ ಅಂಶವಾಗಿದೆ.

ಇಬ್ಬರ ವಿಷಯದಲ್ಲೂ ಗುಣಾತ್ಮಕವಾದ ಒಂದು ಸಮಾನ ಅಂಶವೆಂದರೆ - ಪ್ರಜಾಸತ್ತಾತ್ಮಕತೆ. ಬಸವಣ್ಣ ನವರ ಕಾಲದ 'ಅನುಭವ ಮಂಟಪ'ವು ಒಂದು ಸಂವಾದ ಕೇಂದ್ರವಾಗಿತ್ತೆಂದೇ ಹೇಳಲಾಗುತ್ತಿದೆ. ಅಲ್ಲಿ ನಡೆದಿರ ಬಹುದಾದ ಸಂವಾದಗಳ ಹೊರತಾಗಿಯೂ ಆ ಕಾಲದ ವಿವಿಧ ವರ್ಗಗಳ ವಚನಗಳಲ್ಲಿ ಪ್ರಜಾಸತ್ತಾತ್ಮಕ ಭಿನ್ನಮತ ವನ್ನು ಕಾಣಬಹುದಾಗಿದೆ. ಅಲ್ಲಮ ಪ್ರಭು, ಅಂಬಿಗರ ಚೌಡಯ್ಯ, ಮಾದಾರ ಚನ್ನಯ್ಯ, ಮುಂತಾದ ಹಿಂದುಳಿದ ಹಾಗೂ ಕೆಳವರ್ಗದ ವಚನಕಾರರಲ್ಲಿ ಭಿನ್ನ ದನಿಗಳನ್ನು ಕಾಣಬಹುದು. ಭಕ್ತ-ಭವಿ ಕಲ್ಪನೆ 'ಶರಣ ಸತಿ ಲಿಂಗ ಪತಿ' ಕಲ್ಪನೆ – ಇವೇ ಮುಂತಾದವು ಇವರಲ್ಲಿ ವಿಮರ್ಶೆಗೆ ಒಳಗಾಗಿ ಇರುವುದನ್ನು ಗಮನಿಸಬಹುದು. (ಈ ವಿಷಯವು ಪ್ರತ್ಯೇಕ ವಾದ ವಿಸ್ತೃತ ಚರ್ಚೆಯನ್ನು ಬಯಸುತ್ತದೆ ಮತ್ತು ನನ್ನ ಉಪನ್ಯಾಸವು ಬಸವಣ್ಣ ಮತ್ತು ಗಾಂಧೀಜಿಯವರಿಗೆ ಸೀಮಿತ ವಾಗಿದೆಯಾದ್ದರಿಂದ ಸೂಚ್ಯವಾಗಿಯಷ್ಟೇ ಹೇಳುತ್ತಿದ್ದೇನೆ.)

ಇದೇ ರೀತಿಯ ಪ್ರಜಾಸತ್ತಾತ್ಮಕತೆಯು ಗಾಂಧೀಜಿ ಯವರ ಆಶ್ರಮದ ಸಂವಾದಗಳಲ್ಲಿ ಇತ್ತೆಂದು ಭಾವಿಸುತ್ತೇನೆ. ಯಾಕೆಂದರೆ ಇವರ ಆಶ್ರಮಕ್ಕೆ ಅನೇಕ ಗಣ್ಯರು ಭೇಟಿ ಕೊಟ್ಟು ತಮ್ಮ ಅಭಿಪ್ರಾಯಗಳನ್ನು ಹೇಳಿದ್ದಾರೆ. ಇದಕ್ಕಿಂತ ಹೆಚ್ಚಾಗಿ ಗಾಂಧೀಜಿ ಸದಾ ಸಂವಾದಕ್ಕೆ ತೆರೆದು ಕೊಳ್ಳುತ್ತಿದ್ದರು. ನಿಷ್ಠುರ ಅಭಿಪ್ರಾಯ ಮಂಡನೆಯ ಮೂಲಕ ಚರ್ಚೆಯನ್ನು ಸ್ವಯಂ ಆಹ್ವಾನಿಸಿಕೊಳ್ಳುತ್ತಿದ್ದರು. ಟೀಕೆ - ವಿಮರ್ಶೆಗೆ ಸಿದ್ಧವಾಗಿ ನಿಲ್ಲುತ್ತಿದ್ದರು; ಸ್ವೀಕರಿಸು ತ್ತಿದ್ದರು; ಉತ್ತರಿಸುತ್ತಿದ್ದರು. ಇದಕ್ಕೆ ಗಾಂಧಿ ಮತ್ತು ಅಂಬೇಡ್ಕರ್ ವಾಗ್ವಾದಗಳಿಗಿಂತ ಉದಾಹರಣೆ ಬೇಕೆ ?

ಒಟ್ಟಾರೆ ಹೇಳುವುದಾದರೆ – ಬಸವಣ್ಣನವರು ಮತ್ತು ಗಾಂಧೀಜಿ ಇಬ್ಬರೂ ಅವರವರ ಚಾರಿತ್ರಿಕ ಸಂದರ್ಭದ ಮಹಾನ್ ಸಾಧಕರು. ಭಿನ್ನ ನೆಲೆಗಳಲ್ಲಿ ಸಮುದಾಯವನ್ನು ಸಂಘಟಿಸಿದರು; ಕಾಲದೊಳಗಿದ್ದೂ ಕಾಲವನ್ನು ಮೀರಿದರು; ಕಾಲವನ್ನು ಮುನ್ನಡೆಸಿದರು.


**ಪ್ರೊ|| ಬರಗೂರು ರಾಮಚಂದ್ರಪ್ಪ**
ನಂ. ೨೭೫, ೧೧/ಬಿ ಕ್ರಾಸ್, ೧೪ನೇ ಮುಖ್ಯರಸ್ತೆ
ವಿ.ಇ.ಟಿ. ಪಾಲಿಟೆಕ್ನಿಕ್ ಹತ್ತಿರ, ಜೆ. ಪಿ. ನಗರ ೨ನೇ ಫೇಸ್
ಬೆಂಗಳೂರು - ೫೬೦ ೦೭೮


## ನಾಸ್ತಿಕರು

ಸಕಲವನ್ನೂ ಕರುಣಿಸುವಾತನಿಗೇ
ಹುಲು ಮಾನವ ನಾನೇನು
ಕೊಡಬಲ್ಲೆನೆಂಬ ಕಟು
ಸತ್ಯವರಿಯದೆ ಕಾಣಿಕೆ
ನೀಡಿ ದಾನಿ ತಾನೆಂದು
ದೇಗುಲದ ಸುತ್ತಾ ಹೆಸರು
ಹಾಕಿಸಿಕೊಂಡು ಪ್ರಚಾರ
ಗಿಟ್ಟಿಸುವ ಬಹುಮಂದಿ


**ಎನ್. ಶ್ರೀನಿವಾಸ್**
ಪ್ರಥಮ ದರ್ಜೆ ಸಹಾಯಕರು, ಜಿಲ್ಲಾ ಕೃಷಿ ತರಬೇತಿ
ಕೇಂದ್ರ, ವಿ. ಸಿ. ಫಾರಂ, ಮಂಡ್ಯ - ೫೭೧ ೧೦೫



ಇದೇನೂ ಅಂಥ ಹೊಸ ವಿಷಯವಲ್ಲ ಅಲ್ಲವೆ ? ತಾತ್ವಿಕವಾಗಿ ಚಿಂತಿಸಿದವರು ಇದನ್ನೇ ಹೇಳಿದ್ದಾರಲ್ಲ, ಸಂಪತ್ತಿನ ಹಿಂದೆ ಬೀಳಬೇಡ, ಅದು ಭ್ರಮೆ, ಅದಕ್ಕೆ ಸಿಲುಕಿದರೆ ನಿನ್ನ ಜೀವನದಲ್ಲಿ ತೀವ್ರವಾದ ಬಿಕ್ಕಟ್ಟಿಗೆ ಸಿಕ್ಕು ನರಳುತ್ತೀಯಾ ಅಂತ. ಆಶ್ಚರ್ಯವೆಂದರೆ ಎಲ್ಲ ತಾತ್ವಿಕ ಚಿಂತನೆಗೂ ತಾನು ಹೊರಗು, ಆ ಚಿಂತನೆಯೇ ಭ್ರಮೆ, ತನ್ನದು ಘಟ್ಟಿ ಕಲ್ಲಿನ ಮೇಲೆ ನಿಂತ ವಾಸ್ತವದ ವಿಷಯ ಎಂದು ಹೇಳುವ ಅರ್ಥಶಾಸ್ತ್ರವೂ ಇದೆ ತೀರ್ಮಾನಕ್ಕೆ ಬರಬೇಕಾಗಿದೆ ಇಂದು. ಮುಗ್ಗಟ್ಟು, ಸಮಯ ಸರಿದಂತೆ, ಪರಿಹಾರವಾದೀತು. ಬಿಕ್ಕಟ್ಟು ಮೂಲಭೂತ ಬದಲಾವಣೆಯಿಲ್ಲದೆ ಪರಿಹಾರವಾಗದು. ಜಾಗತಿಕ ಫಿನಾನ್ಷಿಯಲ್ - ಹಣಕಾಸು ಬಿಕ್ಕಟ್ಟು, ಎಲ್ಲವನ್ನೂ ಮುಕ್ತವಾದ ಮಾರುಕಟ್ಟೆಯ ಚಾಲನೆಗಳು ಸರಿಪಡಿಸುತ್ತದೆ ಎನ್ನುವ ವಾದದ ವೈಫಲ್ಯ, ಅಪಾರ ನಿರುದ್ಯೋಗ, ಉತ್ಪಾದನೆಯಲ್ಲಿ ಅತೀವ ಕೊರತೆ ಇವೆಲ್ಲ ಪ್ರಾರಂಭವಾಗಿ ಈಗಾಗಲೆ ಮೂರು ವರ್ಷಗಳಾಯ್ತು. ಜಿ - ೧ರಿಂದ ಜಿ - ೨೦ರವರೆಗೆ ನಾಯಕರೆಲ್ಲ ಶೃಂಗಸಭೆ ನಡೆಸಿದ್ದೂ ನಡೆಸಿದ್ದೆ. ಆದರೂ ಬಂಡವಾಳದ ಸಮರ್ಥಕರಿಗೆ ಪರಿಹಾರ ದಕ್ಕಿಲ್ಲ. ಈ ಭ್ರಮೆಯ ಮೂಲವೇನು ಹಾಗಾದರೆ ?



ಒಂದು ಬಹುಮುಖ್ಯ ಮೂಲವೆಂದರೆ ಸಾಂಪ್ರದಾಯಿಕ ಬಂಡವಾಳ ವ್ಯವಸ್ಥೆ ರೂಪುಗೆಟ್ಟು ಅದು ಹೊಸ ಸ್ವರೂಪ ಪಡೆದಿದೆ. ಆದರೂ ಸಾಂಪ್ರದಾಯಿಕವಾಗಿಯೇ ಚಿಂತಿಸುತ್ತಿರುವುದು ಒಂದು ಅಸಾಂಗತ್ಯ. ಸಂಪ್ರದಾಯದ ವಿರೋಧಿಗಳು ಸಾಂಪ್ರದಾಯಿಕ ಪರಿಹಾರಗಳನ್ನು ಸ್ವೀಕರಿಸಲು ಸಿದ್ಧರಿಲ್ಲ. ಆದರೆ ಅವರದೆ ಪರಿಹಾರವನ್ನು ಸೂಚಿಸಲಾರದವರಾಗಿದ್ದಾರೆ. ಹಳೆಯ ವಿಷಯವನ್ನೇ ಮತ್ತೊಮ್ಮೆ ಕೆದಕಿ ನೋಡೋಣ - ಅದರಲ್ಲಿ ಹೊಸದೇನಾದರೂ ಇಲ್ಲಿಯವರೆಗೂ ಕಂಡುಬರದ್ದು ಕಾಣುತ್ತದೆಯೆ ಎಂದು.




ಜಾಗತಿಕವಾಗಿ ಖಾಸಗಿ ಸಾಲ ಮತ್ತು ಉತ್ಪಾದನೆಯಲ್ಲಿ ಖಾಸಗಿ ಹೂಡಿಕೆಯ ಪರಿಸ್ಥಿತಿ ಕಳೆದ ನಾಲ್ಕು ದಶಕಗಳಲ್ಲಿ ತೀರ ಹದಗೆಟ್ಟಿದೆ ಎಂದು ಮಾಹಿತಿಗಳು ಹೊರಗೆಡಹಿವೆ.

೧೯೯೧-೯೨ರಲ್ಲಿ ಜಾಗತಿಕ ಖಾಸಗಿ ಸಾಲ, ಖಾಸಗಿ ಹೂಡಿಕೆ ಸಮಾಸಮವಾಗಿ, ಕೇವಲ ೫೦೦ ಬಿಲಿಯನ್

# ಸಂಪತ್ತಿನ ಭ್ರಮೆ ಮತ್ತು ಆರ್ಥಿಕ ಬಿಕ್ಕಟ್ಟು

— ಜಿ. ಎನ್. ನಾಗರಾಜ್ —



ಅಮೆರಿಕನ್ ಡಾಲರ್‌ನಷ್ಟಿತ್ತು. ಆರ್ಥಿಕ ಉತ್ಪನ್ನ ಕೆಳಮಟ್ಟದಲ್ಲಿತ್ತು. ೨೦೦೯ರಲ್ಲಿ ಖಾಸಗಿ ಸಾಲ ಸುಮಾರು ೪ ಟ್ರಿಲಿಯನ್ (ಅಂದರೆ ೪೧೨) ಡಾಲರ್‌ನಷ್ಟಿದ್ದರೆ ಹೂಡಿಕೆ ಅಪಾರವಾಗಿ ಕುಸಿದು ಸುಮಾರು ೫೦೦ ಬಿಲಿಯನ್ ಅಂದರೆ ಅರ್ಧ ಟ್ರಿಲಿಯನ್, (೧೯೯೧ರ ಮಟ್ಟ) ಅಷ್ಟಕ್ಕೆ ಇಳಿದಿತ್ತು. ಇದರ ಜತೆಗೆ ಕಪ್ಪು ಹಣದ ಲೆಕ್ಕ ನೋಡಿ. ಸ್ವಿಸ್ ಬ್ಯಾಂಕಿನ ಲೆಕ್ಕ ಅಂಥ ಒಂದು ನಿಧಿ. ಪ್ರತಿಯೊಂದು ಮನೆ, ನಿವೇಶನ ಮಾರಿದಾಗ ಕಪ್ಪು ಹಣ ಬರುತ್ತದೆ. ನಮ್ಮ ಕಂಟ್ರ್ಯಾಕ್ಟರುಗಳು ತಮಗೆ ಬಂದ ಚೆಕ್ ಹಣದಲ್ಲಿ ಶೇ. ೧೦ ತೆರಿಗೆ ನೀಡಿದರೆ, ಮಿಕ್ಕ ಹಣ ಅವರು ಏನು ಮಾಡಿದರು ಎಂಬ ಲೆಕ್ಕ ಹೇಳಬೇಕಿಲ್ಲ. ಅಂದರೆ ಅವರು ಲಂಚ ಕೊಡಬಹುದು ಧೈರ್ಯವಾಗಿ. ಇವೆಲ್ಲ ಮತ್ತಷ್ಟು ಕಪ್ಪು ಹಣವಾಗುತ್ತದೆ. ಅಂದರೆ ಉತ್ಪಾದನೆಯ ಗಟ್ಟಿ ಆಧಾರವಿಲ್ಲದ ಪೊಳ್ಳು ಹಣದ ರಾಶಿ ಅಪಾರವಾಗಿ ಬೆಳೆದು, ಹಣವನ್ನೇ ಸರಕಾಗಿ ವ್ಯಾಪಾರ ಮಾಡುವವರಿಗೆ, ಫಿನಾನ್ಷಿಯಲ್ ಮಾರುಕಟ್ಟೆಗೆ ಹೆಚ್ಚು ಲಾಭ ದೊರಕಿಸಿ, ಹೆಚ್ಚು ಸಂಪತ್ತಿನ ಭ್ರಾಮಕ ತೃಪ್ತಿ ನೀಡುತ್ತಿದ್ದರೆ, ಒಳಗೊಳಗೇ ಉತ್ಪಾದನಾ ವ್ಯವಸ್ಥೆ ಕುಸಿಯುತ್ತಾ ಬಡತನವನ್ನು, ನಿರುದ್ಯೋಗವನ್ನು ಸೃಷ್ಟಿಸುತ್ತಿತ್ತು.

ಚಿಕ್ಕ ವ್ಯವಸ್ಥೆ, ಕೆಲವೇ ಸರಕುಗಳು ಇದ್ದಾಗ ಅವರವರ ವೈಯಕ್ತಿಕ ಅಗತ್ಯಕ್ಕೆ ತಕ್ಕಂತೆ ಸರಕಿಗೆ ಸರಕು ನೇರವಾಗಿ, ಮಧ್ಯವರ್ತಿ ಇಲ್ಲದೆ ಅದಲುಬದಲಾಗಿ ವ್ಯಾಪಾರ ನಡೆಯುತ್ತಿತ್ತು. ವ್ಯವಸ್ಥೆ ವರ್ಧಿಸಿ, ಸರಕುಗಳ ಸಂಖ್ಯೆಯೂ ಹೆಚ್ಚಾದಾಗ ಈ ವ್ಯವಹಾರವನ್ನು ಸುಲಲಿತವಾಗಿ ನಿರ್ವಹಿಸಲು ಹಣ ಮಧ್ಯವರ್ತಿಯಾಗಿ ಬಂತು. ಸರಕು - ಸರಕು ಎಂಬ ವ್ಯವಹಾರ ಸರಕು - ಹಣ - ಸರಕು ಆಗಿ ಪರಿವರ್ತಿತವಾಯ್ತು. ಇದು ಬಳಕೆದಾರರ ದೃಷ್ಟಿ. ವ್ಯಾಪಾರಿಯ ದೃಷ್ಟಿಯಲ್ಲಿ ಇದು ಹಣ-ಸರಕು-ಹಣ'. ಇಲ್ಲಿ ಮೊದಲನೆಯ ಹಣಕ್ಕಿಂತ ಎರಡನೆಯ ಹಣ ಹೆಚ್ಚಿನದು. ಹಣ' - ಹಣ = ಲಾಭ. ಇದನ್ನು ಮಿಗುತಾಯ, ಸರ್‌ಪ್ಲಸ್ ಎಂದು ಕರೆದು, ಮಾರ್ಕ್ಸ್‌ನ ಶೋಷಣೆಯ ತತ್ವ ಹೊರಹೊಮ್ಮುತ್ತದೆ. ಈಗಾಗಲೆ ಇದು ಇಲ್ಲಿಯವರೆಗಿನ ''ಒಂದಿಷ್ಟು ಅರ್ಥಶಾಸ್ತ್ರ'' ಲೇಖನಗಳಿಂದ ಸ್ಪಷ್ಟವಾಗಿರಬಹುದು. ಈ ಎರಡನೆಯ ಹಣ' ಒಂದು ಹಂತದಲ್ಲಿ ಅಗತ್ಯ, ಅದು ವ್ಯವಹಾರ ನಿರ್ವಹಿಸುವವನಿಗೆ ಅವನ ಸೇವೆಗೆ ದಕ್ಕುವ ಸಂಪಾದನೆಯ ಹಾಗೂ ಉತ್ಪಾದನೆಯ ಇನ್ನಷ್ಟು ವಿಕಾಸಕ್ಕೆ ಹೂಡಿಕೆಯ ಬಂಡವಾಳ ಎಂದು ಸಮರ್ಥಿಸಬಹುದು. ಆ ಹೂಡಿಕೆಯ ಭಾಗ ಹೂಡಿಕೆಯಾಗದೆ ಹೋದರೆ ಅದು ಸಂಚಿತವಾಗುತ್ತಾ ಹೋಗುತ್ತದೆ. ಅದು ಹಣದ ರೂಪದಲ್ಲಿರುತ್ತದೆ. ಈ ಸಂಚಿತ ಮೊತ್ತ - ಅಕ್ಯೂಮುಲೇಷನ್ ಆಫ್ ಕ್ಯಾಪಿಟಲ್ - ಅಪಾರವಾದಾಗ ಅದೊಂದು ಬಿಕ್ಕಟ್ಟಾಗುತ್ತದೆ. ಹೂಡಿಕೆ ಯಾಕೆ ಆಗಲಿಲ್ಲ? ಬೇಡಿಕೆ ಇರಲಿಲ್ಲ, ಮತ್ತಷ್ಟು ಸರಕನ್ನು ಬೇಡಿದರೆ ತಾನೆ ಹೂಡಿಕೆ ಮಾಡಿ, ಉದ್ಯಮ ವಿಸ್ತರಿಸಬಹುದು? ವಿಸ್ತರಿಸಿದರೆ ಮತ್ತಷ್ಟು ಉದ್ಯೋಗ ಸೃಷ್ಟಿ, ಬಳಕೆದಾರರ ಕೈಯಲ್ಲಿ ಹೆಚ್ಚಾದ ಆದಾಯ, ಅಲ್ಲಿಂದ ಮತ್ತಷ್ಟು ಬೇಡಿಕೆಯ ವೃದ್ಧಿ. ಸೇ (Say) ಅನ್ನುವ ಅರ್ಥಶಾಸ್ತ್ರಜ್ಞ ಬೇಡಿಕೆಯಿದ್ದಷ್ಟು ಉದ್ಯಮ ವಿಕಾಸ, ಆದ್ದರಿಂದ ಬಂಡವಾಳ ವ್ಯವಸ್ಥೆಯಲ್ಲಿ ಹೆಚ್ಚುವರಿ ಉತ್ಪಾದನೆಯ ಬಿಕ್ಕಟ್ಟು ಉಂಟಾಗುವುದೆ ಇಲ್ಲ ಎಂದು ಹೇಳಿದ. ವಾಸ್ತವದಲ್ಲಿ ವ್ಯಾಪಾರಿಗೆ ಸುಮ್ಮನೆ ಸಂಚಿತ ಸಂಪತ್ತಿನ ರಾಶಿಯ ಮೇಲೆ ಕೂರಲಾಗುವುದಿಲ್ಲ. ಅವನಿಗೆ ನಿರಂತರ ಲಾಭ ಹರಿದು ಬರುತ್ತಲೆ ಇರಬೇಕು. ಇದಕ್ಕೆ ಸಂಬಂಧಪಟ್ಟ ತೀರ್ಮಾನಗಳನ್ನು ಒಬ್ಬೊಬ್ಬನೂ ತನಗೆ ತಿಳಿದಂತೆ ಮಾಡುತ್ತಾನಾಗಿ, ಒಂದು ಬೃಹತ್ತಾದ ಮಾರುಕಟ್ಟೆಯ ವ್ಯವಸ್ಥೆಯಲ್ಲಿ ಯಾರ‍್ಯಾರು ಏನೇನು ಮಾಡುತ್ತಿದ್ದಾರೆ ಎಂದು ತಿಳಿದು, ಅದನ್ನು ಅರಗಿಸಿಕೊಂಡು,




ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ ರಚಿಸಿರುವ ಡಾ|| ಎಸ್. ಎಲ್. ಭೈರಪ್ಪನವರ ಕಾದಂಬರಿಗಳೊಡನೆ 'ಧರ್ಮ-ಕರ್ಮ-ಜಿಜ್ಞಾಸೆ' ಮತ್ತು ಶ್ರೀ ಡಿ. ಜಿ. ಮಲ್ಲಿಕಾರ್ಜುನ ಅವರ 'ಅರೆಕ್ಷಣದ ಅದೃಷ್ಟ' – ಈ ಎರಡು ಕೃತಿಗಳ ಲೋಕಾರ್ಪಣೆ ೨೩-೧-೨೦೧೧ರಂದು, ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ ಸಭಾಂಗಣದಲ್ಲಿ ಜರುಗಿತು. ಪ್ರೊ|| ಸಿ. ಎನ್. ರಾಮಚಂದ್ರನ್ ಸಮಾರಂಭ ಅಧ್ಯಕ್ಷತೆ ವಹಿಸಿದ್ದರು ಮತ್ತು ಧರ್ಮ-ಕರ್ಮ-ಜಿಜ್ಞಾಸೆ – ಕೃತಿಯ ಬಗ್ಗೆ ಮಾತನಾಡಿದರು. ಶ್ರೀ ನಾಗೇಶ್ ಹೆಗಡೆ 'ಅರೆಕ್ಷಣದ ಅದೃಷ್ಟ' ಕೃತಿಯ ಅನಾವರಣ ಮಾಡಿ ಅದರ ಪರಿಚಯ ಮಾಡಿಕೊಟ್ಟರು. ಚಿತ್ರದಲ್ಲಿ (ಎ.ಬಲಕ್ಕೆ) ಶ್ರೀ ಆರ್. ಎಸ್. ರಾಜಾರಾಮ್, ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ, ಪ್ರೊ|| ಸಿ. ಎನ್. ರಾಮಚಂದ್ರನ್, ಶ್ರೀ ನಾಗೇಶ್ ಹೆಗಡೆ ಮತ್ತು ಶ್ರೀ ಡಿ. ಜಿ. ಮಲ್ಲಿಕಾರ್ಜುನ.

ವ್ಯಾಖ್ಯಾನ ಮಾಡಿ, ತಿದ್ದುವುದರೊಳಗೆ ತುಂಬ ಸಮಯವೇ ಸರಿದಿರುತ್ತದೆ. ಅದನ್ನೇ ಅರಾಜಕ, ಅನಾಯಕ, ಅನಾರ್ಕಿ ಪರಿಸ್ಥಿತಿ ಎನ್ನುವುದು. ಸರಕಿಗೆ ಬೇಡಿಕೆ ಇಲ್ಲದಿದ್ದರೂ ಲಾಭ ಹೆಚ್ಚಬೇಕಾದರೆ, ಇರುವಷ್ಟು ಸರಕುಗಳ ಮಾರಾಟದ ಬೆಲೆಯನ್ನು ಹೆಚ್ಚಿಸಬೇಕು ಅಥವಾ ಈಗಿರುವ ಉತ್ಪಾದನೆಯನ್ನೇ ಕಡಿತಮಾಡಿ ಅಥವಾ ಸರಕುಗಳ ಕೃತಕ ಕೊರತೆ ಉಂಟುಮಾಡಿ ತತ್ಪರಿಣಾಮವಾಗಿ ಬೆಲೆ ಹೆಚ್ಚಿಸಿ, ಲಾಭ ಮಾಡಿಕೊಳ್ಳಬೇಕು. ಅದಲ್ಲದೆ ಹೆಚ್ಚುತ್ತಿರುವ ಬೇಡಿಕೆಗೆ ತಕ್ಕಂತೆ, ಹೊಸ ಹೂಡಿಕೆಮಾಡಿ, ಸರಕು ಹೆಚ್ಚಿಸುವ ಬದಲು, ಹೊಸ ಹೂಡಿಕೆಯನ್ನೇ ಮಾಡದೆ, ಕೊರತೆ ಸೃಷ್ಟಿಸಿ ಲಾಭ ಹೆಚ್ಚಿಸಿಕೊಳ್ಳಬಹುದು. ಸಾಂಪ್ರದಾಯಿಕ ಬಂಡವಾಳಶಾಹಿ ಅರ್ಥಶಾಸ್ತ್ರ ಹೀಗೆಲ್ಲ ಕೃತಕ, ಅಸಾಧುವಾದ ಬೆಳವಣಿಗೆಗಳು ಆಗುವುದಿಲ್ಲ ಎಂದು ಅಂದುಕೊಂಡು ತನ್ನ ಸಿದ್ಧಾಂತಗಳನ್ನು ಹೇಳುತ್ತದೆ. ವಾಸ್ತವದಲ್ಲಿ ಇದು ಹೀಗಲ್ಲ ಎಂದು ಬಳಕೆದಾರರ ಅನುಭವ ಹೇಳುತ್ತದೆ. ಮಾಹಿತಿಗಳು ಹೇಳುತ್ತವೆ. ಅಂದರೆ ಲಾಭಾನ್ವೇಷಣೆ ಧಾವಂತವಾಗಿ, ಆರ್ಥಿಕ ಬಿಕ್ಕಟ್ಟನ್ನು ಸೃಷ್ಟಿಸುತ್ತದೆ. ತನ್ನ ಲಾಭಕ್ಕೆ ಪೆಟ್ಟು ಬೀಳದಂತೆ ಎಚ್ಚರ ವಹಿಸಿ, ಬಿಕ್ಕಟ್ಟಿನ ಪರಿಹಾರವನ್ನು ಹುಡುಕುತ್ತದೆ. ವಿಫಲವಾಗುತ್ತದೆ. ಫಲಿಸಬೇಕಾದರೆ ಧಾವಂತ ಬಿಡಬೇಕಲ್ಲ!

ಬ್ಯಾಂಕಿನಲ್ಲಿ ಸಾರ್ವಜನಿಕ ಉಳಿತಾಯ ಶೇಖರವಾಗುತ್ತದೆ. ಅದರ ಆಧಾರದ ಮೇಲೆ ಉದ್ದಿಮೆಗಳಿಗೆ, ಹೂಡಿಕೆಗಾಗಿ ಸಾಲ ನೀಡಲಾಗುತ್ತದೆ. ಈ ಸಾಲ ಶೇಖರವಾದ ಉಳಿತಾಯದ ಹಲವು ಪಟ್ಟು ಇರುತ್ತದೆ. ಅಂದರೆ ಬ್ಯಾಂಕು ಇರುವುದಕ್ಕಿಂತಲೂ ಹೆಚ್ಚು ಹಣ ಸೃಷ್ಟಿಮಾಡುತ್ತದೆ. ಅಂದರೆ ಅದು ಅಷ್ಟು ಹೊಸ ನೋಟು-ಕರೆನ್ಸಿ ಅಚ್ಚು ಹಾಕುತ್ತದೆ ಎಂದಲ್ಲ, ಆ ಕೆಲಸಮಾಡುವುದು ರಿಸರ್ವ್ ಬ್ಯಾಂಕ್ ಮಾತ್ರ. ಅದಕ್ಕೆ ಅದರದೇ ಲೆಕ್ಕವಿದೆ. ಬ್ಯಾಂಕುಗಳು ಸೃಷ್ಟಿಸುವ ಈ ಹೆಚ್ಚು ಹಣಕ್ಕೆ ಪೇಪರ್ ಮನಿ - ಪತ್ರದ ಹಣ ಎನ್ನುತ್ತಾರೆ. ಬ್ಯಾಂಕು ಇದನ್ನು ಯಾವ ಮಿತಿಯೊಳಗೆ ಮಾಡಬಹುದು ಎನ್ನುವುದನ್ನು ಕಾಲಕಾಲಕ್ಕೆ ರಿಸರ್ವ್ ಬ್ಯಾಂಕು ನೀಡುವ ನಿರ್ದೇಶಕ ಹಣಕಾಸು ನೀತಿಗಳು ಹೇಳುತ್ತವೆ. ಈ ನಿರ್ದೇಶನವಿಲ್ಲದೆ ಎಲ್ಲ ಬ್ಯಾಂಕುಗಳೂ ಪೇಪರ್ ಮನಿ ನೀಡಲಾರಂಭಿಸಿದರೆ ಏನೆಲ್ಲಾ ಅವಾಂತರವಾಗುತ್ತದೆ!

ಬ್ಯಾಂಕುಗಳು ನೀಡುವ ಸಾಲ ಉತ್ಪಾದನೆಯ ಹೆಚ್ಚಳವನ್ನು ಸಾಧಿಸದೆ ಹೋದಾಗ ಅದು ಋಣಭಾರವಾಗುತ್ತದೆ. ಜಾಗತಿಕವಾಗಿ ಖಾಸಗಿ ಸಾಲ ಮತ್ತು ಉತ್ಪಾದನೆಯಲ್ಲಿ ಖಾಸಗಿ ಹೂಡಿಕೆಯ ಪರಿಸ್ಥಿತಿ ಕಳೆದ ನಾಲ್ಕು ದಶಕಗಳಲ್ಲಿ ತೀರ ಹದಗೆಟ್ಟಿದೆ ಎಂದು ಮಾಹಿತಿಗಳು ಹೊರಗೆಡಹಿವೆ. ೧೯೭೧-೭೨ರಲ್ಲಿ ಜಾಗತಿಕ ಖಾಸಗಿ ಸಾಲ, ಖಾಸಗಿ ಹೂಡಿಕೆ ಸಮಾಸಮವಾಗಿ, ಕೇವಲ ೫೦೦ ಬಿಲಿಯನ್ ಅಮೆರಿಕನ್ ಡಾಲರ್‌ನಷ್ಟಿತ್ತು. ಆರ್ಥಿಕ ಉತ್ಪನ್ನ ಕೆಳಮಟ್ಟದಲ್ಲಿತ್ತು. ೨೦೦೯ರಲ್ಲಿ ಖಾಸಗಿ ಸಾಲ ಸುಮಾರು ೪ ಟ್ರಿಲಿಯನ್ (ಅಂದರೆ ೪$^{೧೨}$) ಡಾಲರ್‌ನಷ್ಟಿದ್ದರೆ ಹೂಡಿಕೆ ಅಪಾರವಾಗಿ ಕುಸಿದು ಸುಮಾರು ೫೦೦ ಬಿಲಿಯನ್ ಅಂದರೆ ಅರ್ಧ ಟ್ರಿಲಿಯನ್, (೧೯೭೧ರ ಮಟ್ಟ) ಅಷ್ಟಕ್ಕೆ ಇಳಿದಿತ್ತು. ಇದರ ಜತೆಗೆ ಕಪ್ಪು ಹಣದ ಲೆಕ್ಕ ನೋಡಿ. ಸ್ವಿಸ್ ಬ್ಯಾಂಕಿನ ಲೆಕ್ಕ ಅಂಥ ಒಂದು ನಿಧಿ. ಪ್ರತಿಯೊಂದು ಮನೆ, ನಿವೇಶನ ಮಾರಿದಾಗ ಕಪ್ಪು ಹಣ ಬರುತ್ತದೆ. ನಮ್ಮ ಕಂಟ್ರ್ಯಾಕ್ಟರುಗಳು ತಮಗೆ ಬಂದ ಚೆಕ್ ಹಣದಲ್ಲಿ ಶೇಕಡ ೧೦ ತೆರಿಗೆ ನೀಡಿದರೆ, ಮಿಕ್ಕ ಹಣ ಅವರು ಏನು ಮಾಡಿದರು ಎಂಬ ಲೆಕ್ಕ ಹೇಳಬೇಕಿಲ್ಲ. ಅಂದರೆ ಅವರು ಲಂಚ ಕೊಡಬಹುದು ಧೈರ್ಯವಾಗಿ. ಇವೆಲ್ಲ ಮತ್ತಷ್ಟು ಕಪ್ಪು ಹಣವಾಗುತ್ತದೆ. ಅಂದರೆ ಉತ್ಪಾದನೆಯ ಗಟ್ಟಿ ಆಧಾರವಿಲ್ಲದ ಪೊಳ್ಳು ಹಣದ ರಾಶಿ ಅಪಾರವಾಗಿ ಬೆಳೆದು, ಹಣವನ್ನೇ ಸರಕಾಗಿ ವ್ಯಾಪಾರ ಮಾಡುವವರಿಗೆ, ಫಿನಾನ್ಷಿಯಲ್ ಮಾರುಕಟ್ಟೆಗೆ ಹೆಚ್ಚು ಲಾಭ ದೊರಕಿಸಿ, ಹೆಚ್ಚು ಸಂಪತ್ತಿನ ಭ್ರಾಮಕ ತೃಪ್ತಿ ನೀಡುತ್ತಿದ್ದರೆ, ಒಳಗೊಳಗೇ ಉತ್ಪಾದನಾ ವ್ಯವಸ್ಥೆ ಕುಸಿಯುತ್ತಾ ಬಡತನವನ್ನು, ನಿರುದ್ಯೋಗವನ್ನು ಸೃಷ್ಟಿಸುತ್ತಿತ್ತು. ಈ ಕಾಲಾವಧಿಯಲ್ಲಿ ಅರ್ಥಶಾಸ್ತ್ರದ ನೊಬೆಲ್ ಪಾರಿತೋಷಕ ಕೇವಲ ಫಿನಾನ್ಷಿಯಲ್ ಅಂದರೆ ಹಣಕಾಸು ತಜ್ಞ / ಸಂಖ್ಯಾಶಾಸ್ತ್ರಜ್ಞರಿಗೆ ನೀಡಿದರೆಂಬುದು ಆಕಸ್ಮಿಕವಲ್ಲ.

ಅದು ಶುದ್ಧ ಅರ್ಥಶಾಸ್ತ್ರವನ್ನು ಹತ್ತಿಕ್ಕಿ, ಷೇರುಪೇಟೆಯೇ ಹೆಮ್ಮರವಾದ ಕಾಲ. ಒಂದು ಕೊರತೆಯನ್ನು ನೀಗಿಸಲು ಒಂದು ಕ್ರೆಡಿಟ್ ಕಾರ್ಡ್, ಆ ಸಾಲ ತೀರಿಸಲು ಮತ್ತೊಂದು ಕ್ರೆಡಿಟ್ ಕಾರ್ಡ್ – ನನ್ನ ಹತ್ತಿರದವರೊಬ್ಬರು ಮಾಸಿಕ ವರಮಾನ ಅಸ್ಥಿರವಾದ ೨೫,೦೦೦ವಾದರೂ ಐದು ಕ್ರೆಡಿಟ್ ಕಾರ್ಡ್ ಮತ್ತು ಪತ್ನಿಗೆ ಎರಡು ಆ್ಯಡ್ ಆನ್ ಕಾರ್ಡ್ ಗಿಟ್ಟಿಸಿಕೊಂಡು, ಹತ್ತಾರು ಲಕ್ಷ ಸಾಲ ಪಡೆದು, ಈಗ ಸಾಲ ಹಿಂತಿರುಗಿಸಲಾರದೆ ಕಿಬ್ಬದಿಯ ಕೀಲು ಮುರಿದಿದೆ. ಬಡ್ಡಿಗೆ ಬಡ್ಡಿ, ಚಕ್ರಬಡ್ಡಿ, ಸುಸ್ತಿಬಡ್ಡಿಯ ಜಮೀನ್ದಾರ-ರೈತನ ಶೋಷಣೆಯ ಹೊಸ ರೂಪ. ಅಂದರೆ ಫ್ಯೂಡಲಿಸಂನ ಮರುಕಳಿಕೆ. ಇದು ಆ್ಯಡಂಸ್ಮಿತ್‌ನ ಬಂಡವಾಳವಾದವಲ್ಲ, ಜಾಗತಿಕವಾಗಿ ಅರ್ಥವ್ಯವಸ್ಥೆಯ

ಕಿಬ್ಬದಿಯ ಕೀಲು ಮುರಿದಂತಾಗಿದೆ. ಅಮೆರಿಕದ ಸಾಲ ಅವರ ಜಿಡಿಪಿಗಿಂತ ವಿಪರೀತ ಹೆಚ್ಚಿದೆ. ಆದರೂ ಬಂಡವಾಳ ವ್ಯವಸ್ಥೆಯ ರಚನೆಯಲ್ಲಿ ಯಾವ ಬದಲಾವಣೆಯನ್ನೂ ಮಾಡಿಕೊಳ್ಳದೆ ಪರಿಹಾರ ಹುಡುಕುವುದರಿಂದ, ಮತ್ತಷ್ಟು ಸಾಲವೇ ಪರಿಹಾರವೆಂಬಂತೆ ಈಗಷ್ಟೆ ಅಮೆರಿಕದ ಫೆಡರಲ್ ಬ್ಯಾಂಕ್ ಇನ್ನೂ ೫೦೦ ಬಿಲಿಯನ್ ಡಾಲರ್ ಪ್ರಿಂಟ್ ಮಾಡಿ ಹಂಚಿದೆ. (ಅಮೆರಿಕದ ಫೆಡರಲ್ ಬ್ಯಾಂಕ್ ನಮ್ಮ ರಿಸರ್ವ್ ಬ್ಯಾಂಕಿನಂತೆ ಸಾರ್ವಜನಿಕ ಸಂಸ್ಥೆಯಲ್ಲ) ನೀಡಿದ ಔಷಧಿ ಕಾಯಿಲೆಯನ್ನು ಮತ್ತಷ್ಟು ವೃದ್ಧಿಪಡಿಸುತ್ತಿದೆ. ತನ್ನ ಬಡ ಸರ್ಕಾರಿ ನೌಕರರ ಸಂಬಳವನ್ನು ಕಡಿದಿದೆ. ಬೇಡಿಕೆ ಕುಸಿದಿದೆ. ಉದ್ಯಮ ವಿಕಾಸವಾಗುತ್ತಿಲ್ಲ, ಆದರೂ ಶ್ರೀಮಂತರಿಗೆ ತೆರಿಗೆಯಲ್ಲಿ ಕಡಿತ ನೀಡಿದೆ. ಉದ್ಯೋಗ ಸೃಷ್ಟಿಯಾಗುತ್ತಿಲ್ಲ. ಆದರೂ ಫಿನಾನ್ಷಿಯಲ್ ಮಾರುಕಟ್ಟೆ ನಿರ್ವಹಿಸುವ ವಾಲ್ ಸ್ಟ್ರೀಟ್‌ನ ಸ್ಟಾಕ್ ಮಾರ್ಕೆಟ್ ಸಂಸ್ಥೆಗಳು ಲಾಭಗಳಿಸುತ್ತಲೇ ಇವೆ! ಸರಕಿನ ಉತ್ಪಾದನೆಯ, ನೈಜ ಸಂಪತ್ತಿನ ಅಡಿಪಾಯವಿಲ್ಲದ ಕೇವಲ ಕರೆನ್ಸಿಯ ಭ್ರಾಮಕ ಸಂಪತ್ತು ವೃದ್ಧಿಸುತ್ತಲೇ ಇದೆ. ಇಲ್ಲಿ ಆಗುವುದೇನು? ಹಣ-ಸರಕು-ಹಣ' ಸಮೀಕರಣದಲ್ಲಿ ಕಂಬಿತಪ್ಪಿ ಕೇವಲ ಹಣ-ಹಣ'-ಹಣ' ಆಗುತ್ತಾಹೋಗುತ್ತದೆ. ಹಲವು ರೂಪದ ಬಡ್ಡಿಯ ಹಣವೇ ಮಾರಾಟದ ಸರಕಾದಾಗ, ಬರುವ ಹಣಕ್ಕೆ ಸರಕಿನ ಹಂಗೇ ಬೇಡ ತನ್ನ ಬೆಲೆ ಕಾಯ್ದುಕೊಳ್ಳಲು! ಅಂದರೆ ಮಾರುಕಟ್ಟೆಯ ಅಗತ್ಯಕ್ಕೆ ಮೀರಿದಷ್ಟು ಬಹುಪಾಲು ನೋಟಿನ ಹಣ ಹೆಚ್ಚುತ್ತಾಹೋಗುತ್ತದೆ. ಕಾಳಸಂತೆಯ ಹಣ ಸ್ವಿಸ್ ಬ್ಯಾಂಕ್ ಸೇರುತ್ತದೆ. ಇನ್ನೂ ನೂರು ವರ್ಷಕ್ಕೆ ಬೇಕಾಗುವಷ್ಟು ನೋಟುಗಳು ಮತ್ತು ಲೆಕ್ಕದ ಹಣ ಈಗ ದಾಸ್ತಾನಾಗಿವೆ. ಲೆಕ್ಕದಲ್ಲಿ ಶ್ರೀಮಂತಿಕೆ. ಒಳಗೆಲ್ಲಾ ಡೊಗರೆ ಈ ವ್ಯವಸ್ಥೆ.

ದುಡ್ಡನ್ನು, ಯಾವುದೇ ಉತ್ಪಾದನೆಯ ಹೆಚ್ಚಳವೇ ಇಲ್ಲದೆ ಬಹುಗುಣಿತ ಮಾಡುವ ಕೆಲವು ಪ್ರಸಂಗಗಳೆಂದರೆ ಸರಕಿನ ಮಾರುಕಟ್ಟೆ ಎನ್ನುವ ಲೋಹ, ಕಮಾಡಿಟೀಸ್ ಮಾರುಕಟ್ಟೆ, ಫಾರ್‌ವರ್ಡ್ ಟ್ರೇಡಿಂಗ್, ಮನಿ ಎಕ್ಸ್‌ಛೇಂಜ್ ಮಾರುಕಟ್ಟೆ ಮುಂತಾದುವು. ಇಲ್ಲಿ ಊಹಾಪೋಹದಲ್ಲಿ, ಬಾಜಿ ಕಟ್ಟುವ ರೀತಿ ವ್ಯವಹಾರ ನಡೆಯುವುದನ್ನು ಟಿವಿಯಲ್ಲಿ ಷೇರುಪೇಟೆ ಚಿತ್ರ ಬಂದಾಗ ಗಮನಿಸಬಹುದು. ವಾಸ್ತವ ಮಾರುಕಟ್ಟೆಯ, ರಿಯಲ್ ಎಕಾನಮಿಯ ಸಾಲಪತ್ರಗಳನ್ನು ಇಂಥ ಮಾರುಕಟ್ಟೆಯ ವ್ಯವಹಾರಕ್ಕೆ ಷೇರೋ, ಹೂಡಿಕೆಯೋ, ಆಧಾರವೋ ರೂಪದಲ್ಲಿ ಆಕರ್ಷಿಸಿ, ದಬ್ಬಿದಾಗ, ಒಂದಿಷ್ಟು ತಕ್ಷಣದ ಲಾಭ ದೊರಕಿಸಿ, ದಿಢೀರನೆ ಅಲ್ಲಿಯ ಮಾರುಕಟ್ಟೆ ಕುಸಿದಾಗ, (ಅಥವಾ ಉದ್ದೇಶಪೂರ್ವಕವಾಗಿ ಕುಸಿಯುವಂತೆ ಮಾಡಿ,) ಅದು ರಿಯಲ್ ಮಾರುಕಟ್ಟೆಗೆ ಮಾರಕ ಪೆಟ್ಟಾಗುತ್ತದೆ. ಅಮೆರಿಕದ ಹೌಸಿಂಗ್ ಬಬಲ್‌ನಲ್ಲಿ ಆದದ್ದು ಇಂಥದೆ ವ್ಯವಹಾರ. ಅದು ಅಲೆಅಲೆಯಾಗಿ ಜಾಗತಿಕವಾಗಿ ಹಬ್ಬಿ ಜಾಗತಿಕ ಕುಸಿತ, ಬಿಕ್ಕಟ್ಟು ಆಗುತ್ತದೆ. ಯಾರೋ ಎಲ್ಲೋ ಲಾಭ ಗುಂಜಿಕೊಂಡರು. ಅದೃಶ್ಯ ವ್ಯಕ್ತಿ, ವ್ಯವಸ್ಥೆಗಳು ಮತ್ತೆ ಯಾರೋ ತಮ್ಮ ಮನೆ ಕಳೆದುಕೊಂಡರು. ಎಲ್ಲರೂ ವೈಯಕ್ತಿಕವಾಗಿ ಕುರುಡರಂತೆ ತಡಕಾಡುತ್ತಾರೆ ಎಲ್ಲಿ ಕಳೆದುಹೋಯ್ತು ಎಂದು!

''ಸಮಾಜವಾದ'' ಒತ್ತಟ್ಟಿಗಿರಲಿ. ಸಾಂಪ್ರದಾಯಿಕ ಬಂಡವಾಳ ಅರ್ಥಶಾಸ್ತ್ರ ಡಿ-ಮಾನಿಟೈಸೇಷನ್ ಎನ್ನುವ ಒಂದು ಅಸ್ತ್ರವನ್ನು ಹೇಳುತ್ತದೆ. ಬರುವ ಏಪ್ರಿಲ್ ಮೊದಲನೇ ತಾರೀಖಿಗೆ ಅದಕ್ಕೆ ಮುಂಚೆ ನಿಮ್ಮಲ್ಲಿರುವ ರೂ. ೧೦೦೦ದ ನೋಟುಗಳನ್ನು ಬ್ಯಾಂಕಿಗೆ ಹಿಂದಿರುಗಿಸಿ, ಬದಲಾಯಿಸಿಕೊಳ್ಳಿ; ಇನ್ನು ಮುಂದೆ ೧೦೦೦ ರೂ. ನೋಟುಗಳು ಇರುವುದಿಲ್ಲ, ನಿಮ್ಮಲ್ಲಿ ಹೇಗೆ ಅಷ್ಟು ಹಣವಿದೆ ಎನ್ನುವ ಲೆಕ್ಕ ನೀಡಬೇಕು ಅಷ್ಟೆ; ಹೀಗೆ ಮಾಡಿದರೆ ಅದು ಡಿ-ಮಾನಿಟೈಸೇಷನ್ ಎಂದೆನಿಸಿಕೊಳ್ಳುತ್ತದೆ. ಅದರ ಪರಿಣಾಮವೆಂದರೆ ಆ ತಾರೀಖಿನ ಒಳಗೆ ಬಹಳಷ್ಟು ಸಾಲದ ಮರುಪಾವತಿ ಆಗಬಹುದು. ಸರ್ಕಾರಕ್ಕೆ ಲೆಕ್ಕ ಒಪ್ಪಿಸಿ, ಹೆಚ್ಚು ತೆರಿಗೆ ವಸೂಲಿ ಆಗಬಹುದು. ಅದಕ್ಕೂ ಮೀರಿದ ಹಣ ಕಸವಾಗ ಬಹುದು. ಮಣ್ಣು, ನೆಲ, ಚಿನ್ನದ ಬೆಲೆ ಕೆಳಗೆ ಇಳಿದು ಸಾಧಾರಣವಾಗಬಹುದು. ಇಷ್ಟೆಲ್ಲಾ ಆದರೂ ವಾಸ್ತವ ಇಕಾನಮಿ – ಸರಕು ಸರಂಜಾಮುಗಳ ಮೌಲ್ಯಯುತ ಕ್ಷೇತ್ರ – ಪೇಪರ್ ಮನಿಯಂತೆ ಭ್ರಾಮಕವಲ್ಲದ್ದು – ಪುನಃ ಚೇತನಗೊಳ್ಳಬಹುದು. ಹಣದುಬ್ಬರ ಇಳಿದು ಧಾರಣೆವಾಸಿ ಸುಧಾರಿಸಬಹುದು. ಉದ್ಯಮ, ಉದ್ಯೋಗ ಮತ್ತೆ ಚಿಗುರಬಹುದು. ಆದರೆ ಇದನ್ನು ಅರ್ಥಶಾಸ್ತ್ರವಲ್ಲದ ಫಿನಾನ್ಷಿಯಲ್ ಮಾರುಕಟ್ಟೆಯ ಶಾಸ್ತ್ರ ಒಪ್ಪುವುದಿಲ್ಲ. ಅದು ಮಾರುಕಟ್ಟೆಯ ಅಂದರೆ ಷೇರುಪೇಟೆಯ ಕುಸಿತವನ್ನೇ ಆರ್ಥಿಕ ವ್ಯವಸ್ಥೆಯ ಕುಸಿತ ಎಂದು ಬಣ್ಣಿಸುತ್ತದೆ. ಅಮೆರಿಕದ ಅರ್ಥಮಂತ್ರಿಗಳು ಮುಕ್ಕಾಲುಪಾಲು ಅಲ್ಲಿಯ ವಾಲ್ ಸ್ಟ್ರೀಟ್‌ನಿಂದಲೇ ಬರುವುದು. ಅವರು ತಮ್ಮ ಹಿತಾಸಕ್ತಿಗಳ ವಿರುದ್ಧ ನೀತಿ ನಿರೂಪಣೆ ಏಕೆ ಮಾಡಿಯಾರು? ಮೊದಮೊದಲಿಗೆ ಷೇರುಪೇಟೆ ಎಂಬುದು ಬಂಡವಾಳ ಸಂಗ್ರಹಿಸುವ ಮಾಧ್ಯಮ ಎಂದಿದ್ದು, ದುಡ್ಡನ್ನು



ಬಹುಗುಣಿತ ಮಾಡುವ ಮಾಧ್ಯಮವಾದದ್ದು, ಸಟ್ಟಾ, ಜೂಜುಕಟ್ಟೆಯಾಗಿದ್ದು ಹೀಗೆ.

ಬಂಡವಾಳದ ಶಾಸ್ತ್ರದಲ್ಲಿ ಅಸಮರ್ಥವಾದ ಉದ್ಯಮಗಳು, ಸೋಲುವುದು ಅನಿವಾರ್ಯ, ಅಗತ್ಯ. ಅವು ಸಾಯಬೇಕು. ಹಾಗಾದಾಗಲೆ ವ್ಯವಸ್ಥೆಯ ಬ್ಯಾಲೆನ್ಸ್ – ಸರಿದೂಗಿಸುವಿಕೆ ಸಾಧ್ಯ. ವಯಸ್ಸಾದವರು ಸಾಯಬೇಕು ಎನ್ನುವುದು ಧರ್ಮವೆಂಬಂತೆ ಆದರೆ ಆದದ್ದೇನು? 'ಟೂ ಬಿಗ್ ಟು ಫೇಲ್' – (ಈ ಹೆಸರಿನ ಪುಸ್ತಕ ಬಂದಿದೆ) ಓ! ಅದು ತುಂಬ ದೊಡ್ಡದು, ಅದು ಬಿದ್ದರೆ, ಅದರೊಂದಿಗೇ ಅದೆಷ್ಟು ಪತನಗಳಾಗುತ್ತವೋ ಎನ್ನುವ ಹೆದರಿಕೆ ಹುಟ್ಟಿಸಿ, ಸಾರ್ವಜನಿಕ ಹಣನೀಡಿ, ಕೆಟ್ಟ ಬ್ಯಾಂಕುಗಳು, ಕೆಟ್ಟ ಫಿನಾನ್ಷಿಯಲ್ ಸಂಸ್ಥೆಗಳನ್ನು ಎತ್ತಿ ನಿಲ್ಲಿಸಿದರು. ಆದರೆ ಸರ್ಕಾರಿ ಕ್ಷೇತ್ರದ ಕೆಲವು ಸಂಸ್ಥೆಗಳನ್ನು ಕದ ಮುಚ್ಚಿಸಿದರು. ಸಾಲ ಹಿಂದಿರುಗಿಸುವ ಶಕ್ತಿ ಇಲ್ಲದವರೂ ಸಾಲ ಪಡೆದು, ತಮ್ಮ ಸಾಮರ್ಥ್ಯಕ್ಕೆ ಮೀರಿದ ಮನೆಗಳನ್ನು ಕೊಂಡವರ ನೆರವಿಗೆ ಓಡಿದರು. ಹೀಗಾದರೆ ಕಾಲಕಾಲಕ್ಕೆ ಕೆಟ್ಟ ಸಂಸ್ಥೆಗಳು ಸತ್ತು, ವ್ಯವಸ್ಥೆ ಶುದ್ಧಿಯಾಗುವುದು ಹೇಗೆ? ಸಮಾಜ ಶರೀರವನ್ನು ಹೊಕ್ಕ ವಿಷ ಹೊರಗೆ ಹರಿಯುವುದು ಹೇಗೆ? ಕೋಳಿ, ಹಂದಿ, ಮೀನು ಮುಂತಾದ ಸಾಕಣೆಯಲ್ಲಿ ಸಂಖ್ಯೆ ವಿಪರೀತ ಹೆಚ್ಚಿದಾಗ ಕಲ್ಲಿಂಗ್ ಅಂತ ಒಂದು ಕೆಲಸ ಮಾಡುತ್ತಾರೆ. ಹೆಚ್ಚು ಸಂಖ್ಯೆಯಲ್ಲಿ ಒಂದೇ ಸಲ ಕೊಂದು, ಅವುಗಳ ಸಂಖ್ಯೆಯನ್ನು ಕಡಿಮೆಗೊಳಿಸುವುದು ಬೆಳೆಸುವುದಕ್ಕೆ ಅಗತ್ಯ. ಹಾಗೆಯೇ ಸಮಾಜ ಶರೀರದಲ್ಲೂ ಹೆಚ್ಚೆನಿಸುವ, ಕೆಟ್ಟ, ಅಸ್ತಿತ್ವಕ್ಕೆ ಧಕ್ಕೆ ತರುವ ಸಂಸ್ಥೆಗಳನ್ನೂ, ಕಾಲಕಾಲಕ್ಕೆ ಕಡಿಯುವುದು ಒಟ್ಟಾರೆ ವ್ಯವಸ್ಥೆಗೆ ಅಗತ್ಯ. ರಘುವಂಶದ ಮಹಾರಾಜ ಸಮಾಜ ಕಂಟಕ ಅಸಮಂಜಸನನ್ನು ಕಾಡಿಗೆ ದಬ್ಬಿದನಂತೆ! ಸಮಾಜದ ಒಳಿತಿಗಾಗಿ ಬಂಡವಾಳ ವ್ಯವಸ್ಥೆಯನ್ನೇ ಕಾಡಿಗೆ ದಬ್ಬಬೇಕಾದರೆ ಅದಕ್ಕೆ ಹಿಂಜರಿಯಕೂಡದು.

ಹೀಗೆ ಇಂದಿನ ಪರಿಸ್ಥಿತಿಯೆಂದರೆ ಈ ವ್ಯವಸ್ಥೆಯ ಸ್ವರೂಪದಲ್ಲೇ ಪದೇ ಪದೇ ಅಸ್ವಸ್ಥವಾಗುವ ಸ್ವಭಾವ ಅಡಗಿದೆ, ಅದಕ್ಕೆ ಪರ್ಯಾಯ ವ್ಯವಸ್ಥೆ ಅಗತ್ಯ. ಅಲ್ಲಿಯವರೆಗೆ ಸಾಂಪ್ರದಾಯಿಕವಾಗಿ ಬಂದಿರುವ ತಾತ್ಕಾಲಿಕ ಪರಿಹಾರ ಮಾರ್ಗಗಳನ್ನಾದರೂ ಸ್ವೀಕರಿಸಿ, ಒಂದಿಷ್ಟು ರಿಪೇರಿ - ದುರಸ್ತಿ ಮಾಡಿಕೊಳ್ಳುತ್ತಿರಬೇಕು. ಅದೂ ಬೇಡ, ಇದೂ ಬೇಡ ಅಂದಾಗ ಒಂದು ಬಿಕ್ಕಟ್ಟಿನಿಂದ, ಮತ್ತೊಂದು ಅದಕ್ಕೂ ಹೆಚ್ಚಿನ ಬಿಕ್ಕಟ್ಟು, ಅದಕ್ಕೂ ಮುಂದೆ, ಮುಂದೆ ಎನ್ನುವುದೇ ಬಂಡವಾಳ ಜಗತ್ತಿನ ಕಳೆದ ಹಲವು ದಶಕಗಳ ಕತೆಯಾಗಿದೆ. ಭಾರತವೂ ಈ ಮಾರ್ಗವನ್ನು ಪ್ರವೇಶಿಸಿದೆ. ಪಶ್ಚಿಮದ ಬಿಕ್ಕಟ್ಟುಗಳು ಪೂರ್ವದ ಬಿಕ್ಕಟ್ಟಾಗುತ್ತವೆ ಬರುವ ದಿನಗಳಲ್ಲಿ, ಆರ್ಥಿಕ ಬಿಕ್ಕಟ್ಟುಗಳೇ ಮಹಾಯುದ್ಧಗಳೂ ಆಗುವುದು ಎನ್ನುವುದನ್ನು ಗಮನಿಸಬೇಕು.

ಕೆ. ಎಸ್. ಪಾರ್ಥಸಾರಥಿ
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ
ಚಿಟ್ಟಹಲಸೂರು ಅಂಚೆ, ಬೆಂಗಳೂರು - ೫೬೨೧೫೭



# ಒರೈಯನ್ ಎಂಬ ಅದ್ಭುತ ಲೋಕ

## ನಭಾವಲೋಕನ

ಇಂದಿನ ಶುಭ್ರ ಆಕಾಶಗಳಲ್ಲಿ ಥಟ್ಟನೆ ಆಕರ್ಷಿಸುವ ಪ್ರಖರ ನಕ್ಷತ್ರ ಲುಬ್ಧಕ (ಸಿರಿಯಸ್). ಹಾಗೆಯೇ ವಿನ್ಯಾಸದ ಕಾರಣ ನಮ್ಮನ್ನು ಸೆರೆಹಿಡಿಯುವ ಪುಂಜ ಮಹಾವ್ಯಾಧ ಅಥವಾ ಒರೈಯನ್. ಇದರ ಡಮರು ಆಕಾರ ಶತಶತಮಾನಗಳಿಂದ ಬಗೆಬಗೆಯ ಮಾಧ್ಯಮಗಳಲ್ಲಿ ದಾಖಲಾಗಿದೆ. ಪೆರುನಲ್ಲಿ ಎಕರೆಗಳ ವಿಸ್ತಾರದ ಬೃಹತ್ ವಿನ್ಯಾಸದ ಬಗ್ಗೆ ನೇಮಿಚಂದ್ರ ಅವರ ಪುಸ್ತಕದಲ್ಲಿ ವಿವರ ಸಿಗುತ್ತದೆ. ಹಾಗೆಯೇ ಮೆಕ್ಸಿಕೋದಲ್ಲೊಂದು ವಿನ್ಯಾಸ ಮಹಾವ್ಯಾಧನ ಡಮರು ಆಕೃತಿಯನ್ನೇ ಹೋಲುತ್ತದೆ. ಇದು ಗ್ರಾಮಗಳ ಸಂಕುಲ. ಈಜಿಪ್ಟ್‌ನ ಗಿಝಾದ ಮೂರು ಪಿರಮಿಡ್‌ಗಳು ಮಹಾವ್ಯಾಧನ ಮಧ್ಯದ ಮೂರು ನಕ್ಷತ್ರಗಳ ವಿನ್ಯಾಸ ಎಂಬುದು ಇನ್ನೊಂದು ವಾದ. ನಮ್ಮ ಪುರಾಣಗಳಲ್ಲಿ ಕಾಲಪುರುಷ ಎಂಬ ಹೆಸರಿನಿಂದ ಸೂಚಿತವಾಗಿರುವುದು ಇದೇ ನಕ್ಷತ್ರ ಪುಂಜ ಎಂಬುದು ಇನ್ನೊಂದು ವಾದ. ಕಾಲಪುರುಷನೇ ಉತ್ತರಾರ್ಧ ಮತ್ತು ದಕ್ಷಿಣಾರ್ಧ ಎಂದು ಖಗೋಳವನ್ನು ಭಾಗಿಸುವಾತ. ಇದಕ್ಕೊಂದು ಅರ್ಥವಿದೆ. ಡಮರು ಆಕಾರದ ಮಧ್ಯದ ಮೂರು ನಕ್ಷತ್ರಗಳು ವಿಷುವದ್ರೇಖೆಯ ಮೇಲಿವೆ. ಈ ಪದಗಳು ಅರ್ಥವಾಗದವರಿಗೆ ಒಂದು ಸರಳ ಸಲಹೆ. ಒರೈಯನ್ ಮಧ್ಯದ ಮೂರರಲ್ಲಿ ಮೊದಲನೆಯದು ಉದುರಿಸುವ ಅಥವಾ ಕಂತುವ ಬಿಂದುವನ್ನು ಕ್ಷಿತಿಜದಲ್ಲಿ ಗೊತ್ತು ಮಾಡಿಕೊಳ್ಳಿ. ಈಗ ಸಂಜೆ ಅದು ದಿಗಂತದ ಮೇಲಿರುವುದರಿಂದ ನಡುರಾತ್ರಿಯ ನಂತರ ಪಶ್ಚಿಮದಲ್ಲಿ ಅದು ಕಂತುವ ಬಿಂದುವನ್ನು ಗುರುತುಮಾಡಿಕೊಳ್ಳುವುದು ಸುಲಭವಾಗುವುದು. ಅಥವಾ ಮೂರು ತಿಂಗಳು ತಡೆದರೆ ಸಂಜೆಯೇ ಅದು ಕಂತುವುದನ್ನು ಕಾಣಬಹುದು. ಅದೇನೇ ಇರಲಿ, ಆ ಬಿಂದುವೇ ಪಶ್ಚಿಮ (ಉದಯಿಸುವ ಬಿಂದು ಪೂರ್ವ) ಎಂಬುದೇ ಈ ಪ್ರಯೋಗದ ಉದ್ದೇಶ. ಮಾರ್ಚ್ ೨೧ಕ್ಕೆ ಮತ್ತು ಸೆಪ್ಟೆಂಬರ್ ೨೨ಕ್ಕೆ ಸೂರ್ಯ ಈ ಬಿಂದುಗಳಲ್ಲಿ ಉದಯಿಸಿ ಕಂತುತ್ತಾನೆ.

ಇದು ವಿಷುವದ್ರೇಖೆಯ ಅರ್ಥ. ಖಗೋಳಕ್ಕೆ ಸಮಭಾಜಕ ವೃತ್ತವನ್ನು ಕಲ್ಪಿಸಿಕೊಂಡರೆ ಅದು ಒರೈಯನ್‌ನ ಈ ಮೂರು ಪುಂಜಗಳ ಮೂಲಕ ಹಾದು ಹೋಗುತ್ತದೆ. ಈ ಕ್ಲಿಷ್ಟ ಪರಿಕಲ್ಪನೆಯನ್ನು ಹಿಂದಿನವರು ದಾಖಲು ಮಾಡಲು ವೈವಿಧ್ಯಮಯ ಮಾಧ್ಯಮಗಳನ್ನು ಬಳಸಿರುವುದು ಅವರ ಸೃಜನಶೀಲತೆಗೆ ಸಾಕ್ಷಿಯಾಗಿದೆ.




ಈ ನಕ್ಷತ್ರಪುಂಜವನ್ನು ನೋಡುವಾಗ ದುರ್ಬೀನು ಬಳಸಿದರೆ ಮಹಾವ್ಯಾಧನ ಖಡ್ಗದ ಭಾಗದಲ್ಲಿ ಒರೈಯನ್ ನೆಬ್ಯುಲಾವನ್ನು ನೋಡಬಹುದು.

ಸಂಜೆ ಪೂರ್ವದ ಭಾಗದಲ್ಲಿ ಒರೈಯನ್ ಅಲ್ಲದೆ ವೃಷಭ, ವಿಜಯಸಾರಥಿ, ಮಿಥುನ ಮುಂತಾದ ಪ್ರಕಾಶಮಾನ ಪುಂಜಗಳೂ ಇವೆ. ಪಶ್ಚಿಮದಲ್ಲಿ ನಕ್ಷತ್ರಗಳೇ ಇಲ್ಲವೇನೋ ಎನ್ನಿಸಬಹುದು. ಗುರುಗ್ರಹವೊಂದು ಬಹಳ ಪ್ರಕಾಶಮಾನವಾಗಿ ಬೆಳಗುತ್ತದೆ. ಆಗ್ನೇಯ ದಿಕ್ಕಿನಲ್ಲಿ ಸಿರಿಯಸ್‌ನ ದಕ್ಷಿಣಕ್ಕೆ ಕನೋಪಸ್ ಅಥವಾ ಅಗಸ್ತ್ಯ ಕಾಣುವುದು. ಅದರ ಪ್ರತಿಬಿಂಬವೋ ಎಂಬಂತೆ ನೈಋತ್ಯ ದಿಕ್ಕಿನಲ್ಲಿ ಕಾಣುವ ಇನ್ನೊಂದು ಕ್ಷೀಣ ನಕ್ಷತ್ರ - ಅಚೆರ್ನಾರ್ - ವೈತರಣೀಮುಖ. ಉತ್ತರದಲ್ಲಿ ಕುಂತಿ (ಕಾಸಿಯೋಪಿಯಾ), ದ್ರೌಪದಿ (ಆಂಡ್ರೊಮಿಡಾ) ಮತ್ತು ಪಾರ್ಥ (ಪರ್ಸಿಯಸ್) ಇವು ಕಾಣುತ್ತವೆ. ಸಂಜೆಯ ಶುಭ್ರ ಆಕಾಶದಲ್ಲಿ ಚಂದ್ರ ನಿಲ್ಲದಾಗ ಆಂಡ್ರೊಮಿಡಾ ಗೆಲಾಕ್ಸಿಯನ್ನು ಬರಿಗಣ್ಣಿನಿಂದ ಹುಡುಕುವ ಪ್ರಯತ್ನ ಮಾಡಬಹುದು.

ಗುರು ಹೊರತಾಗಿ ಸಂಜೆ ಯಾವುದೇ ಗ್ರಹ ಕಾಣಲು ಸಿಗುವುದಿಲ್ಲ. ಮಂಗಳ ಸೂರ್ಯನೊಡನೆಯೇ ಉದಯಿಸಿ ಕಂತುವುದರಿಂದ ನೋಡುವ ಅವಕಾಶವೇ ಇಲ್ಲ. ಗುರು ರಾತ್ರಿ ಸುಮಾರು ೯ ಗಂಟೆಗೆ ಕಂತುತ್ತದೆ. ಅದೇ ಹೊತ್ತಿಗೆ ಶನಿ ಪೂರ್ವದಲ್ಲಿ ಉದಯಿಸುತ್ತದೆ. ಶನಿಯನ್ನು ಸುಮಾರು ಹತ್ತುಗಂಟೆಯ ನಂತರ ಬೆಳಗಿನ ಜಾವದವರೆಗೂ ನೋಡಬಹುದು. ಬುಧ ಮತ್ತು ಶುಕ್ರ ಎರಡೂ ಬೆಳಗಿನ ಜಾವ ಕಾಣುತ್ತವೆ.

### ಖಗೋಳ ದಿನಚರಿ

೧. ಬುಧ - ಚಂದ್ರ ಜೋಡಿ
೩. ಅಮಾವಾಸ್ಯೆ - ಮಂಗಳ ಚಂದ್ರ ಜೋಡಿ
೪. ಮಂಗಳ ಗ್ರಹದ ಯುತಿ (ಸೂರ್ಯನೊಡನೆಯೇ ಉದಯಾಸ್ತ)
೭. ಚಂದ್ರ - ಗುರು ಜೋಡಿ
೬. ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೧೧. ಚಾಂದ್ರಮಾಸದ ಮೊದಲ ಪಾದ
೧೮. ಹುಣ್ಣಿಮೆ ಚಂದ್ರನ ಪಕ್ಕ ಮಘ ನಕ್ಷತ್ರ
೧೯. ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೨೧. ಶನಿ - ಚಂದ್ರ - ಚಿತ್ತಾಗಳ ಪುಟ್ಟ ತ್ರಿಕೋಣ
೨೫. ಚಾಂದ್ರಮಾಸದ ಕೊನೆಯ ಪಾದ - ಚಂದ್ರ ಜ್ಯೇಷ್ಠಾ ಚಂದ್ರ ಜೋಡಿ
೨೬. ಬುಧ ಗ್ರಹದ ಯುತಿ
ಮಾರ್ಚ್ ೧ ಶುಕ್ರ - ಚಂದ್ರ ಜೋಡಿ



ಪಿರಮಿಡ್‌ಗಳ ವಿನ್ಯಾಸ

ಮೆಕ್ಸಿಕೋದ ಹಳ್ಳಿಗಳ ವಿನ್ಯಾಸ


**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

ತನ್ನ ಅನುಭವವನ್ನು ಇತ್ಯಾತ್ಮಕವಾಗಿ ನೋಡಲು ಸಾಧ್ಯವೆಂಬ ಮಾತು ಮುರಳೀಧರನಿಗೆ ತುಸು ಸಮಾಧಾನ ಕೊಟ್ಟಿತು. ಬಹುಶಃ ಆ ಡಾಕ್ಟರು ಅವನಿಗೆ ಹೊಸ ನೋಟಕ್ರಮವೊಂದನ್ನು ಕಲಿಸಿದರು ಅನ್ನಿಸುತ್ತದೆ. ಲಾವಾರಸ ನಿಧಾನಕ್ಕೆ ತಣ್ಣಗಾಗುತ್ತ ಬಂತು. ಮೃದುಲಾ ಬಗೆಗಿನ ತನ್ನ ಭಾವನೆಗಳನ್ನು ಎಂದೂ ಅವಳ ಮುಂದೆ ಹೇಳದಿದ್ದರೂ, ಹಾಡಿನ ಕುರಿತು ಆಸಕ್ತಿ , ಅವಳಿಗೆ ತಲೆನೋವು ಬಂದಾಗ ಅವಳ ಟೇಬಲ್ ಮೇಲೆ ವಿಕ್ಸ್ ಡಬ್ಬಿಯನ್ನಿಡುವುದು, ಅವಳ ಮಾತುಗಳನ್ನು ತಾಳ್ಮೆಯಿಂದ ಕೇಳಿಸಿಕೊಂಡು ಅಗತ್ಯ ಸಲಹೆ ಕೊಡುವುದು ಇಂತಹ ಕ್ರಿಯೆಗಳನ್ನು ಮುರಳೀಧರ ಮುಂದುವರಿಸಿದ. ಒಂದೇ ವ್ಯತ್ಯಾಸವೆಂದರೆ ಅವನು ಮೃದುಲಾಳನ್ನು ಮಾತ್ರವಲ್ಲದೆ ತನ್ನ ಸಂಪರ್ಕಕ್ಕೆ ಬಂದ ಎಲ್ಲರನ್ನೂ ಮೃದುವಾಗಿ ನಡೆಸಿಕೊಳ್ಳಲಾರಂಭಿಸಿದ.

# ಜೀವನ್ಮುಖಿ

ಡಾ|| ಎಲ್. ಜಿ. ಮೀರಾ

**ಸೂ**ಸೈಡ್ ಅಟೆಮ್ಪ್ಟ್! ಆತ್ಮಹತ್ಯೆಯ ಪ್ರಯತ್ನ! ಬ್ಯಾಂಕ್ ಮ್ಯಾನೇಜರ್ ಮುರಳೀಧರರ ತಲೆ ಸುತ್ತಿದಂತಾಯಿತು. ಸುತ್ತಮುತ್ತ ನಡೆಯುತ್ತಿದ್ದ ಬ್ಯಾಂಕಿನ ಅವ್ಯಾಹತ ದೈನಂದಿನ ಚಟುವಟಿಕೆಗಳು ಕನಸಿನಂತೆ ಕಾಣಲಾರಂಭಿಸಿದವು. ತಮ್ಮ ಕೈಕೆಳಗಿನ ಅಧಿಕಾರಿಗೆ ಏನು ಹೇಳಿದರೋ, ಅದು ಹೇಗೆ ಬ್ಯಾಂಕಿನಿಂದ ಹೊರಗೆ ಬಂದರೋ ಅವರಿಗೇ ಗೊತ್ತಾಗಲಿಲ್ಲ. ತಲೆಯಲ್ಲಿ ಓಡುತ್ತಿದ್ದದ್ದು ಮಗನನ್ನು ಅಡ್ಮಿಟ್ ಮಾಡಿದ್ದಾರೆಂದು ಹೇಳಲಾದ ಆಸ್ಪತ್ರೆಯ ಹೆಸರೊಂದೇ...

ಕಾರಿನ ಸ್ಟೀರಿಂಗ್ ತಿರುಗಿಸುತ್ತಿದ್ದ ಮುರಳೀಧರರ ತಲೆಯಲ್ಲಿ ವಿಚಾರಗಳ ಅಗ್ನಿಪರ್ವತವೇ ಸ್ಫೋಟಗೊಂಡಿತು. ವಿವೇಕನೆಂದು ಪ್ರೀತಿಯಿಂದ ಹೆಸರಿಟ್ಟು ಬೆಳೆಸಿದ ಮಗ ಇಂತಹ ಅವಿವೇಕದ ಕೆಲಸ ಮಾಡಿಕೊಂಡು ಬಿಟ್ಟನಲ್ಲ. ಮಾತಾಳಿಯಲ್ಲದ, ತನ್ನ ಪಾಡಿಗೆ ತಾನಿರುವ ಕೊಂಚ ಅಂತರ್ಮುಖಿಯಾದ ಹುಡುಗ ಅವನು, ಕಳೆದ ಮೂರು ನಾಲ್ಕು ದಿನಗಳಿಂದ ಅವನ ಮೌನ ಇನ್ನಷ್ಟು ಗಾಢವಾಗಿದ್ದನ್ನು ತಾನು ಗಮನಿಸಿದ್ದೆ. ಮ್ಲಾನವದನದಿಂದ ಇರುತ್ತಿದ್ದ. ಟಿವಿ ಮುಂದೆ ಕುಳಿತರೂ ಐದು ನಿಮಿಷಕ್ಕೆ ಆಫ್ ಮಾಡಿ ಎದ್ದುಹೋಗುತ್ತಿದ್ದ. ಬಲವಂತಕ್ಕೆ ಮಾತಾಡಿಸಿದರೆ ಮಾತ್ರ ಒಂದೆರಡು ಮಾತು. ತಮ್ಮ ಕಾಳಜಿಯ ಪ್ರಶ್ನೆಗಳಿಗೆ 'ಏನಿಲ್ಲಪ್ಪ' ಎಂಬ ಉತ್ತರ. ದಪ್ಪ ಗಾಜಿನ ಮೂಲಕ ನೋಡಿದಂತೆ ನೋಟ ಅಸ್ಪಷ್ಟವಾಗಿತ್ತು.

ಏನಾಯಿತು ? ಯಾಕೆ ಇಂಥ ಅತಿರೇಕದ ಹೆಜ್ಜೆ ಇಟ್ಟ? ತನ್ನಿಂದ ಇಲ್ಲ ಅವನ ತಾಯಿಯಿಂದ ಅವನಿಗೆ ಏನಾದರೂ ಬೇಸರವಾಯಿತೇ ? ಕಳೆದ ಒಂದು ವಾರದ ಘಟನೆಗಳನ್ನು ಮನಸ್ಸು ಅವಸರವಸರವಾಗಿ ಬೆದಕಿ ನೋಡಿತು. ಊಹೂಂ. ಜಗಳ ಮಾಡುವುದಿರಲಿ, ಯಾರೂ ಜೋರಾಗಿ ಮಾತೂ ಆಡದ ತಮ್ಮ ಮನೆಯ ವಾತಾವರಣ ಮಗನನ್ನು ಈ ಭಯಂಕರ ಕೆಲಸ ಮಾಡಿಸಲು ಸಾಧ್ಯವಿರಲಿಲ್ಲ. ಎಲ್ಲಿ ಏನು ತಪ್ಪಾಯಿತು ? ...ಅಪರಾಧಿ ಭಾವವೊಂದು ಬೆಕ್ಕಿನಂತೆ ಮೆಲ್ಲಗೆ ಸುಳಿದಾಡಲಾರಂಭಿಸಿತು.

ಎಂಬಿಎ ಮಾಡಿ ಕಂಪೆನಿಯೊಂದರಲ್ಲಿ ಒಳ್ಳೆ ಸಂಬಳದ ಹುದ್ದೆಯಲ್ಲಿರುವ ಹುಡುಗ ವಿವೇಕ್. ಕೆಲಸದ ವಿಷಯದಲ್ಲಿ ಏನಾದರೂ ತೊಂದರೆಯೇ ? ಊಹೂಂ, ಮೊನ್ನೆ ತಾನೇ ಪ್ರಮೋಷನ್ ಆಯಿತೆಂದು ಸಿಹಿ ತಂದಿದ್ದ... ಮಗನ ಈ ಅನಿರೀಕ್ಷಿತ ಕ್ರಿಯೆಗೆ ಇರಬಹುದಾದ ಕಾರಣಗಳ ಪಟ್ಟಿಯಲ್ಲಿ ಅವನ ಆಫೀಸನ್ನು ಹೊಡೆದುಹಾಕಿತು, ನಿವೃತ್ತಿಗೆ ಇನ್ನು ಎರಡು ವರ್ಷವಿದ್ದ ಬ್ಯಾಂಕ್ ಉದ್ಯೋಗಿ ಮುರಳೀಧರರ ಅನುಭವೀ ಮನಸ್ಸು... ಎದುರಿಗೆ ಕಾಣಿಸಿದ ಆಸ್ಪತ್ರೆ ಅವರ ವಿಚಾರಗಳಿಗೆ ತಾತ್ಕಾಲಿಕ ವಿರಾಮ ನೀಡಿತು.



ಮುರಳೀಧರರ ಮನಸ್ಸಿನಂತೆ ವಿವೇಕನನ್ನು ಇರಿಸಿದ್ದ ಕೋಣೆಯೂ ಪೇಲವ ಬಿಳಿ ಬಣ್ಣದಲ್ಲಿತ್ತು. ಸುಸ್ತಾದವನಂತೆ ಮಲಗಿದ್ದ ಮಗ. ಡ್ರಿಪ್ಸ್ ಹಾಕಿದ್ದರು. ಮಗನ ಪಕ್ಕದಲ್ಲಿ ಕುಳಿತು, ಉಬ್ಬುತ್ತಿದ್ದ ಗಂಟಲಿನ ನರಗಳಿಂದಾಗಿ, ಹೊರಬರಲು ಯತ್ನಿಸುತ್ತಿದ್ದ ಕಣ್ಣೀರಿನಿಂದಾಗಿ ಮುರಳೀಧರ ಚಡಪಡಿಸುತ್ತಾ 'ಯಾಕೆ ಪುಟ್ಟ? ...ಹೀಗೆ...' ಮಾತು ಮುಗಿಸಲಾರದೆ ಸಂಕಟಪಟ್ಟರು. ಹಾಸಿಗೆಯ ಆ ಪಕ್ಕದಲ್ಲಿ ಮೂಸಂಬಿ ಸುಲಿಯುತ್ತಿದ್ದ ಸುಮತಿ ಈ ಕಡೆ ಬಂದು ಗಂಡನ ಹೆಗಲ ಮೇಲೆ ಕೈಯಿಟ್ಟು "ಡಾಕ್ಟ್ರು ಔಟ್ ಆಫ್ ಡೇಂಜರ್ ಅಂತ ಹೇಳಿದ್ದಾರೆ" ಅಂದರು. ಹೆಂಡತಿಯ ಮುಖವನ್ನು ನೋಡಿ ಮುರಳೀಧರರ ಭಾವನೆಗಳು ಧುಮ್ಮಿಕ್ಕಿ ಹರಿದವು. 'ಯಾಕೆ ಹೀಗೆ...'' ಎನ್ನುತ್ತ

ಮೇಲೆ ಕೈಯಿಟ್ಟುಕೊಂಡು ಅತ್ತುಬಿಟ್ಟರು. ಈಗಾಗಲೇ ಅತ್ತು ಮುಗಿಸಿ ಕೊಂಚ ತಹಬಂದಿಯ ಮನಃಸ್ಥಿತಿಯಲ್ಲಿದ್ದ ಸುಮತಿಯ ಕಣ್ಣೂ ಮತ್ತೆ ಹನಿಗೂಡಿತು. ದುಃಖ, ಸದ್ಯ ಉಳಿದನಲ್ಲ ಎಂಬ ಸಮಾಧಾನ ಎರಡೂ ಸೇರಿದ ಭಾವವು ಆ ಕೋಣೆಯಲ್ಲೆಲ್ಲ ಹರಡಿ ಗಾಳಿ ಕೊಂಚ ಒದ್ದೆಯಾಯಿತು. ಮೌನದಲ್ಲಿ ಒಂದು ಕುಟುಂಬದ ಭಾವಸಂಬಂಧ ಉಸಿರಾಡಿತು. ತಂದೆಯ ತೊಡೆಯ ಮೇಲೆ ಕೈಯಿಟ್ಟ ವಿವೇಕ, ''ಐ ಆಮ್ ಸಾರಿ ಅಪ್ಪ'' ಎಂದ.

ಆ ಮಧ್ಯಾಹ್ನ ಜ್ಯೂಸ್ ಮಾಡುವುದು, ವಿವೇಕನಿಗೆ ಗಂಜಿ ತಿನ್ನಿಸುವುದು ಮುಂತಾದ ಆರೈಕೆಯ ಚಟುವಟಿಕೆಗಳಲ್ಲಿ ಕಳೆಯಿತು. ಮುರಳೀಧರರಾಗಲೀ ಸುಮತಿಯಾಗಲೀ ವಿವೇಕನನ್ನು ಕೆದಕಲು ಹೋಗಲಿಲ್ಲ. ಏನೂ ಆಗದಂತಿರಲು ಪ್ರಯತ್ನಿಸಿದರು. ಹೆಚ್ಚು ನಿದ್ದೆ ಮಾತ್ರೆ ತಿಂದು ಈಗ ತುರ್ತುಚಿಕಿತ್ಸೆಯಿಂದ ದಣಿದಿದ್ದ ದೇಹಕ್ಕೆ ವಿಶ್ರಾಂತಿ ಬೇಕಿತ್ತು.

* * *

ಮಾರನೇ ದಿನದ ಮಧ್ಯಾಹ್ನ. ಬ್ಯಾಂಕಿಗೆ ರಜ ಹಾಕಿದ್ದ ಮುರಳೀಧರ ಮಗನ ಪಕ್ಕ ಆಸ್ಪತ್ರೆಯಲ್ಲಿ ಕುಳಿತಿದ್ದಾರೆ. ದಿಂಬನ್ನೊರಗಿ ಕುಳಿತಿದ್ದ ಮಗನ ಸ್ಥಿತಿ ಇಂದು ಸ್ವಲ್ಪ ಉತ್ತಮವಾಗಿತ್ತು. ಸುಮತಿ ಮನೆಗೆ ಹೋಗಿದ್ದರು. ನರ್ಸುಗಳ ಓಡಾಟವೂ ಕಡಿಮೆಯಾಗಿದ್ದು, ಒಂದು ರೀತಿಯ ಶಾಂತ ಮೌನ ಆ ಕೋಣೆಯನ್ನು ವ್ಯಾಪಿಸಿತ್ತು. ಹೀಗೇಕೆ ಮಾಡಿದೆ ವಿವೇಕಾ ಎಂದು ಅಪ್ಪನ ಮನಸ್ಸು ಸಾವಿರ ಬಾರಿ ಕೇಳಿತ್ತು. ಅದನ್ನು ಅರಿತನೋ ಎಂಬಂತೆ ವಿವೇಕನೇ ಹೇಳಿದ ನಿಧಾನವಾಗಿ... ''ಸೋತ್ಬಿಟ್ಟೆ. ಪ್ರೀತೀಲಿ ಸೋತ್ಬಿಟ್ಟೆ. ಅಪ್ಪಾ. ಒಬ್ಳನ್ನ ಪ್ರಾಣದ ಹಾಗೆ ಪ್ರೀತಿಸ್ದೆ. ಯಾಕೋ ಗೊತ್ತಿಲ್ಲ. ಅವಳ್ಗೆ ಮನಸ್ಸಾಗ್ಲೇ ಇಲ್ಲ. ''ಸಾರಿ, ನಿನ್ ಬಗ್ಗೆ ಆ ಭಾವನೆ ಬರಲ್ಲ'' ಅಂದ್ಬಿಟ್ಲು. ಅವಳೇ ಸಿಗದಿದ್ದ ಮೇಲೆ ಈ ಬದುಕು ಯಾಕೆ ಅನ್ನಿಸ್ತು. ಅದಕ್ಕೆ...'' ದೀರ್ಘ ನಿಟ್ಟುಸಿರೊಂದು ಮಗನ ಮಾತಿಗೆ ವಿರಾಮವಿತ್ತಿತು. ಮುರಳೀಧರರ ಮನಸ್ಸು ಹೊಯ್ದಾಡಲಾರಂಭಿಸಿತು. ಪ್ರೇಮವನ್ನು ಬದುಕೆಂದು ಭಾವಿಸಿ ಅದು ಸಿಗಲಿಲ್ಲವೆಂದು ಸಾವಿನ ಮನೆ ಬಾಗಿಲು ತಟ್ಟಿದ ಕರುಳಿನ ಕುಡಿ. ಬೇರೆಯವರು ಏನು ಹೇಳಿದರೂ ವಿವೇಕನಿಗೆ ಅದು ದೊಡ್ಡ ನೋವು. ದಾಟಲಾರದ ಆಳ ಕಂದಕ. ಈ ಕಂದಕವನ್ನು ದಾಟಿಸುವುದು ಹೇಗೆ? ಸಾವಿನ ಮನೆಗೆ ಹೊರಟಿದ್ದವನನ್ನು ಜೀವನ್ಮುಖಿಯಾಗಿಸುವುದು ಹೇಗೆ?...

ಮುರಳೀಧರ ಮಗನ ಕೈಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡರು. ''ವಿವೇಕಾ, ನಿನ್ನ ಮನಸ್ಸು ನಂಗೆ ಅರ್ಥ ಆಗುತ್ತೆ. ವಾಡಿಕೆಯ ಸಮಾಧಾನದ ಮಾತುಗಳನ್ನು ಆಡಲ್ಲ ನಾನು. ಅಂಥ ಮಾತುಗಳು ಮನಸ್ಸನ್ನ ತಲುಪಲ್ಲ. ನೊಂದವನೊಬ್ಬ ತಾನು ನೋವನ್ನ ಹೇಗೆ ಎದುರಿಸ್ದೆ ಅಂತ ಹೇಳಿದ್ರೆ ನೋಯ್ತಾ ಇರೋನ್ಗೆ ಏನಾದ್ರೂ ದಾರಿ ಕಾಣಿಸ್ಬಹುದು.''

ಆ ನೀರವ ಮಧ್ಯಾಹ್ನದಲ್ಲಿ ಬ್ಯಾಂಕ್ ಮ್ಯಾನೇಜರ್ ಒಬ್ಬರು ಕಾಲದ ರೇಖೆಯಲ್ಲಿ ಇಪ್ಪತ್ತೆಂಟು ವರ್ಷ ಹಿಂದೆ ಹೋಗಿ ತಮ್ಮ ಮಗನ ಮುಂದೆ ಕಥೆಯೊಂದನ್ನು ಬಿಚ್ಚಿಟ್ಟರು.

* * *

ರಾಷ್ಟ್ರೀಕೃತ ಬ್ಯಾಂಕೊಂದರ ಸಣ್ಣಪಟ್ಟಣದಲ್ಲಿನ ಶಾಖೆ ಅದು. ಇಪ್ಪತ್ತೆಂಟು ವರ್ಷ ವಯಸ್ಸಿನ ಮುರಳೀಧರ ಅಲ್ಲಿ ಕೆಲಸ ಮಾಡುತ್ತಿದ್ದ. ತಂದೆ ತಾಯಿಯ ಬಲವಂತಕ್ಕೆ ಬೇಗ ಮದುವೆಯಾಗಿದ್ದ. ಹೆಂಡತಿ ಸುಮತಿ ಎರಡು ವರ್ಷದ ಮಗ ವಿವೇಕ – ಇದು ಅವನ ಸಂಸಾರ. ಹಳೆಯ ಜೋಡಿನಂತೆ ರೂಢಿಯಾಗಿದ್ದ ಆದರೆ ಯಾವುದೇ ನಾವೀನ್ಯ ಇಲ್ಲದ ಬದುಕು. ತನ್ನ ಜೀವನದಲ್ಲಿ ಏನಾದರೂ ದೊಡ್ಡದು, ಎದ್ದು ಕುಳಿತು ನೋಡುವಂಥದ್ದು ಸಂಭವಿಸಲಿದೆ ಅಂತ ಮುರಳೀಧರನಿಗೆ ಅನ್ನಿಸುತ್ತಿರಲಿಲ್ಲ. ತನ್ನ ಬದುಕಿಗಾಗಿ ವಿಶೇಷ ಯೋಜನೆಗಳೇನೂ ಅವನಿಗಿರಲಿಲ್ಲ. ಆದರೆ...

ಜೀವನದ ಯೋಜನೆ ಬೇರೆ ಇತ್ತು. ಆ ಯೋಜನೆ ಪ್ರಕಟಗೊಂಡದ್ದು ಒಂದು ಸಾಧಾರಣ ಮಧ್ಯಾಹ್ನದಲ್ಲಿ.

ಹಿರಿಯ ಉದ್ಯೋಗಿಯೊಬ್ಬರು ನಿವೃತ್ತಿ ಹೊಂದುವರೆಂದು ಆ ಮಧ್ಯಾಹ್ನ ಬ್ಯಾಂಕಿನಲ್ಲಿ ಪುಟ್ಟ ಸಮಾರಂಭವೊಂದು ನಡೆಯಲಿತ್ತು. ಇಂತಹ ಸಂದರ್ಭಗಳಲ್ಲಿ ಸಾಮಾನ್ಯವಾಗಿ ವಯಸ್ಸಾದ ವಿಮಲಮ್ಮನ ಸೊರಗಿದ ಕಂಠದ ಪ್ರಾರ್ಥನೆ ಕೇಳಿ ರೂಢಿ. ಅವರು ಹಾಡುತ್ತಿದ್ದುದು ಯಾವಾಗಲೂ ಅದೇ ಹಾಡು... 'ವಂದಿಸುವುದಾದಿಯಲಿ'... ಬ್ಯಾಂಕ್ ಉದ್ಯೋಗಿಗಳು ಸಹಿಸಲೇಬೇಕಾದ ಒಂದು ಆಚರಣೆಯೆಂಬಂತೆ ಆ ಹಾಡನ್ನು ಕೇಳಿಸಿಕೊಳ್ಳುತ್ತಿದ್ದರು. ಇಂದೂ ಸಹ ಪ್ರಾರ್ಥನೆಯ ಬಗ್ಗೆ ಪ್ರಕಟಣೆಯಾದಾಗ, ಮುರಳೀಧರ ತಲೆಯನ್ನೇ ಎತ್ತದೆ 'ವಂದಿಸುವುದಾದಿಯಲಿ'ಯನ್ನು ಐವತ್ತನೇ ಸಲ ಕೇಳಿಸಿಕೊಳ್ಳಲು ತಯಾರಾದ ಆದರೆ...

''ಅಂತರಂಗದಾ ಮೃದಂಗ ಅಂತು ತೋಂತನಾನ...'' ತೇಲಿ ಬಂತು ಹಾಡು. ಒಂದು ಹಾಡಿಗೆ ಮಾತ್ರ ಸಾಧ್ಯವಾಗುವಂತೆ ಕೇಳುಗರ ಮನಸ್ಸಿನ ಬಾಗಿಲು ತಟ್ಟಿತು. ಮುರಳೀಧರ ತಲೆಯೆತ್ತಿ ನೋಡಿದ, ಅಷ್ಟೆ. ಹಾಡು ಮತ್ತು ಹಾಡುತ್ತಿದ್ದವರು ಅವನನ್ನು ಸೆರೆ ಹಿಡಿದುಬಿಟ್ಟರು. ಹಾಡಿನೊಳಗೆ ಏಕವಾಗಿದ್ದ, ದಟ್ಟ ಕೆಂಪು ಬಣ್ಣದ ಕಾಟನ್ ಸೀರೆಯುಟ್ಟಿದ್ದ, ಪ್ಲೆಸೆಂಟ್ ಅನ್ನಿಸುವಂತಿದ್ದ ಹುಡುಗಿ... ದೇವರೇ, ಎಂಥ ದನಿ ಅದು! ಮನಸ್ಸಿನ ನಾಲಿಗೆಯ ಮೇಲೆ

## ಕಾವ್ಯಪ್ರೇಮಿ ವೈದ್ಯನೊಬ್ಬನ ಆಶಯ




ಒಂದೊಂದು ಬಾರಿ
ಒಂದೊಂದು ಬಾರಿ ಏಕೆ
ಹಲವಾರು ಬಾರಿ
ಹಲವಾರು ಬಾರಿ ಏಕೆ
ಪ್ರತಿಯೊಂದು ಬಾರಿ

ಪ್ರತಿಯೊಂದು ಬಾರಿ
ನಾನೊಂದು ನವ್ಯ ಕವಿತೆಯನೋದಿದಾಗ
ಪ್ರತಿಯೊಂದು ಬಾರಿ ನಾನೊಂದು
ನವ್ಯ ಚಿತ್ರವನು ಕಂಡಾಗ
ಸುಳಿಯುವುವು ಮನದಾಳದಲಿ

ಸುಳಿಯುವುವು ಮನದಾಳದಲಿ
ಹೇಳಲಾಗದೆನಿತೊ ಭಾವನೆಗಳು
ತೋರಬೇಕೆನಿಸುತ್ತದೆ
ಈ ಅಪೂರ್ವ ಕಲಾವಿದರಿಗೆ
ನನ್ನ ಅಪೂರ್ವ ಮೆಚ್ಚುಗೆಯ

ಮುಂದೊಮ್ಮೆ ಎಂದಾದರು
ಬಂದರೆನ್ನ ಬಳಿ ಇವರಾರಾದರೂ
ಇವರಾರಾದರೂ ಬಂದರೆನ್ನ ಬಳಿ
ನನ್ನ ಸಲಹೆಯನರಸಿ ಅವರ
ಕಾಡುತಿಹ ಬೇನೆಗೆ ಔಷಧಿಯನು ಕೇಳಿ

ನೀಡುವೆನು ಅವರಿಗೆ
ಕೊಡುಗೆಯ ರೂಪದಲಿ
ನವ್ಯ ಶೈಲಿಯಲಿ ಹೊಸದೊಂದ
ನವ್ಯ ಮಾದರಿಯ ಔಷಧಿಯ ಚೀಟಿ
ಸಂಪೂರ್ಣ ಉಚಿತವಾಗಿ

ಈ ಬಗೆಯ ಹೊಸ ಔಷಧಿಯ ಚೀಟಿ
ಬೀರಬಹುದವರಮೇಲೆ ಅಪೂರ್ವ
ಪರಿಣಾಮವ ಪರಿಹರಿಸಬಹುದವರ
ಕಾಯಿಲೆಯನು ಮತ್ತು ಅವರನು
ಕಾಡುತಿಹ ಕಾಮಾಲೆಯನು ಕೂಡ

ರಾಧಾ ರಮೇಶ
'ವಿಶ್ವಗಿರಿ', ೫೧/ಡಿ, ಹೊಸ ಬಾದಾಮಿನಗರ
ಹುಬ್ಬಳ್ಳಿ - ೫೮೦ ೦೨೩

ಸುರಿದ ಸಿಹಿಜೇನಿನ ಧಾರೆ. ಬೇಂದ್ರೆ ಆ ಕೋಣೆಯಲ್ಲೆಲ್ಲ ಅನುರಣಿಸತೊಡಗಿದರು. ಮುರಳೀಧರನ ಮನಸ್ಸು ಆ ಗಾನವಿಮಾನವನ್ನೇರಿ ಒಮ್ಮೆ ಲೋಕ ಸುತ್ತಿಬಂತು. ಭಾವಗೀತೆಗಳೆಂದರೆ ಹುಚ್ಚಿದ್ದ ಮುರಳೀಧರ ಅಂದು ನಿಜಕ್ಕೂ ಆ ಕ್ಷಣಗಳಲ್ಲಿ ಬ್ಯಾಂಕಿನ ಬೋರಿಂಗ್ ಲೋಕದಲ್ಲಿರಲಿಲ್ಲ.

ಮೃದುಲಾ. ಹಾಡುವ ಹುಡುಗಿಯ ಹೆಸರು ಮೃದುಲಾ. ''ಬೇಂದ್ರೆಯವರ ಬೆಸ್ಟ್ ಹಾಡು ಇದು. 'ಕಲ್ಪದಾದಿಯಲ್ಲಿ...' ಅಂತ ಶುರುವಾಗೋ ಚರಣ ತುಂಬ ಅರ್ಥಪೂರ್ಣ. ತುಂಬ ಖುಷಿಯಾಯ್ತು ನಿಮ್ಮ ಹಾಡು ಕೇಳಿ.'' ಮುರಳೀಧರನ ತುಂಬು ಮನಸ್ಸಿನ ಮೆಚ್ಚುಗೆಯ ಮಾತು ಕೇಳಿ ಅವನೆಡೆಗೆ ಕೃತಜ್ಞತೆ, ಸಂತೋಷಗಳ ನೋಟ ಬೀರಿದಳು ಮೃದುಲಾ.

ಹಾಡಿನ ಪ್ರಯಾಣವೊಂದು ಮೆಲ್ಲಡಿಗಳಲ್ಲಿ ಶುರುವಾಯಿತು. ಬೇಂದ್ರೆ, ಕುವೆಂಪು, ಕೆಎಸ್‌ನ, ಪುತಿನ... ಬ್ಯಾಂಕಿನ ಗಾಳಿಯಲ್ಲಿ ಹೊಸಗನ್ನಡ ಕವಿಗಳ ವಿಲಾಸ ಮೊದಲಾಯಿತು. ಭಾವಗೀತೆಗಳ ಜೀವನದಿ ಹರಿಯಲಾರಂಭಿಸಿತು. ಮೃದುಲಾ ಕೇಳಿದಾಗ ಮುರಳೀಧರ ತನ್ನ ಹತ್ತಿರ ಇದ್ದ ಕವನ ಸಂಕಲನಗಳನ್ನು, ಕ್ಯಾಸೆಟ್‌ಗಳನ್ನು ತಂದುಕೊಡುವುದು, ಬಿಡುವಿನ ವೇಳೆಯಲ್ಲಿ ಆಸಕ್ತರೆಲ್ಲ ಕೂತು ಮೃದುಲಾಳ ದನಿಗೆ ಕಿವಿಯಾಗುವುದು, ಸಿಗದ ಹಾಡಿಗಾಗಿ ಹುಡುಕುವುದು... ಒಂದು ಹೊಸಲೋಕವೇ ತೆರೆದುಕೊಂಡಿತು.

ಮುರಳೀಧರನಿಗೆ ಉತ್ಸಾಹದಿಂದ ಬ್ಯಾಂಕಿಗೆ ಬರಲು ಕಾರಣ ಸಿಕ್ಕಿತು. ಮೃದುಲಾ ಕೇಳಿದಾಗ ''ದೇವಮಾನವರೆಲ್ಲ ಕಂಡ ಕನಸೇ ಬಾರೆ'' ಎಂಬ ಅಪರೂಪದ ಬೇಂದ್ರೆ ಹಾಡನ್ನು ಅವನು ತಂದುಕೊಟ್ಟಿದ್ದ. ಆಗ ಅವಳ ಕಣ್ಣಲ್ಲಿ ಮೂಡಿದ ಸಂತೋಷ! 'ಒಂದು ಹಾಡನ್ನು ಇಷ್ಟು ಪ್ರೀತಿಸಲು ಸಾಧ್ಯವೇ?' ಎಂಬ ಪ್ರಶ್ನೆಯನ್ನು ದೇವರೂ ಕೇಳುವಂತಿತ್ತು! ದಿನಗಳು ಗೆಜ್ಜೆ ಕಟ್ಟಿಕೊಂಡು ಕುಣಿಯಲಾರಂಭಿಸಿದವು.

* * *

ಏನಾಯಿತು? ಹಾಡುತ್ತಿದ್ದ, ಕುಣಿಯುತ್ತಿದ್ದ ಜೀವನ ಯಾಕೆ ಸುಮ್ಮನಾಯಿತು? ಬ್ಯಾಂಕು ಮತ್ತು ತನ್ನ ಬದುಕು ಭಣಭಣ ಅನ್ನಿಸುತ್ತಿವೆ? ಮುರಳೀಧರ ಆತಂಕದಿಂದ ಗಮನಿಸಿದ. ಹ್ಞಾಂ... ಮೂರು ನಾಲ್ಕು ದಿನದಿಂದ ಮೃದುಲಾ ಬ್ಯಾಂಕಿಗೆ ಬರುತ್ತಿಲ್ಲ. 'ಹತ್ತು ದಿವಸ ರಜೆ ಹಾಕಿದ್ದಾರಂತೆ' ಎಂಬ ಮಾಹಿತಿ ಸಿಕ್ಕಿತು. 'ಅಷ್ಟೊಂದ್ ದಿವ್ಸಾ?' ಎಂಬ ಮಾತು ತನ್ನ ಬಾಯಿಂದ ಹೊರಬಂದು ಆತನನ್ನೇ ಚಕಿತಗೊಳಿಸಿತು.

ಅವನನ್ನು ಇನ್ನೂ ಚಕಿತಗೊಳಿಸಿದ್ದೆಂದರೆ ತನ್ನನ್ನು ಆವರಿಸಿದ ಮ್ಲಾನತೆ. ಯಾವುದೂ ಬೇಡವೆಂಬ ಭಾವನೆ. ಬ್ಯಾಂಕು ಎಲ್ಲ ಬಣ್ಣಗಳನ್ನೂ ಕಳೆದುಕೊಂಡುಬಿಟ್ಟಿದೆ ಅನ್ನಿಸಲಾರಂಭಿಸಿತು. 'ಇದೇನು ನನ್ನ ಮನಸ್ಸು ಬುದ್ಧಿಯನ್ನು ಮೀರಿ ವರ್ತಿಸುತ್ತಿದೆ! ಅವಳಿಗೂ ನನಗೂ ಏನು ಸಂಬಂಧ? ಅವಳು ಬರಲಿಲ್ಲವೆಂದು ನಾನು ಹೀಗೆ ಯಾವುದೂ ಬೇಡದವನಂತೆ ಆಡುವುದರಲ್ಲಿ ಏನು ತರ್ಕವಿದೆ? ಇದೇನು ಆಕರ್ಷಣೆಯೋ, ವ್ಯಾಮೋಹವೋ, ಬದಲಾವಣೆಯ ಬಯಕೆಯೋ, ಇನ್ನೇನು ಹುಚ್ಚೋ?' ಮುರಳೀಧರನಿಗೆ ಅರ್ಥವಾಗಲಿಲ್ಲ. ಒಟ್ಟಿನಲ್ಲಿ ಹತ್ತು ದಿನ ಕಳೆಯುವಷ್ಟರಲ್ಲಿ ಅವನಿಗೆ ಸಾಕುಸಾಕಾಯಿತು.

ಹನ್ನೊಂದನೆಯ ದಿನ. ಮೃದುಲ ಮರಳಿ ಬರುವ ದಿನ. ಬೆಳಗ್ಗಿನಿಂದ ಮುರಳೀಧರನ ಕಣ್ಣುಗಳು ನಿರೀಕ್ಷೆಯಿಂದ ದೀಪ್ತವಾಗಿದ್ದವು. ಬೆಳಗ್ಗೆ ಅವಳು ಬ್ಯಾಂಕಿಗೆ ಬರುತ್ತಿದ್ದಂತೆ... ಓಹ್ ಅವಳು ಬರುತ್ತಿದ್ದಾಳೆ ಎಂಬ ಸಂಭ್ರಮ ಮುರಳೀಧರನ ಮೈಮನಗಳನ್ನು ವ್ಯಾಪಿಸಿತು. ಖುಷಿಯ ಸ್ಫೋಟ. ಅಬ್ಬಾ! ಸದ್ಯ ಬಂದಳಲ್ಲ! ಅನ್ನಿಸಿ ದೊಡ್ಡ ಸಮಾಧಾನ. ಲೋಕದಲ್ಲಿ ಎಲ್ಲ ಸರಿಯಾಗಿದೆ ಎಂಬ ಭಾವನೆ... ಮುರಳೀಧರನಿಗೆ ಈ ಅನುಭವ ಹೊಸದು. ಆ ಕ್ಷಣ, ಅದೊಂದು ಮಿಂಚಿನ ಕ್ಷಣ. ಆ ದಿವ್ಯಕ್ಷಣದಲ್ಲಿ ಮುರಳಿಗೆ ಪ್ರೇಮದ ಹೊಳಹು ದಕ್ಕಿತು. ಇದೇ ಇರಬೇಕು ಪ್ರೀತಿ ಅಂದರೆ. ಓಹ್, ಇದೇನಾ! ಕವಿಗಳು 'ಸುಮಕ್ಕೆ ಸೌರಭ ಮೂಡಿದ ಗಳಿಗೆ' ಎಂದು ಇದನ್ನೇನಾ ಕರೆಯೋದು? 'ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ, ರಸಾಗಂಗಾನದಿಯಲ್ಲಿ ಅದರುಗಮ. ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು, ಆತ್ಮದ ನೀತಿಯು, ಮಧುಸಂಗಮ'. ಬೇಂದ್ರೆ ಕಿವಿಯಲ್ಲಿ ಮೊರೆಯಲು ಶುರು ಮಾಡಿದರು. ಮೈ ಪುಳಕವೆದ್ದು ಕೊಂಚ ಹೊತ್ತು ತಾನು ಯಾರು ಎಲ್ಲಿದ್ದೇನೆ ಎಂಬುದೇ ಮರೆತುಹೋಯಿತು.

ಮುಂದಿನ ಕೆಲವು ದಿನಗಳು ಮುರಳೀಧರನ ಪಾಲಿಗೆ ಅತ್ಯಂತ ಸಂತೋಷದ ಮತ್ತು ಅತ್ಯಂತ ಚಡಪಡಿಕೆಯ ದಿನಗಳಾದವು. ಉತ್ಸಾಹ, ವಿರಹ, ರೋಮಾಂಚನ, ಬೇಸರ, ನೆಮ್ಮದಿ, ಅನುಮಾನ... ಏನೆಲ್ಲ ಭಾವಗಳು ಒಟ್ಟೊಟ್ಟಿಗೆ ಅವನನ್ನು ಮುತ್ತುತ್ತಿದ್ದವು. ಅವನ ಅರೇಂಜ್ಡ್ ಮದುವೆಯಲ್ಲಿ ಅವನಿಗೆ ಈ ರೀತಿಯ ಭಾವ ಉಂಟಾಗಿರಲಿಲ್ಲ. ಹೆಂಡತಿ ಸುಮತಿಯ ಮೇಲೆ ಪ್ರೀತಿ, ವಿಶ್ವಾಸ, ನಂಬಿಕೆ ಇದ್ದರೂ ಹೀಗೆ ಹೊಟ್ಟೆಯಲ್ಲಿ ಚಿಟ್ಟೆ ಓಡಾಡಿದಂತಾಗುತ್ತಿರಲಿಲ್ಲ.

ಒಳಗಿನ ಪುಳಕಗಳೇನೇ ಇರಲಿ, ಅವನು ಹೊರಗೇನೂ ತೋರಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ.




ಮದುವೆಯಾದ ತಾನು ಹದಿಹರೆಯದ ಹುಡುಗನಂತೆ ಆಡುವುದು – ಹಾಗಾಡಬೇಕೆಂಬ ಮನಸ್ಸಿದ್ದರೂ – ಸಾಧ್ಯವೇ? ಅದೂ ಅಲ್ಲದೆ ಮೃದುಲಾ ತನ್ನ ಬಗ್ಗೆ ತನ್ನ ಸಾಹಿತ್ಯಾಸಕ್ತಿಯ ಬಗ್ಗೆ ತುಂಬ ಗೌರವವಿಟ್ಟಿದ್ದಳು. ವೈಯಕ್ತಿಕ ವಿಚಾರ ಹೆಚ್ಚಾಗಿ ಮಾತಾಡದಿದ್ದರೂ ಅವಳಿಗೆ ಮದುವೆಯಾಗಿ ಒಬ್ಬ ಮಗಳಿದ್ದಾಳೆ ಅಂತ ಗೊತ್ತಿತ್ತು. ಅವಳ ಕಣ್ಣಲ್ಲಿದ್ದ ತನ್ನ ಬಿಂಬ ಹೊಳಪು ಕಳೆದುಕೊಳ್ಳುವುದು ಇಷ್ಟವಿಲ್ಲ. ತನ್ನನ್ನು ಮೂಕಗೊಳಿಸಲು ಇಷ್ಟು ಸಾಲದೇ? ಪ್ರೇಮಕ್ಕೆ ಮನುಷ್ಯರ ವ್ಯವಸ್ಥೆಯ ಸಮೀಕರಣಗಳು ಗೊತ್ತಿಲ್ಲ. ಮದುವೆಯಾದವರ ಎದೆಯಲ್ಲೂ ಹುಟ್ಟಿಬಿಡುತ್ತದಲ್ಲ...

ಸಂಭ್ರಮವು ಯಾತನೆಯಾಗಿ ಬದಲಾಗಲು ಮುರಳೀಧರನಿದ್ದ ಸ್ಥಿತಿಯಲ್ಲಿ ಹೆಚ್ಚು ಕಾಲ ತಗುಲಲಿಲ್ಲ. ಮಾತಾಡಲಾಗದ ಸುಮ್ಮನಿರಲಾಗದ ಸಂಕಟ. ಮದುವೆಯಾಗದಿರುವವರ ಪ್ರೇಮಕಥೆಗಳನ್ನು ಲೋಕ ಸಿನಿಮಾ ಮಾಡಿ ಸೆಲೆಬ್ರೇಟ್ ಮಾಡುತ್ತದೆ. ಆದರೆ ಮದುವೆಯಾದವರ ಹೃದಯದಲ್ಲಿ ಪ್ರೇಮ ಮೊಳೆತರೆ ಅದನ್ನು ಹಾದರ ಅಂದುಬಿಡುತ್ತದಲ್ಲ? ಏನು ಮಾಡುವುದು? ಪ್ರೀತಿಗೆ ಸಮಾಜ ಕೊಡುವ ಪರವಾನಗಿ ರದ್ದಾದ ಮೇಲೆ ಪ್ರೀತಿಸಿದಂಥವರ ಪಾಡು ಅವರಿಗೇ ಗೊತ್ತು. ತನ್ನನ್ನೇ ನಂಬಿದ್ದ ಸುಮತಿ, ಹಾಲುಗಲ್ಲದ ವಿವೇಕ. ಮೃದುಲಾಳ ಕಣ್ಣಲ್ಲಿ ಬಿದ್ದುಹೋಗುವ ಕಳವಳ ಇವು ಮುರಳಿಯೊಳಗಿನ ಪ್ರೇಮಿಯನ್ನು ಕೊಲ್ಲಲಾಗದಿದ್ದರೂ ಅವನಲ್ಲಿ ತುಂಬ ಚಡಪಡಿಕೆ ಉಂಟುಮಾಡಿದವು.

* * *

ಹೇಗೆ ಈ ಜೀವಹಿಂಸೆಯ ಯಾತನೆಯಿಂದ ಪಾರಾಗುವುದು? ಒಮ್ಮೆ ಮೃದುಲಾಳಲ್ಲಿ ಹೇಳಿಕೊಂಡು ಬಿಡಲೇ? ಅವಳು ಏನಾದರೂ ತಿಳಿದುಕೊಳ್ಳಲಿ, ಮನಸ್ಸನ್ನಂತೂ ಒಮ್ಮೆ ಬಿಚ್ಚಿಡುವುದು. ಈ ನಿರ್ಧಾರ ಮಾಡಿದ ಮೇಲೆ ಮುರಳೀಧರನ ಮನಸ್ಸು ಕೊಂಚ ಹಗುರಾಯಿತು. ಬಾಯಲ್ಲಿ ಹೇಳಲು ಧೈರ್ಯ ಸಾಲದೆ ಒಂದು ಪತ್ರ ಬರೆದಿಟ್ಟುಕೊಂಡ :

ಪ್ರಿಯ ಮೃದುಲಾ,

ಅಕಾಲದಲ್ಲಿ ಮಳೆಯಾಗ್ತಾ ಇದೆ, ಮದುವೆಯಾಗಿ ಒಂದು ಮಗುವಿರುವ ನನ್ನ ಹೃದಯದಲ್ಲಿ ಪ್ರೀತಿ ಹುಟ್ಟಿದೆ. ನನ್ನನ್ನು ಸಂಪೂರ್ಣವಾಗಿ ಜ್ವರದಂತೆ, ಹುಚ್ಚಿನಂತೆ ಆವರಿಸಿರುವ ಈ ಭಾವವನ್ನು ಏನು ಮಾಡುವುದೋ ತಿಳಿಯುತ್ತಿಲ್ಲ. ನಿಮಗೆ ಇದನ್ನು ತಿಳಿಸಿದರೆ ಮನಸ್ಸು ಸ್ವಲ್ಪ ಹಗುರವಾಗಬಹುದೆಂದು ಈ ಪತ್ರ ಬರೆಯುತ್ತಿದ್ದೇನೆ. ಕಾಡುಗಿಡದಂತೆ ತನ್ನಿಂತಾನೇ ಹುಟ್ಟಿ ಮೈಯಲ್ಲೆಲ್ಲ ಹೂಬಿಟ್ಟ ಈ ಭಾವದಿಂದ ಪರಿಮಳಭರಿತವಾಗಿದೆ ಈ ಜೀವ. ಸ್ಕೂಲು, ಕಾಲೇಜು, ಕೆಲಸ, ಮದುವೆ, ಮಗು ಎಂಬ ಸರಳ ರೇಖೆಯಲ್ಲಿ ಚಲಿಸಿದ ನನಗೆ ಈ ಅದ್ಭುತ ಭಾವನೆ ಹೊಸದು. ಎಲ್ಲ ಹಗುರವಾದಂತೆ ಅನ್ನಿಸುತ್ತಿದೆ.

ಅಂದ ಹಾಗೆ ಇದನ್ನೆಲ್ಲ ನಿಮ್ಮ ಬಳಿ ಯಾಕೆ ಹೇಳಿಕೊಳ್ಳುತ್ತಿದ್ದೇನೆ? ಯಾಕೆಂದರೆ ಇನ್ಯಾರ ಬಳಿಯೂ ಹೇಳಲು ಸಾಧ್ಯವಿಲ್ಲ. ನಾನು ಪ್ರೀತಿಸಿರುವುದು ನಿಮ್ಮನ್ನು ಮತ್ತು ನಿಮ್ಮ ಹಾಡನ್ನು...

ಶಾಕ್ ಆಯಿತಾ ಮೃದುಲಾ? ಬೇಸರವಾಯಿತಾ? ಸಿಟ್ಟು ಬಂತಾ? ದಯವಿಟ್ಟು ಸಿಟ್ಟು ಮಾಡಿಕೊಳ್ಳಬೇಡಿ.

ಇದ್ಯಾವ ತಲೆನೋವು ಅಂತ ಹುಬ್ಬುಗಂಟಿಕ್ಕಬೇಡಿ. ಇನ್ನು ಬ್ಯಾಂಕಲ್ಲಿ ಪ್ರೀತ್ಸು ಪ್ರೀತ್ಸು ಅಂತ ಶನಿಯಂತೆ ಕಾಡುತ್ತಾನೇನೋ ಪೀಡೆ ಎಂದು ಬಯ್ದುಕೊಳ್ಳಬೇಡಿ. ಹಾಗೆಲ್ಲ ಮಾಡುವುದಿಲ್ಲ ನಾನು. ಅಂತಹ ತುಂಟಾಟಗಳನ್ನು ಮಾಡುವ ವಯಸ್ಸಲ್ಲ ನನ್ನದು. ನಿಮ್ಮಂತೆ ನನಗೂ ಕುಟುಂಬದ ಜವಾಬ್ದಾರಿಗಳಿವೆ. ಮತ್ತೆ ಗುಟ್ಟು ಗುಟ್ಟಾಗಿ ಅಫೇರ್ ಇಟ್ಟುಕೊಳ್ಳಿ ಎಂದೂ ನಾನು ಬಲವಂತಿಸುವುದಿಲ್ಲ, ನನ್ನಾಣೆ. ಮತ್ಯಾಕೆ ಪತ್ರ ಬರೆದೆ ಅಂದಿರಾ? ಯೂ ಆರ್ ಸೋ ಲವಬಲ್ ಅಂತ ನಾನು ನಿಮಗೆ ಹೇಳಬೇಕಿತ್ತು. ಪ್ರೀತಿಯೆಂಬ ಭಾವನೆಯನ್ನು ಪರಿಚಯ ಮಾಡಿಕೊಟ್ಟ ದೇವತೆಗೆ ಒಂದು ಥ್ಯಾಂಕ್ಸ್ ಹೇಳಬೇಕಿತ್ತು, ಅಷ್ಟೆ.

ಇತಿ ನಿಮ್ಮ ಸ್ನೇಹಿತ,
ಮುರಳೀಧರ

ಪತ್ರ ಬರೆದೇನೋ ಆಯಿತು. ಅದನ್ನು ಕೊಡಲು ಒಂದು ಸಂದರ್ಭ ಬೇಕಿತ್ತು. ಮೃದುಲಾ ಒಮ್ಮೆ ಬ್ಯಾಂಕಿಗೆ ನಾಕೈದು ದಿನ ರಜೆ ಹಾಕಿದ್ದಾಗ ಬ್ಯಾಂಕಿನ ಯಾವುದೋ ಪತ್ರ ಕೊಡುವ ನೆಪದಲ್ಲಿ ಮುರಳೀಧರ ಅವಳ ಮನೆಗೆ ಹೋದ. ಬೊಂಬೆಯೊಂದನ್ನು ಹಿಡಿದುಕೊಂಡಿದ್ದ ತನ್ನ ಐದು ವರ್ಷದ ಮಗಳೊಡನೆ ಮೃದುಲಾ ಕಂಡಳು. ಸಪ್ಪಗಿದ್ದಳು ಅನ್ನಿಸಿತ್ತು. ಆತ್ಮೀಯವಾಗಿ ಮಾತಾಡಿಸಿದಳು. ''ಬನ್ನಿ, ನಮ್ಮ ಹಸ್ಬೆಂಡ್‌ನ ಪರಿಚಯ ಮಾಡಿಸ್ತೀನಿ'' ಅಂತ ಒಂದು ಕೋಣೆಯೊಳಗೆ ಕರೆದುಕೊಂಡು ಹೋದಳು. ಅಷ್ಟೆ. ಅಲ್ಲಿ ನೋಡಿದ ದೃಶ್ಯ ಮುರಳೀಧರನನ್ನು ಅವಾಕ್ಕಾಗಿಸಿತು.

ಹಾಸಿಗೆಯ ಮೇಲೆ ಮಲಗಿದ್ದ ಕೈಕಾಲು ಆಡಿಸಲು ಸಾಧ್ಯವಿಲ್ಲದಿದ್ದ ಸುಮಾರು ಮೂವತ್ತೈದು ವರ್ಷದ ವ್ಯಕ್ತಿ, ಕಣ್ಣಲ್ಲೇ ಮುರಳೀಧರನಿಗೆ ಆತ ವಂದಿಸಿದ. ಮಿಲಿಟ್ರಿಯಲ್ಲಿ ಕೆಲಸ ಮಾಡುತ್ತಿದ್ದ ಅವನಿಗೆ ಸ್ನಾಯುಗಳಿಗೆ ಸಂಬಂಧಿಸಿದ ಎಂಥದೋ ಕಾಯಿಲೆ ಬಂದು ಹೀಗಾಗಿದೆ. ಮಗುವೊಂದನ್ನು ನೋಡಿಕೊಂಡಂತೆ ಅವನನ್ನು ನೋಡಿಕೊಳ್ಳಬೇಕು. ಒಬ್ಬ ಪಾರ್ಟ್‌ಟೈಂ ನರ್ಸ್ ಬರುತ್ತಾಳೆ. ಅವಳು ಬರದಿದ್ದಾಗ ಮೃದುಲಾ ರಜ ಹಾಕಿ ನೋಡಿಕೊಳ್ಳಬೇಕು. ಮುರಳೀಧರನ ಮನಸ್ಸು ಸಂಕಟದಿಂದ ಚಡಪಡಿಸಿತು. ನನ್ನ ಮಲ್ಲಿಗೆ ಹೂವಿಗೆ ಇಂತಹ ಕಷ್ಟದ ಬದುಕೇ?

''ಮಾತಾಡೋದೆಲ್ಲ ಅರ್ಥವಾಗುತ್ತೆ. ಅವರೂ ಮಾತಾಡ್ತಾರೆ. ಎದ್ದು ಓಡಾಡಕ್ಕಾಗಲ್ಲ ಅಷ್ಟೆ'' ಎಂದು ಗಂಡನ ಬಳಿ ಕುಳಿತು ಮೃದುಲಾ ಹೇಳುತ್ತಿದ್ದಂತೆ ತಾನು ಬರೆದ ಪತ್ರವಿದ್ದ ಜೋಬನ್ನು ನೇವರಿಸುತ್ತಿದ್ದ ಮುರಳೀಧರನ ಕೈ ಒಮ್ಮೆಗೇ ಸುಮ್ಮನಾಯಿತು. ಹೊರಗೆ ಧುಮುಕಲು ಅಸಹನೆಯಿಂದ ಕಾಯುತ್ತಿದ್ದ ಪ್ರೀತಿಯ ಲಾವಾ ಒಳಗೆ ಮಡುಗಟ್ಟಿಬಿಟ್ಟಿತು. ಇನ್ನು ಈ ಪತ್ರಕ್ಕೆ ಕೆಲಸವಿಲ್ಲ. ಸುತ್ತಲಿನ ಲೋಕವೇ ಚೂರು ಚೂರಾಗಿ ಹೋಗುತ್ತಿದೆ ಅನ್ನಿಸುವಾಗ, ''ಅಂಕಲ್ ಈ ಬೊಂಬೆ ಕೈ ಸರಿಮಾಡಿಕೊಡ್ತೀರಾ'' ಎಂದು ಬಂದ ಅವಳ ಐದು ವರ್ಷದ ಮಗಳನ್ನು ಏನೂ ಆಗದವನಂತೆ ತೊಡೆಯ ಮೇಲೆ ಕೂರಿಸಿಕೊಂಡ. ಸಾಮಾನ್ಯ ಮನುಷ್ಯರು ಅಭಿನಯದಲ್ಲಿ ರಾಷ್ಟ್ರಪ್ರಶಸ್ತಿ ಪಡೆದ ನಟನನ್ನೂ ಮೀರಿಸುತ್ತಾರೆ ಎಂದು ಆಗ ಅವನಿಗೆ ಗೊತ್ತಾಯಿತು.

* * *

ಒಳಗೆ ಸುರಿದ ಲಾವಾರಸ ಸುಮ್ಮನೆ ಬಿಡುತ್ತದೇನು? ಜೀವಂತವಾಗಿ ಸುಡುವ ಬೆಂಕಿ. ಮುರಳೀಧರ ಒಬ್ಬನೇ ಕುಳಿತು ಅಳುವುದು, ಸುಮ್ಮನೆ ರಸ್ತೆಯಲ್ಲಿ ತಿರುಗುವುದು, ಕಾಗದದಲ್ಲಿ ತನಗನ್ನಿಸಿದ್ದನ್ನೆಲ್ಲ ಗೀಚುವುದು ಏನೇನೋ ಮಾಡುತ್ತಿದ್ದ. ಬ್ಯಾಂಕಿನಲ್ಲಿದ್ದಾಗ ಅವನ ಒದ್ದಾಟ ಹೇಳತೀರದು. ಅವಳನ್ನು ನೋಡುತ್ತಿದ್ದರೆ ಬಳಿಗೆಳೆದುಕೊಂಡು ಎದೆಯಲ್ಲಡಗಿಸಿಕೊಂಡು ಬಿಡಬೇಕು ಅನ್ನಿಸುತ್ತಿತ್ತು. ಕೆಲವು ಸಲ ಲೋಕದ ಚಿಂತೆ ಮರೆತು ಅವಳನ್ನು ಅನಾಮತ್ತು ಎತ್ತಿಕೊಂಡುಹೋಗಿ... ಛೆ... ಹಾಗನ್ನಿಸಿದಾಗಲೆಲ್ಲ ಸೂರು ನೋಡುತ್ತ ಮಲಗಿರುವ ಅವಳ ಗಂಡ, ಕೈಯಲ್ಲಿ ಬೊಂಬೆ ಹಿಡಿದು ''ಇದರ ಕೈ ಸರಿಮಾಡಿಕೊಡಿ ಅಂಕಲ್'' ಎಂದ ಅವಳ ಮಗಳು, ಸುಮತಿ, ವಿವೇಕನ ಮುದ್ದು ಮುಖ ಅವನನ್ನು ಹಾಗೆ ಮಾಡದಂತೆ ತಡೆಯುತ್ತಿದ್ದವು. ಅವಳ ಮಗುವಿನ ಬೊಂಬೆಯ ಕೈ ಸರಿ ಮಾಡಿದವನು ಅವಳ ಮನಸ್ಸಿನ ಸಮಸ್ಥಿತಿಯನ್ನು ಹಾಳು ಮಾಡಲು ಸಾಧ್ಯವಿತ್ತೇ? ಆ ಆರೇಳು ತಿಂಗಳು ಮುರಳೀಧರ ತುಂಬ ಕಷ್ಟಪಟ್ಟ. ಪ್ರೀತಿ ಯಾವ ಎತ್ತರಕ್ಕೆ ಏರಿಸುತ್ತದೋ ಹಾಗೇ ವಿರಹ ಅಷ್ಟೇ ಆಳವಾದ ಪ್ರಪಾತಕ್ಕೆ ನೂಕುತ್ತದೆ. ಅವಳಲ್ಲಿ ಪ್ರೇಮ ಹುಟ್ಟಿದಾಗ ಇದ್ದ ಸಂಭ್ರಮದ ವಿರುದ್ಧ ಭಾವನೆ ಮನಸ್ಸಿಗೆ. ಬದುಕು ಭಾರ ಭಾರ ಏನೂ ಬೇಡವೆಂಬ ಭಾವನೆ. ಎಷ್ಟೋ ಸಲ ಸಾಯಬೇಕು ಅನ್ನಿಸಿತ್ತು. ಆದರೆ ಆಗಷ್ಟೇ ಅಪ್ಪಾ ಅನ್ನಲು ಕಲಿತಿದ್ದ ವಿವೇಕನ ಮುದ್ದು ಮಾತು, ತನ್ನ ಸೌಖ್ಯಕ್ಕಾಗಿ ಸದಾ ಮನೆಗೆಲಸ ಮಾಡುತ್ತಾ, ತನ್ನೊಬ್ಬನನ್ನು, ಮನೆ ಮಗುವನ್ನು ಬಿಟ್ಟರೆ ಬೇರೆ ಪ್ರಪಂಚವಿಲ್ಲ ಎಂಬಂತಿದ್ದ ಹೆಂಡತಿ... ಇವರ ಜವಾಬ್ದಾರಿ ಇಲ್ಲವೇ ತನಗೆ? ಹೇಗೆ ಸಾಯುವುದು? ಬೇಕಾದಾಗ ಸಾಯುವಂತಹ ಲಕ್ಷುರಿಯನ್ನ ಈ ಬದುಕಿನ ಪರಿಸ್ಥಿತಿಗಳು ಹಲವು ಸಲ ಕೊಡುವುದಿಲ್ಲ.

* * *

ಹೀಗೇ ಮುಂದುವರಿದಿದ್ದರೆ ಮುರಳೀಧರ ಹುಚ್ಚನಾಗುತ್ತಿದ್ದನೇನೋ. ಆದರೆ ತನ್ನ ಸಮಸ್ಯೆಯನ್ನು ಒಬ್ಬ ಮನಸ್ಸಿನ ಡಾಕ್ಟರ್ ಬಳಿ ಹೇಳಿಕೊಳ್ಳುವಷ್ಟು ವಿವೇಕ ಅವನಲ್ಲಿತ್ತು. ಇವನ ಕಥೆಯನ್ನು ತಾಳ್ಮೆಯಿಂದ ಕೇಳಿದ ಸಹಾನುಭೂತಿಯ ಕಣ್ಣುಗಳ ಡಾಕ್ಟರ್, ''ಮಿ. ಮುರಳೀಧರ್, ನಿಮ್ಮ ಅನುಭವವನ್ನು ಯಾಕೆ ಇಷ್ಟು ನೆಗೆಟಿವ್ ಆಗಿ ನೋಡ್ತೀರಿ? ಲುಕ್ ಅಟ್ ಇಟ್ ಪಾಸಿಟಿವ್‌ಲಿ. ಕಡೇಪಕ್ಷ ಪ್ರೀತಿಸೋದು ಅಂದರೆ ಏನು ಅಂತ ನಿಮಗೆ ಗೊತ್ತಾಯಲ್ಲ, ಎಷ್ಟೋ ಜನ ಈ ಅನುಭವ



ಆಗದೇನೇ ಸತ್ತುಹೋಗ್ತಾರೆ. ನಿಮ್ಮದು ತುಂಬ ಪ್ರೀತಿಸುವ ಹೃದಯ. ಇಟ್ ಈಸ್ ಗುಡ್. ಆದ್ರೆ ಆ ಪ್ರೀತಿಯನ್ನು ಒಬ್ಬರಿಗೆ ಯಾಕೆ ಸೀಮಿತಗೊಳಿಸ್ತೀರಿ? ಗೋ ಅಹೆಡ್. ನಿಮ್ಮ ಹೃದಯದ ಅಪಾರ ಪ್ರೀತೀನ ಲೋಕಕ್ಕೆ ಹಂಚಿಬಿಡಿ. ದ ವರ್ಲ್ಡ್ ವಿಲ್ ಬಿ ಎ ಬೆಟರ್ ಪ್ಲೇಸ್'' ಎಂದು ಮುಗುಳ್ನಕ್ಕರು.

* * *

ತನ್ನ ಅನುಭವವನ್ನು ಇತ್ಯಾತ್ಮಕವಾಗಿ ನೋಡಲು ಸಾಧ್ಯವೆಂಬ ಮಾತು ಮುರಳೀಧರನಿಗೆ ತುಸು ಸಮಾಧಾನ ಕೊಟ್ಟಿತು. ಬಹುಶಃ ಆ ಡಾಕ್ಟರು ಅವನಿಗೆ ಹೊಸ ನೋಟ ಕ್ರಮವೊಂದನ್ನು ಕಲಿಸಿದರು ಅನ್ನಿಸುತ್ತದೆ. ಲಾವಾರಸ ನಿಧಾನಕ್ಕೆ ತಣ್ಣಗಾಗುತ್ತ ಬಂತು. ಮೃದುಲಾ ಬಗೆಗಿನ ತನ್ನ ಭಾವನೆಗಳನ್ನು ಎಂದೂ ಅವಳ ಮುಂದೆ ಹೇಳದಿದ್ದರೂ, ಹಾಡಿನ ಕುರಿತು ಆಸಕ್ತಿ, ಅವಳಿಗೆ ತಲೆನೋವು ಬಂದಾಗ ಅವಳ ಟೇಬಲ್ ಮೇಲೆ ವಿಕ್ಸ್ ಡಬ್ಬಿಯನ್ನಿಡುವುದು, ಅವಳ ಮಾತುಗಳನ್ನು ತಾಳ್ಮೆಯಿಂದ ಕೇಳಿಸಿಕೊಂಡು ಅಗತ್ಯ ಸಲಹೆ ಕೊಡುವುದು ಇಂತಹ ಕ್ರಿಯೆಗಳನ್ನು ಮುರಳೀಧರ ಮುಂದುವರಿಸಿದ. ಒಂದೇ ವ್ಯತ್ಯಾಸವೆಂದರೆ ಅವನು ಮೃದುಲಾಳನ್ನು ಮಾತ್ರವಲ್ಲದೆ ತನ್ನ ಸಂಪರ್ಕಕ್ಕೆ ಬಂದ ಎಲ್ಲರನ್ನೂ ಮೃದುವಾಗಿ ನಡೆಸಿಕೊಳ್ಳಲಾರಂಭಿಸಿದ. ಅವನೊಳಗಿನ ಅಮಿತ ಪ್ರೀತಿಯನ್ನು ಇನ್ನೇನು ಮಾಡಬೇಕಿತ್ತು? ತನ್ನ ಜೀವನದೃಷ್ಟಿಗೆ, ಆತ್ಮಕ್ಕೆ, ಅಂತರಂಗದ ಮಿಡಿತಗಳಿಗೆ ಚಿಮುಕಿಸಿಕೊಳ್ಳಲೇಬೇಕಿತ್ತು. ಪ್ರೀತಿಯ ವ್ಯಾಖ್ಯೆಯನ್ನು ಹಿಗ್ಗಿಸಿಕೊಳ್ಳದೆ ವಿಧಿಯಿರಲಿಲ್ಲ ಅವನಿಗೆ.

* * *

ಮುರಳೀಧರ ಹೇಳಿದ ಕಥೆ ಮುಗಿದಾಗ ವಿವೇಕನ ಕಣ್ಣಂಚಲ್ಲಿ ನೀರಿತ್ತು.

ಒಮ್ಮೆ ನಿಟ್ಟುಸಿರಿಟ್ಟ ಮುರಳೀಧರ ಹೇಳಿದರು, ''ವಿವೇಕ ನಂಗೆ ಅರ್ಥ ಆಗುತ್ತೆ. ಪ್ರೇಮಭಂಗದ ಗಾಯಗಳು ತುಂಬ ಆಳವಾಗಿರುತ್ತವೆ. ಕಾಲ ಕೂಡ ಅವನ್ನು ಪೂರ್ತಿ ವಾಸಿ ಮಾಡಲಾರದು. ಆದರೆ ಜೀವನ ಎಲ್ಲೂ ನಿಂತುಬಿಡುವುದಿಲ್ಲವಲ್ಲ. ವಿ ಮಸ್ಟ್ ಮೂವ್ ಆನ್. ಮರೀ, ನನ್ ಕಥೆ ಕೇಳಿಯಾದ್ರೂ ಈ ಆತ್ಮಹತ್ಯೆಯ ವಿಚಾರವನ್ನ ಮನಸ್ಸನಿಂದ ತೆಗೆದುಹಾಕ್ತೀಯಾ?'' – ಕಣ್ಣಿನಲ್ಲಿ ನೀರು ತುಂಬಿಕೊಂಡು ಮಗನನ್ನು ತಂದೆ ಕೇಳಿದ ಪ್ರಶ್ನೆ. ಅವರು 'ಮರೀ' ಅನ್ನುವುದು ತುಂಬ ಅಪರೂಪದ ಆಪ್ತಗಳಿಗೆಗಳಲ್ಲಿ.

''ಸಾಯುವ ಯೋಚನೆ ಮಾಡಬೇಡ ಎಂದು ತಂದೆಯಾಗಿ ದೂರ ನಿಂತು ಹೇಳುತ್ತಿಲ್ಲ. ಪ್ರೇಮದಲ್ಲಿ ಒಮ್ಮೆ ಬಿದ್ದು ನೊಂದ ಗೆಳೆಯನಾಗಿ ಹತ್ತಿರ ಕುಳಿತು ಹೇಳುತ್ತಿದ್ದೇನೆ. ಈ ಕತ್ತಲ ಕಡಲನ್ನು ದಾಟ್ತೀಯಲ್ಲ ಮಗನೆ? ಬದುಕು ಕತ್ತಲನ್ನ ಕೊಟ್ಟಾಗ ಜೊತೆಗೆ ಹಚ್ಚಿಕೊಳ್ಳಲು ದೀಪಗಳನ್ನೂ ಕೊಟ್ಟಿರುತ್ತೆ. ಆ ದೀಪಗಳನ್ನ ಹುಡುಕಿಕೊಳ್ತೀಯಲ್ಲ?''

ತಲೆಯಾಡಿಸಿದ ವಿವೇಕ. ಸಾಯಹೊರಟವರನ್ನು ಜೀವನ್ಮುಖಿಯಾಗಿಸುವ ಶಕ್ತಿ ಕಥೆಗಳಿಗಿರುತ್ತದೆಯೇ?

**ಡಾ|| ಎಲ್. ಜಿ. ಮೀರಾ**
ನಂ. ೧೪೯, ೭ನೇ ಕ್ರಾಸ್, ೫ನೇ ಮುಖ್ಯರಸ್ತೆ, ವಿಜಯನಗರ ೨ನೇ ಫೇಸ್
ಹಂಪಿನಗರ, ಬೆಂಗಳೂರು - ೫೬೦ ೦೪೦



# ಆತ್ಮಹತ್ಯೆಗೆ ಅಂತ್ಯವೆಂದು ?

**ಹೆ**ಚ್ಚು ಸಂಖ್ಯೆಯ ಜನರ ಆತ್ಮಹತ್ಯೆಯು ಪ್ರಪಂಚದಾದ್ಯಂತ ಜ್ವಲಂತ ಸಮಸ್ಯೆಯಾಗಿ ಹೊರಹೊಮ್ಮುತ್ತಿದೆ. ಸಮಾಜದ ಮೇಲೆ ದುಷ್ಪರಿಣಾಮಗಳನ್ನು ಬೀರುತ್ತಿದೆ.

ಇತ್ತೀಚಿನ ವರದಿಯ ಪ್ರಕಾರ ವಿಶ್ವದಲ್ಲಿನ ಆತ್ಮಹತ್ಯೆಗಳ ಗಣನೆಯಲ್ಲಿ ದಕ್ಷಿಣ ಭಾರತ ಮುಂಚೂಣಿಯಲ್ಲಿದ್ದು, ಅದರಲ್ಲೂ ಬೆಂಗಳೂರು ನಗರ ಭಾರತದಲ್ಲಿ ಆತ್ಮಹತ್ಯೆಗಳ ರಾಜಧಾನಿಯಾಗಿದೆ ! ಆತ್ಮಹತ್ಯೆಯು ವಿಶ್ವದ ಶೇಕಡ ೧೧ರಷ್ಟು ಸಾವುಗಳಿಗೆ ಕಾರಣವಾಗಿದೆ. ಪ್ರತಿ ಹತ್ತು ನಿಮಿಷಕ್ಕೆ ಒಬ್ಬ ವ್ಯಕ್ತಿ ಆತ್ಮಹತ್ಯೆಗೊಳಗಾಗುತ್ತಿದ್ದಾನೆ. ಪ್ರತಿ ನಿಮಿಷ ೨೫ ಮಂದಿ ಆತ್ಮಹತ್ಯೆಗೆ ಪ್ರಯತ್ನಿಸುತ್ತಿದ್ದಾರೆ. ಆತ್ಮಹತ್ಯೆಗೆ ಒಳಗಾಗುವವರಲ್ಲಿ ಶೇಕಡ ೬೫ರಷ್ಟು ಮಂದಿ ೪೦ ವರ್ಷ ವಯಸ್ಸಿಗಿಂತ ಕಿರಿಯರು. ಆತ್ಮಹತ್ಯೆಗೆ ಅನೇಕ ಕಾರಣಗಳಿರುತ್ತವೆ. ಆತ್ಮಹತ್ಯೆಗೆ ಒಳಗಾಗುವವರಲ್ಲಿ ಬದುಕಿನಲ್ಲಿ ನಿರಾಸೆಗೊಂಡವರೇ ಹೆಚ್ಚು ಮಂದಿ. ದೈಹಿಕ ಅನಾರೋಗ್ಯ, ದೀರ್ಘಕಾಲದ ಕಾಯಿಲೆಗಳು, ಉದಾಹರಣೆಗೆ, ಮೂರ್ಛೆರೋಗ, ಕ್ಯಾನ್ಸರ್‌ನಂತಹ ಕಾಯಿಲೆಗಳು ಆತ್ಮಹತ್ಯೆಯ ಮೊರೆಹೋಗಲು ಪ್ರೇರೇಪಿಸುತ್ತವೆ. ಕೌಟುಂಬಿಕ ಸಮಸ್ಯೆ, ವಿದ್ಯಾಭ್ಯಾಸದಲ್ಲಿನ ತೊಂದರೆ, ಆರ್ಥಿಕ ಸಮಸ್ಯೆ, ಸಾಲದ ಬಾಧೆ, ಪ್ರೀತಿಯಿಂದ ವಂಚನೆ, ಅತಿಯಾದ ಅಭಿಮಾನ, ಮಾನಸಿಕ ದುರ್ಬಲತೆಯಂತಹ ಸಮಸ್ಯೆಗಳು ಮಾತ್ರ ಕಾರಣವಲ್ಲ. ಇತ್ತೀಚೆಗೆ ಆಂಧ್ರಪ್ರದೇಶದಲ್ಲಿ ಕಾಣಿಸಿಕೊಂಡಂತೆ ತಮ್ಮ ಹೋರಾಟಕ್ಕಾಗಿ ಅಥವಾ ಬೇಡಿಕೆ ಈಡೇರಿಸಿಕೊಳ್ಳಲು ಆತ್ಮಹತ್ಯೆಗೊಳಗಾಗುವುದು ಅಧಿಕವಾಗಿ ಕಂಡುಬರುತ್ತಿದೆ. ಆಶ್ಚರ್ಯವೆಂದರೆ ಸಂಬಂಧಿಕರಲ್ಲಿ ಆತ್ಮಹತ್ಯೆಗೆ ಶರಣಾದವರು ಇದ್ದಲ್ಲಿ, ಇತರೆ ಸದಸ್ಯರು ಆತ್ಮಹತ್ಯೆಗೊಳಗಾಗುವ ಸಾಧ್ಯತೆ ಹೆಚ್ಚು. ಇದು ಅನುವಂಶೀಯ ಕಾರಣಗಳನ್ನು ಸೂಚಿಸುತ್ತದೆ.

ಪುರುಷರಿಗಿಂತ ೨ - ೩ ಪಟ್ಟು ಹೆಚ್ಚು ಮಹಿಳೆಯರು ಆತ್ಮಹತ್ಯೆಗೆ ಪ್ರಯತ್ನಿಸಿದರೆ, ಸಾವನ್ನಪ್ಪುವುದರಲ್ಲಿ ಪುರುಷರದೇ ಮೇಲುಗೈ. ಸಾಮಾನ್ಯವಾಗಿ ಆತ್ಮಹತ್ಯೆ ಮಾಡಿಕೊಳ್ಳುವವರು ತಮಗೆ ಲಭ್ಯವಿರುವ ವಿಧಾನಗಳನ್ನು ಬಳಸುತ್ತಾರೆ. ಮಹಿಳೆಯರು ವಿಷ ಕುಡಿಯುವುದು, ನಿದ್ರೆ ಮಾತ್ರೆ ನುಂಗುವುದು, ನೇಣು ಹಾಕಿಕೊಳ್ಳುವುದು, ಬಾವಿಗೆ ಹಾರುವುದು, ಸುಟ್ಟುಕೊಳ್ಳುವುದು ಇನ್ನೂ ಮುಂತಾದ ವಿಧಾನಗಳನ್ನು ಬಳಸಿದರೆ, ಪುರುಷರು ಅನೇಕ ಕಠೋರ ವಿಧಾನಗಳನ್ನು ಬಳಸುತ್ತಾರೆ. ಆತ್ಮಹತ್ಯೆಯ ಛಾಯೆ ಒಬ್ಬಂಟಿಗರಲ್ಲಿ, ವಿಚ್ಛೇದಿತರಲ್ಲಿ, ವಿಧವೆಯರಲ್ಲಿ, ನಿರುದ್ಯೋಗಿಗಳಲ್ಲಿ, ನಿರಾಶ್ರಿತರಲ್ಲಿ – ಅಲ್ಲದೆ ಮಾನಸಿಕವಾಗಿ ಖಿನ್ನತೆಗೆ ಒಳಪಟ್ಟವರಲ್ಲಿ ಹೇರಳವಾಗಿ ಕಂಡುಬರುತ್ತದೆ. ಎಂದೋ ಜರುಗಿದ ಆತ್ಮಹತ್ಯೆ ಪ್ರಯತ್ನಗಳು, ಮುಂದೊಮ್ಮೆ ಆತ್ಮಹತ್ಯೆ ಮಾಡಿಕೊಳ್ಳುವ ಸಾಧ್ಯತೆಯನ್ನು ಹೆಚ್ಚಿಸುತ್ತವೆ.




ಅನೇಕ ಜನರು ಆತ್ಮಹತ್ಯೆಯಿಂದ ಸಾವನ್ನು ಬಯಸುವುದಿಲ್ಲ. ಅವರು ಸಾವು [illegible] ದ್ವಂದ್ವ ಸ್ಥಿತಿಯಲ್ಲಿದ್ದು, ಆತ್ಮಹತ್ಯೆಯು ಅನ್ಯರಿಂದ ಸಹಾಯ [illegible] ಸಂಕೇತವಾಗಿರುತ್ತದೆ. ಮಾನಸಿಕ ಕಾಯಿಲೆಗೆ ಒಳಗಾದವರು ಆತ್ಮಹತ್ಯೆಗೆ ಹೆಚ್ಚು ಬಲಿಯಾಗುತ್ತಾರೆ. ಮಾನಸಿಕ ಕಾಯಿಲೆಗಳಾದ ಖಿನ್ನತೆ, ಮದ್ಯಪಾನ ವ್ಯಸನ, ಛಿದ್ರ ಮನಸ್ಕತೆ (ಸ್ಕಿಜೋಫ್ರೀನಿಯ), ಕಳವಳ, ಗೀಳುರೋಗಗಳಿಂದ ಬಳಲುವವರಲ್ಲಿ ಆತ್ಮಹತ್ಯೆ ಪ್ರಯತ್ನಗಳು ಹೆಚ್ಚಾಗಿರುತ್ತವೆ.

ಕೇವಲ ಮಾನಸಿಕ ರೋಗಿಗಳಲ್ಲದೆ ಜೀವನದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳದೆ ಮಾನಸಿಕ ವ್ಯಥೆಗೊಳಗಾಗಿ ಆತ್ಮಾಹುತಿ ಮಾಡಿಕೊಂಡವರು ಕೂಡ ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಉದಾಹರಣೆಗೆ, ಜಗತ್ತನ್ನೇ ಗೆಲ್ಲಲು ಹೊರಟ ಹಿಟ್ಲರ್, ಚಿತ್ರಪ್ರೇಮಿಗಳ ಮನದಲ್ಲಿ ರಾರಾಜಿಸಿದ ಹಿಂದಿ ನಟಿ ದಿವ್ಯಾ ಭಾರತಿ ಹಾಗೂ ಕನ್ನಡದ ಮಿನುಗುತಾರೆ ಕಲ್ಪನಾ ಆತ್ಮಹತ್ಯೆಯಿಂದ ಕೊನೆಗೊಂಡರು ಎಂಬುದು ಕುತೂಹಲಕರ. ಮನೋವೈದ್ಯಶಾಸ್ತ್ರದಲ್ಲಿ ಹೇಳಿರುವಂತೆ, ಆತ್ಮಹತ್ಯೆಗೊಳಪಡುವ ಶೇಕಡ ೯೦ರಷ್ಟು ಜನರು ಆ ಸ್ಥಿತಿ ತಲುಪುವ ಮುನ್ನ ಮಾನಸಿಕವಾಗಿ ನರಳಿರುತ್ತಾರೆ.

ಆತ್ಮಹತ್ಯೆಯು ಮನಸ್ಸಿಗೆ ಸಂಬಂಧಪಟ್ಟದ್ದಾಗಿದ್ದು, ದೈಹಿಕ ಸಮಸ್ಯೆಯಂತೆ ಇದನ್ನೂ ಕೂಡ ಬಗೆಹರಿಸಿ ತಡೆಗಟ್ಟಬಹುದಾಗಿದೆ. ಮನಸ್ಸು ಕೂಡ ದೇಹದಂತೆ ದಣಿಯುತ್ತದೆ. ಅದನ್ನು ಮರೆತು, ಜನರು ಕೇವಲ ದೇಹದ ಕಾಯಿಲೆಗೆ ಚಿಕಿತ್ಸೆ ಪಡೆದು ಮನಸ್ಸನ್ನು ಕಡೆಗಣಿಸುತ್ತಾರೆ. ಇದರಿಂದ ಮನಸ್ಸಿನ ದುರ್ಬಲತೆ ಹೆಚ್ಚಾಗಿ, ಮಾನಸಿಕ ವ್ಯಥೆ ಉಂಟಾಗುತ್ತದೆ. ಈ ವ್ಯಥೆಯು ಆತ್ಮಹತ್ಯೆಗೆ ಪ್ರೇರಣೆ ನೀಡುತ್ತದೆ. ಆದ್ದರಿಂದ ಸರಿಯಾದ ಸಮಯದಲ್ಲಿ ಮನಸ್ಸಿನ ಕಾಯಿಲೆಗೆ ವೈದ್ಯರನ್ನು ಕಂಡಲ್ಲಿ, ಆತ್ಮಹತ್ಯೆಯ ಜ್ವಾಲೆಯನ್ನು ತಣಿಸಬಹುದು. ಅಲ್ಲದೆ, ಆತ್ಮಹತ್ಯೆಗೆ ಪ್ರಯತ್ನಿಸಿದ ವ್ಯಕ್ತಿಯು ಚೇತರಿಸಿಕೊಂಡು ಸಾಮಾಜಿಕ ಜೀವನಕ್ಕೆ ಹೊಂದಿಕೊಳ್ಳುವಂತೆ, ಅವರ ಆಪ್ತರು, ಸ್ನೇಹಿತರು ಹಾಗೂ ಸುತ್ತಮುತ್ತಲಿನವರು ಸಹಕಾರ ನೀಡಿದಲ್ಲಿ ಆತ್ಮಹತ್ಯೆ ಹಿಡುಗಿನಿಂದ ವ್ಯಕ್ತಿಯನ್ನು ಮುಕ್ತವಾಗಿಸಬಹುದು.

ಆತ್ಮಹತ್ಯೆಯನ್ನು ತಡೆಗಟ್ಟುವಲ್ಲಿ ವೈದ್ಯರ ಪಾತ್ರ ಮುಖ್ಯವಾಗುತ್ತದೆ. ಆತ್ಮಹತ್ಯೆಯ ಆಪತ್ತಿನಲ್ಲಿರುವ ಜನರನ್ನು ಗುರುತಿಸಬಹುದು ಹಾಗೂ ಇಂತಹ ವ್ಯಕ್ತಿಯೇ ಆತ್ಮಹತ್ಯೆಗೆ ಒಳಗಾಗಬಹುದೆಂದು ಊಹಿಸಲೂ ಬಹುದು. ಸಾಮಾನ್ಯವಾಗಿ ಆತ್ಮಹತ್ಯೆಗೆ ಬಲಿಯಾಗುವವರು ೧೫-೩೫ ವರ್ಷದವರಾಗಿರುತ್ತಾರೆ. ಇತ್ತೀಚಿನ ಸಮೀಕ್ಷೆಯಂತೆ ಅತಿ ಕಿರಿಯ ವಯಸ್ಸು, ಅಂದರೆ ೧೦ ವರ್ಷದ ಮಕ್ಕಳೂ ಆತ್ಮಹತ್ಯೆಗೆ ಮೊರೆಹೋಗುವುದು ಕಂಡುಬಂದಿರುವುದು ದುರ್ದೈವ. ಅಲ್ಲದೆ,

ಡಾ|| ಬಿ. ಎನ್. ಹನುಮಂತಪ್ಪ

ಡಾ|| ಎಂ. ಕಿಶೋರ್

ಆತ್ಮಹತ್ಯೆಗೆ ಒಳಪಡುವ ವ್ಯಕ್ತಿಯು ಏನೂ ಅರಿಯದ ಮಕ್ಕಳನ್ನು ಅಥವಾ ತನ್ನ ಕುಟುಂಬವನ್ನು ಆತ್ಮಹತ್ಯೆಗೆ ಪ್ರೇರೇಪಿಸಿ ಸ್ವಇಚ್ಛೆಯಿಂದ ಅಥವಾ ಬಲವಂತವಾಗಿ ಯಾದರೂ ತಮ್ಮೊಂದಿಗೆ ಸಾಯುವಂತೆ ಮಾಡುತ್ತಿರುವುದು ಆತಂಕ ಮೂಡಿಸುತ್ತಿದೆ !

ಆತ್ಮಹತ್ಯೆ ಮಾಡಿಕೊಳ್ಳುವವರು ತಮ್ಮ ಇಂಗಿತವನ್ನು ಮಾತು ಮತ್ತು ನಡುವಳಿಕೆಯಲ್ಲಿ ಪ್ರತಿಬಿಂಬಿಸುತ್ತಾರೆ. ಅವರಲ್ಲಿ, ಪದೇ ಪದೇ ಸಾವಿನ ಬಗ್ಗೆ ಮಾತನಾಡುವುದು, ಆತ್ಮಹತ್ಯೆಯ ಆಲೋಚನೆ ಮಾಡುವುದು, ಆತ್ಮಹತ್ಯಾ ಪತ್ರ ಬರೆಯುವುದು, ತಮಗಿರುವ ಕೀಳರಿಮೆ ತೋರಿಸುವುದು, ತಮ್ಮ ಸಂಗಾತಿ ಮತ್ತು ಮಕ್ಕಳ ಜವಾಬ್ದಾರಿಯನ್ನು ಬೇರೆಯವರಿಗೆ ಒಪ್ಪಿಸುವುದು, ತಮ್ಮ ಆಸ್ತಿಯ ವಿವರಗಳನ್ನು ಸಂಗಾತಿಗೆ ಹೇಳುವುದು, ತಮ್ಮ ಪರಿವಾರಕ್ಕಾಗಿ ಜೀವವಿಮೆ ಮಾಡಿಸುವುದು ಹಾಗೂ ಇನ್ನೂ ಅನೇಕ ಗುಣಲಕ್ಷಣಗಳು ಕಂಡುಬರುತ್ತವೆ. ಅಲ್ಲದೆ, ಕೆಲವರು ತಮ್ಮ ಸಾವಿನ ಮುಂಚೆ ಅತೀ ಆನಂದದಿಂದಿರುತ್ತಾರೆ ! ಇಂತಹ ಗುಣಲಕ್ಷಣಗಳಿರುವ ವ್ಯಕ್ತಿಯು ಕಂಡುಬಂದಲ್ಲಿ ಸಮಯ ವ್ಯರ್ಥಮಾಡದೆ ಮಾನಸಿಕ ವೈದ್ಯರನ್ನು ಕಾಣಬೇಕು ಹಾಗೂ ಅವರಿಗೆ ಮಾನಸಿಕ ಬೆಂಬಲ ನೀಡಬೇಕು. ಅವರ ನಡವಳಿಕೆ ಮತ್ತು ಚಲನವಲನಗಳನ್ನು ಗಮನಿಸುತ್ತಿರಬೇಕು. ಆ ವ್ಯಕ್ತಿಯ ಆತ್ಮಹತ್ಯೆಯ ನಡವಳಿಕೆ ನಿಯಂತ್ರಣಕ್ಕೆ ಬರದಿದ್ದರೆ ಆಸ್ಪತ್ರೆಗೆ ಸೇರಿಸುವುದು ಉತ್ತಮ.

ಆಸ್ಪತ್ರೆಯಲ್ಲಿ ವೈದ್ಯರು ಅವರೊಂದಿಗೆ ಆಪ್ತಸಮಾಲೋಚನೆ ನಡೆಸಿ ಆತ್ಮಹತ್ಯೆಗೆ ಕಾರಣ ಮತ್ತು ಅವರ ಮಾನಸಿಕ ಸ್ಥಿತಿಯನ್ನು ತಿಳಿಯುತ್ತಾರೆ. ಅವರ ಸಮಸ್ಯೆಯನ್ನು ಬಗೆಹರಿಸಿ ಕೊಳ್ಳುವ ರೀತಿಯನ್ನು ವಿವರಿಸುವುದಲ್ಲದೆ, ಮಾನಸಿಕ ಬೆಂಬಲದೊಂದಿಗೆ ಕಾಯಿಲೆಗೆ ಚಿಕಿತ್ಸೆ ನೀಡುತ್ತಾರೆ. ಅವರಲ್ಲಿ ಖಿನ್ನತೆ ಕಂಡುಬಂದಲ್ಲಿ ಅದನ್ನು ದೂರ ಮಾಡಲು ಆಪ್ತ ಸಮಾಲೋಚನೆಯೊಂದಿಗೆ ಖಿನ್ನತೆ ನಿವಾರಣ ಔಷಧಿಗಳ ಅಗತ್ಯವಿರುತ್ತದೆ. ಈ ಔಷಧಿಗಳು ಆತ್ಮಹತ್ಯೆ ಪ್ರಯತ್ನಗಳನ್ನು ತಡೆಯುವಲ್ಲಿ ಮುಖ್ಯ ಪಾತ್ರವಹಿಸುತ್ತವೆ. ವಿಶ್ವದಾದ್ಯಂತ ಈ ಔಷಧಿಗಳ ಬಳಕೆಯಿಂದ ಆತ್ಮಹತ್ಯೆಗಳ ಸಂಖ್ಯೆ ಇಳಿಮುಖವಾಗಿರುವುದು ಗಮನಾರ್ಹ. ಈ ಔಷಧಿಗಳು ಕೆಲಸ ಮಾಡಲು ಕನಿಷ್ಠ ೨ ವಾರಗಳ ಅವಧಿ ಬೇಕಾಗುತ್ತದೆ. ಅಲ್ಲಿಯವರೆಗೆ ಆಪ್ತಸಮಾಲೋಚನೆಯೊಂದಿಗೆ ವ್ಯಕ್ತಿಯನ್ನು ಗಮನಿಸುತ್ತಿರುವುದು ಮುಖ್ಯವಾಗುತ್ತದೆ.

ಆತ್ಮಹತ್ಯಾ ನಡವಳಿಕೆಯನ್ನು ನಿಯಂತ್ರಿಸಲು ವಿಫಲವಾದಲ್ಲಿ ಹಾಗೂ ಆತ್ಮಹತ್ಯೆಗೆ ಪ್ರೇರಣೆ ಕಡಿಮೆಯಾಗದಿದ್ದಾಗ ೨೪ ಗಂಟೆಗಳ ಕಾಲ ಮೇಲ್ವಿಚಾರಣೆಯ ಜೊತೆಗೆ ನುರಿತ ತಜ್ಞರಿಂದ ವ್ಯಕ್ತಿಯನ್ನು ಕೆಲವು ನಿಮಿಷಗಳ ಕಾಲ ಪ್ರಜ್ಞಾಹೀನರನ್ನಾಗಿ ಮಾಡಿ ಮೂರ್ಛೆ ಬರುವಂತೆ ಪ್ರಚೋದಿಸಲಾಗುತ್ತದೆ. ಇದರಿಂದ ಮೆದುಳಿನಲ್ಲಿ ಅಗತ್ಯ ರಾಸಾಯನಿಕಗಳಲ್ಲಿ ಬದಲಾವಣೆಗಳಾಗಿ ಆತ್ಮಹತ್ಯಾ ಪ್ರೇರಣೆಯು ಕ್ಷೀಣಿಸುತ್ತದೆ. ಈ ಚಿಕಿತ್ಸೆಯನ್ನು ಸುಧಾರಿತ ವಿದ್ಯುದ್ವಿಕ ಚಿಕಿತ್ಸೆ (Modified Electroconvulsive Therapy-ECT) ಎಂದು ಕರೆಯಲಾಗುತ್ತದೆ. ಜನಸಾಮಾನ್ಯರು ಇದನ್ನೇ 'ಶಾಕ್' ಚಿಕಿತ್ಸೆಯೆಂದು ಕರೆಯುತ್ತಾರೆ. ವಿಷಾದವೆಂದರೆ, ಇದರ ಬಗ್ಗೆ ಸಾಕಷ್ಟು ಅಪನಂಬಿಕೆಗಳಿವೆ. ಈ ಚಿಕಿತ್ಸೆಯು ಪ್ರಪಂಚದಾದ್ಯಂತ ಅತಿಯಾದ ಖಿನ್ನತೆಯ ಆತ್ಮಹತ್ಯೆಯನ್ನು ತಡೆಯುವಲ್ಲಿ ಯಶಸ್ವಿಯಾಗಿರುವ ಏಕಮಾತ್ರ ವಿಧಾನವಾಗಿದೆ !

ಆತ್ಯಹತ್ಯೆಗೆ ವಿಭಿನ್ನ ಕಾರಣಗಳಿದ್ದರೂ ಆಪತ್ತಿನಲ್ಲಿರುವ ಜನರನ್ನು ಬಹಳಷ್ಟು ಮಟ್ಟಿಗೆ ಗುರುತಿಸಬಹುದಾಗಿದೆ. ಅದನ್ನು ಪತ್ತೆಹಚ್ಚುವಲ್ಲಿ ಆಪ್ತರ ಪಾತ್ರ ಬಹುಮುಖ್ಯವಾಗುತ್ತದೆ. ಆತ್ಮಹತ್ಯೆಯನ್ನು ಅಂತ್ಯಗೊಳಿಸುವಲ್ಲಿ ಅದರ ಬಗ್ಗೆ ಅರಿವು ಮೂಡಿಸುವುದು ಅತ್ಯಗತ್ಯ.


**ಡಾ|| ಬಿ. ಎನ್. ಹನುಮಂತಪ್ಪ**

**ಡಾ|| ಎಂ. ಕಿಶೋರ್**

ಮಾನಸಿಕ ಆರೋಗ್ಯ ವಿಭಾಗ, ಆದಿಚುಂಚನಗಿರಿ ವೈದ್ಯಕೀಯ ಮಹಾವಿದ್ಯಾಲಯ

ಬಿ.ಜಿ.ನಗರ, ಬೆಂಗಳೂರು - ೫೭೦ ೧೧೯


# ಸಾವಿರದ ಹೆಣಗಳು



ಕಾಲ ಕಾಲಕ್ಕೆ ಸುರಿಯಬೇಕಾದ ಮಳೆ ಮೋಡಗಳ ಬಂಜೆತನದಿಂದ ಸುರಿಯದೇ ಹೋಯಿತು. ಹಾಗೆ ಬಿತ್ತಿದ್ದನ್ನು ಬೆಳೆಯಬೇಕಾದ ಭೂಮಿ ಹುಲ್ಲು ಮೊಳಕೆಯನ್ನೂ ಹುಟ್ಟಿಸದಾಯಿತು. ಪಾಪದ ರೈತರು ಸಾಲ ತೀರಿಸಲಾರದೆ ಹೆಂಡತಿ ಮಕ್ಕಳ ಜೊತೆ ಕುತ್ತಿಗೆಯ ಸುತ್ತ ಕೈಗೆ ಸಿಕ್ಕ ಲೋಳೆಸರದ ಹಗ್ಗ ಬಿಗಿದುಕೊಂಡರು. ಹೊಲದೊಳಗಿನ ಜಾಲಿ ಮರಕೋ, ಬೇವಿನ ಮರಕೋ ತಣ್ಣಗೆ ಜೋತುಬಿದ್ದರು.

ಸಾಲ ಕೊಟ್ಟ ಲೇವಾದೇವಿಯವರು, ಬ್ಯಾಂಕಿನವರು ತಾವು ಕೊಟ್ಟ ಸಾಲಕ್ಕೆ ಪ್ರತಿಯಾಗಿ, ಬದುಕುಳಿದಿದ್ದ ದನಕರು, ಬಂಜರು ಭೂಮಿಯ ಜೊತೆ ಕೊಳೆತ ಹೆಣಗಳನ್ನೂ ತಾ ಮುಂದು ನಾ ಮುಂದು ಎಂದು ಜಪ್ತಿ ಮಾಡಿದರು. ಏರುತ್ತಿರುವ ಬೆಲೆಗೆ ರೈತರೇ ಕಾರಣವೆಂದು ಮಾಂಸವಿರದ ಹೆಣಗಳ ಮೇಲೆ ಪೊಲೀಸರು ಲಾಠಿ ಚಾರ್ಜ್ ಮಾಡಿದರು. ಕಣ್ಣಲ್ಲಿ ಜೀವ ಹಿಡಿದುಕೊಂಡಿದ್ದ ಮುದುಕ ಮುದುಕಿಯರ ಮೇಲೆ ಕ್ರಿಮಿನಲ್ ಮೊಕದ್ದಮೆ ಹೂಡಿ ಜೈಲಿನಲ್ಲಿಟ್ಟರು. ನ್ಯಾಯಾಲಯಗಳು ಪ್ರತಿವಾದಿಗಳಿಲ್ಲದೆ ಅವರಿಗೆ ಜೀವಾವಧಿ ಶಿಕ್ಷೆ ಕಾಯಂಗೊಳಿಸಿದವು.

ರೈತ ಸಂಘಟನೆಗಳು, ಸಂಘ ಸಂಸ್ಥೆಗಳು ಒಂದು ದಿನದ ಸಾಂಕೇತಿಕ ಮುಷ್ಕರ ನಡೆಸಿದವು. ಬುದ್ಧಿಜೀವಿಗಳೆನಿಸಿಕೊಂಡವರು, ಸಾಹಿತಿಗಳು ಪತ್ರಿಕಾ ಹೇಳಿಕೆ ಕೊಟ್ಟು ಮೌನತಾಳಿದರು. ಇತ್ತ ರಾಜಕೀಯ ಪಕ್ಷಗಳು ಪರಸ್ಪರ ಕೆಸರೆರಚಿಕೊಳ್ಳುವ ನಾಟಕ ಮಾಡಿ ಎಂದಿನಂತೆ ಉನ್ನತ ಮಟ್ಟದ ತನಿಖಾ ತಂಡವೊಂದನ್ನು ನೇಮಿಸಿ ಕೈ ತೊಳೆದುಕೊಂಡವು.

ಹೊಲದೊಳಗಿನ ಕಬ್ಬಕ್ಕಿ, ಗುಬ್ಬಿ, ಕಾಗೆಗಳು ಮೌನವಾಗಿ ಅತ್ತವು. ಅವು ಸತ್ತದ್ದು ಮಾತ್ರ ಯಾವ ಪತ್ರಿಕೆಯಲ್ಲಾಗಲಿ, ದೂರದರ್ಶನದ ಯಾವ ಚಾನಲ್ಲಿನಲ್ಲಾಗಲಿ ಒಂದು ಸಾಲಿನ ಸುದ್ದಿಯೂ ಆಗಲಿಲ್ಲ. ಇಂಥ ಸುದ್ದಿ ಅವುಗಳಿಗೆ ಸುದ್ದಿಯೇ ಅಲ್ಲವೆಂದು ಪ್ರತ್ಯೇಕವಾಗಿ ಯಾರೂ ಹೇಳಬೇಕಾಗಿಲ್ಲ. ಇನ್ನು ಊರೊಳಗೆ ಸಭ್ಯರೆನಿಸಿಕೊಂಡ ಜನ ಏನಂದಾರು...?

ಊರ ಮುಂದಿನ ಹಳ್ಳದ ಪಾಚಿಗಟ್ಟಿದ ನೀರಲ್ಲಿ, ಎಮ್ಮೆಗಳು ಕಂಠಮಟ್ಟ ಮುಳುಗಿ ಕಣ್ಣು ಮುಚ್ಚಿಕೊಂಡರೆ, ಅವುಗಳ ಕನಸುಗಳಿಗೆ, ಮನೆಗಳಲ್ಲಿ ಧಾರಾವಾಹಿಗಳ ನೋಡುತ್ತ ಕೊಳೆತುಹೋಗುವ ಹೆಂಗಸರು, ಊರ ತುಂಬಾ ಅಂಡಲೆವ ಗಂಡಸರೇ ಬಂದುನಿಂತರೆ ಪಾಪದ ಜೀವಗಳು ಅವಾದರೂ ಏನುಮಾಡಬೇಕು ?

ರಣ ಬಿಸಿಲಲಿ ಹಾಳು ಸುರಿವ ಹೊಲಗಳ ಒಣಮರದ ಕೊಂಬೆಗಳಿಗೆ ಬರೀ ಹಗ್ಗಗಳು ಮಾತ್ರ ನೇತಾಡುತ್ತಿವೆ.


ವಿ. ಹರಿನಾಥ ಬಾಬು ಸಿರುಗುಪ್ಪ

ಉಪ ಖಜಾನಾಧಿಕಾರಿ, ಉಪ ಖಜಾನೆ, ಗಂಗಾವತಿ - ೫೮೩ ೨೨೭, ಕೊಪ್ಪಳ ಜಿಲ್ಲೆ

# ಕಾವ್ಯ ರಚನೆ – ಪಂಪನ ಒಂದು 'ಪರಿಕಲ್ಪನೆ'

೧೦ನೇ ಶತಮಾನದ ಪಂಪ ಸಂಸ್ಕೃತ ಕಾವ್ಯಗಳ ಕಥಾ ಪರಂಪರೆಗೆ ಮನಸೋತ ಕವಿ. ಸಂಸ್ಕೃತ ಭಾಷೆಗೆ ಜೋತುಬಿದ್ದವನಲ್ಲ, ಸಂಸ್ಕೃತ ಭಾಷೆಯನ್ನು ಅರಗಿಸಿಕೊಂಡು ಮೆಚ್ಚಿದ ಕವಿ. ಆರಾಧಿಸಿದ ಕವಿಯಲ್ಲ, ಅವನು ಕನ್ನಡದ ಪ್ರೀತಿಯ ಕವಿ ಹೇಗೋ ಹಾಗೆಯೇ ಕನ್ನಡವನ್ನು ಪ್ರೀತಿಸಿದ ಕವಿ. ಕನ್ನಡದಲ್ಲಿ ಮೂರು ಬಗೆಯ ಕವಿಗಳಿದ್ದಾರೆ. ಒಂದು : ಸಂಸ್ಕೃತ ಭಾಷೆಯನ್ನು ನೆಚ್ಚಿ ಕಾವ್ಯ ಬರೆದವರು. ಎರಡು : ಅಚ್ಚಗನ್ನಡದಲ್ಲಿಯೇ ಹಠದಿಂದ ಕಾವ್ಯ ಬರೆದವರು. ಮೂರು : ಸಂಸ್ಕೃತ ಮತ್ತು ಕನ್ನಡ ಬೆರೆಸಿ ಹದವರಿತು ಕಾವ್ಯ ರಚಿಸಿದವರು. ಪಂಪ ಮೂರನೆಯ ಬಗೆಯ ಕವಿ. ಸಂಸ್ಕೃತದ ಶಕ್ತಿ ಮತ್ತು ಕನ್ನಡದ ಸತ್ವ ಅರಿತು ಬರೆದ ಕವಿ. ಕಾವ್ಯ ರಚನೆಯ ಬಗ್ಗೆ ಆಳವಾಗಿ ಚಿಂತಿಸಿದ ಕವಿ. ಪಂಪನಲ್ಲಿಯೂ ಓದುಗನಿದ್ದಾನೆ. ಪಂಪ ಬರೀ ಹೇಳುವ ಕವಿಯಲ್ಲ, ಕೇಳುಗನೂ ಹೌದು. ಆ ಕಾಲದ ರಾಜರು, ಪಂಡಿತರು ಮೆಚ್ಚಿದ ಕವಿ ಪಂಪ. ಅವನು 'ಗುಣಾರ್ಣವ'ನಾಗಿದ್ದ, ಕಾವ್ಯರಚನೆಯ ಬಗ್ಗೆ ಖಚಿತ ಅಭಿಪ್ರಾಯ ಹೊಂದಿದ್ದ. ಕಾವ್ಯ ಎನ್ನುವುದು ಭಾಷೆಯ ಕಸುಬುಗಾರಿಕೆ. ಕಸುಬುಗಾರಿಕೆಗೆ ಪರಂಪರೆಯ ಜ್ಞಾನ, ವರ್ತಮಾನದ ಬೇಡಿಕೆ, ಭವಿಷ್ಯದ ಬಾಳಿಕೆಯ ಗುಣಗಳಿರುವಂತೆ ಕಾವ್ಯವೂ ಅನೇಕ ಗುಣಗಳನ್ನು ಹೊಂದಿರಬೇಕಾಗುತ್ತದೆ. ಹಾಗಾದಾಗ ಕಾವ್ಯ ಚರಿತ್ರೆಯು ಚರಿತ್ರೆಯಾಗಿ ಉಳಿಯುತ್ತದೆ. ಭಿನ್ನ ಓದಿಗೆ ತೆರೆದುಕೊಳ್ಳುತ್ತದೆ. ಪಂಪ ಕಾವ್ಯ ಹೇಗಿದ್ದರೆ ಚೆನ್ನ, ಹೇಗೆ ರಚಿಸಿದರೆ ಓದುಗನನ್ನು ತಲುಪುತ್ತದೆ ಎಂಬುದನ್ನು ಬಲ್ಲವನಾಗಿದ್ದ. ಕಾವ್ಯ ರಚನೆಯನ್ನು ಕುರಿತ ಅವನ ಪದ್ಯ ಹೀಗಿದೆ :

*ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್*
*ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯ ಬಂಧಮೊ*
*ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊರೆಯಿಂ ಬಳಲ್ದು ತುಂ*
*ಬಿಗಳನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆ ಪೋಲ್*

(ಪಂಪ ಭಾರತ, ಪ್ರಥಮಾಶ್ವಾಸ, ಪದ್ಯ ೮)

ಈ ಪದ್ಯದಲ್ಲಿ ಕಾವ್ಯ ಸೊಗಸಾಗಿರಲು ನಾಲ್ಕು ಅಂಶಗಳಿರಬೇಕೆಂದು ಪಂಪ ಹೇಳುತ್ತಾನೆ :

೧. ವಸ್ತುವಿನ ಆಲೋಚನೆ ಅಥವಾ ಚಿಂತನೆ ಹೊಸದಾಗಿರಬೇಕು. ಪಂಪ ಚಿಂತನೆಯ ಕವಿ. ಸಮಾಜ ಮತ್ತು ವ್ಯವಸ್ಥೆಯ ಬಗ್ಗೆ ಚಿಂತಿಸಿದ ಕವಿ. ವಿಕ್ರಮಾರ್ಜುನ ವಿಜಯ ಕೃತಿಯನ್ನು ಚಿಂತಿಸಿ ಬರೆದ ಕವಿ. ಈ ಕೃತಿಯ ಮೂಲಕ ಹೊಸ ಆಲೋಚನೆಗಳನ್ನು ಅಭಿವ್ಯಕ್ತಿಸಿದ ಕವಿ. ಕವಿಗೆ ಚಿಂತನೆ ಮತ್ತು ಆಲೋಚನೆ ಹೊಸದಾಗಿರಬೇಕು ಎನ್ನುತ್ತಾನೆ. ಇಲ್ಲಿ ಹೊಸತು ಎಂಬ ಪದವು ರೂಢಿಗತ ವ್ಯವಸ್ಥೆಯ ಚಿಂತನಾಕ್ರಮವನ್ನು ಉಲ್ಲಂಘಿಸುತ್ತದೆ. 'ಪ್ರಜ್ಞಾ ನವನವೋಲ್ಲೇಖ' ಮತ್ತು 'ಅಪೂರ್ವ ವಸ್ತು ನಿರ್ಮಾಣ'ವೇ ಕವಿಯ ಪ್ರತಿಭೆಯಾಗಿದೆ. ಪಂಪ ಹೇಳುವ 'ಹೊಸತು' ಎಂಬುದು ರೂಢಿಗತ ಮೌಲ್ಯಗಳನ್ನು ತಿರಸ್ಕರಿಸಿ ಹೊಸತನ್ನು ಕಟ್ಟುವುದಾಗಿದೆ. ಮಹಾಕಾವ್ಯದ ಪ್ರಧಾನ ಲಕ್ಷಣವಾದ ಅಷ್ಟಾದಶ ವರ್ಣನೆಗಳ ಚೌಕಟ್ಟಿನಲ್ಲಿಯೂ ವಸ್ತುವಿನ ನಿರ್ವಹಣೆಯಲ್ಲಿ ಹೊಸತನ್ನು ಸಾಧಿಸಿದವನು ಪಂಪ. ''ಮಾನವ ಕುಲಂ ತಾನೊಂದೆ ವಲಂ'' ಎನ್ನುವ ಮೂಲಕ ಹೊಸ ಆಲೋಚನೆಯನ್ನು ಬಿತ್ತರಿಸುತ್ತಾನೆ. ಸಾಮಾಜಿಕ ಮೌಲ್ಯಗಳನ್ನು ಕಟ್ಟಿಕೊಡುವ ಕವಿ ಹೊಸತನ್ನು ಹುಟ್ಟುಹಾಕುತ್ತಾನೆ. ಹಾಗೇ ಆ ಮೌಲ್ಯಗಳನ್ನು ವಿಮರ್ಶಿಸುತ್ತಾನೆ. ಪಂಪನ ಹೊಸ ಚಿಂತನೆಗಳು ಇರುವುದರಿಂದ 'ವಿಕ್ರಮಾರ್ಜುನ ವಿಜಯ' ಇಂದಿಗೂ ಹೊಸತಾಗಿದೆ. ಹೊಸ ಚಿಂತನೆಗೆ, ಚರ್ಚೆಗೆ ಅವಕಾಶ ಮಾಡಿಕೊಡುವ ಸತ್ವ ಈ ಕೃತಿಯಲ್ಲಿದೆ. ಕಾವ್ಯ ಎನ್ನುವುದು ಅಂತಿಮ ಸತ್ಯಗಳನ್ನು ದಾಖಲಿಸುವುದಿಲ್ಲ, ಅದು ಕವಿಯ ಕಾಣ್ಕೆಯ, ದರ್ಶನದ ಹೊಸ ದೃಷ್ಟಿಕೋನಗಳನ್ನು ಹೊಸ ಹೊಳಹುಗಳನ್ನು ಅಭಿವ್ಯಕ್ತಿಸುತ್ತದೆ. ಸೂರ್ಯೋದಯ ಕುರಿತ ಎಲ್ಲ ಕಾಲದ ಪದ್ಯಗಳು ಭಿನ್ನವಾಗಿರಲು ಹೊಸ ಆಲೋಚನೆ ಮತ್ತು ಚಿಂತನೆಯೇ ಕಾರಣ. ಹೊಸ ಆಲೋಚನೆಗಳಿಂದ ಕೂಡಿರುವುದೇ ಕಾವ್ಯ ಎಂಬುದು ಪಂಪನ ವ್ಯಾಖ್ಯಾನವಾಗಿದೆ. ಅಷ್ಟು ಮಾತ್ರವಲ್ಲ, ಮಾನವೀಯ ಕಾಳಜಿಗಳಿಂದ ಕೂಡಿದ, ಪ್ರಗತಿಪರ ಚಿಂತನೆಯಿಂದ ಕೂಡಿದ ಹೊಸ ಆಲೋಚನೆಯು ಕಾವ್ಯದಲ್ಲಿರಬೇಕು ಎಂಬುದು ಪಂಪನ ಗ್ರಹಿಕೆಯಾಗಿದೆ. ಭಾವ ಮತ್ತು ವಿಚಾರ ಸಂಯೋಜನೆಯೇ ಕಾವ್ಯ ಎಂಬ ಆಧುನಿಕ ಕನ್ನಡ ಕವಿಗಳ ಚಿಂತನೆಗೆ ಹತ್ತಿರವಾದುದು ಪಂಪನ ಕಾವ್ಯ ಪರಿಕಲ್ಪನೆ.

ವಾಗಾಡಂಬರ ಮತ್ತು ಶಬ್ದಾಡಂಬರ ಕಾವ್ಯದ ಹೊದಿಕೆಯಾದರೆ, ಕವಿಯ ಚಿಂತನೆ ಮತ್ತು ಆಲೋಚನೆ ಕಾವ್ಯದ ಆತ್ಮವಾಗಿರುತ್ತದೆ. ಕವಿಯು ಶಬ್ದಗಳ ಸೃಷ್ಟಿಕರ್ತ. ಆ ಶಬ್ದಗಳಿಗೆ ಜೀವ ಬರುವುದು ಆತನ ಚಿಂತನೆಯಿಂದ ಮತ್ತು ಲೋಕಗ್ರಹಿಕೆಯಿಂದ. ಕಾವ್ಯ ಎನ್ನುವುದು ಏಕಾಂತದ ಧ್ಯಾನದ ಅಭಿವ್ಯಕ್ತಿಯಲ್ಲ, ಲೋಕಗ್ರಹಿಕೆಯಿಂದ ಪಡೆದ ರಾಜಕೀಯಾರ್ಥಿಕ ಸಾಮಾಜಿಕ ಸಂಘರ್ಷದ ಅಭಿವ್ಯಕ್ತಿಯಾಗಿರುತ್ತದೆ. ಕವಿ ಸಾಮಾಜಿಕ ಸಂಘರ್ಷದ ಪರಿಸರದಲ್ಲಿ ಜಾತಿ ಮತ್ತು ವರ್ಗದ ಏಣಿಶ್ರೇಣಿಯಲ್ಲಿ ಮಧ್ಯಸ್ಥಗಾರನಾಗಿರುವುದಿಲ್ಲ, ಅವನು

**ಡಿ. ಅಂಜನಪ್ಪ**

**ಪಂಪನ ಕಾಲಕ್ಕೆ , ಆ ಕಾಲದ ಚಾರಿತ್ರಿಕ ಸಂದರ್ಭಕ್ಕೆ ಪಂಪನ ಕಾವ್ಯ ವಸ್ತುವಿನ ಚಿಂತನೆ ಹೊಸತಾದುದು. ಕತೆ ಹಳೆಯದಿರಬಹುದು, ಆದರೆ ಅದರ ಮೂಲಕ ಕಟ್ಟಿಕೊಡುವ ಜೀವನ ಚಿತ್ರಣ ಮತ್ತು ಚಿಂತನೆ ಎಂದೂ ಹಳತಾಗುವುದಿಲ್ಲ. ಅದು ಕಾಲಕಾಲದ ಚಾರಿತ್ರಿಕ ರಾಜಕೀಯ -ಆರ್ಥಿಕ ವಿಚಾರಗಳನ್ನು ಅರಗಿಸಿಕೊಳ್ಳುತ್ತಲೇ ಬೆಳೆಯುತ್ತದೆ. ಅದರ ಬೆಳವಣಿಗೆಯೇ ಹೊಸತನ್ನು ಸೂಚಿಸುತ್ತಿರುತ್ತದೆ. ಕಾವ್ಯದ ವಸ್ತು, ಚಿಂತನೆ ಹೊಸದಾಗಿರಬೇಕು ಎಂದು ಹೇಳುವ ಮೂಲಕ ಪಂಪ ಮುಂದಿನ ಕವಿಗಳಿಗೆ ಮಾರ್ಗದರ್ಶಕನಾಗುತ್ತಾನೆ. ವ್ಯವಸ್ಥೆಯ ಕುರಿತ ಕವಿಯ ದೃಷ್ಟಿಕೋನ ಹೊಸದಾಗಿರಬೇಕು ಎನ್ನುತ್ತಾನೆ. ಇದಕ್ಕೆ ಪ್ರಭುತ್ವದ ಹುಳುಕುಗಳನ್ನು ಕುರಿತು ರಾಜನ ಎದುರಿಗೇ ಕಾವ್ಯ ಕಟ್ಟಿ ವಾಚಿಸುವ ಅವನ ಎದೆಗಾರಿಕೆಯೇ ಸಾಕ್ಷಿ. ಹೊಸ ಚಿಂತನೆಯೆಂದರೆ ಜಾತಿ, ಧರ್ಮ, ವರ್ಗ, ಪ್ರಭುತ್ವದ ಶೋಷಣೆಯ ವೈಭವೀಕರಣವಲ್ಲ. ಅದರ ವಿರೋಧದ ನೆಲೆಯ, ವೈರುಧ್ಯಗಳ ಸಂಘರ್ಷದ, ಮಾನವೀಯ ಕಾಳಜಿಯ ಹೊಸ ಹೊಳಹುಗಳು ಎಂದರ್ಥ.**

ಸಾಮಾಜಿಕವಾಗಿ ಯಾವ ವರ್ಗ, ಜಾತಿಯವನೇ ಆಗಿರಲಿ. ಆದರೆ ಒಂದು ನಿರ್ದಿಷ್ಟ ಜಾತಿ, ವರ್ಗದ ಹಿತಾಸಕ್ತಿಯ ಒಲವುಳ್ಳವನಾಗಿರುತ್ತಾನೆ. ವಸ್ತುವಿನ ಆಲೋಚನೆ ಹೊಸತು ಆಗಿರಬೇಕೆಂಬುದರ ಮೂಲಕ ನೋವುಳ್ಳವರ ಧ್ವನಿಯಾಗಿರಬೇಕೆಂದು ಪಂಪ ಸೂಚಿಸುತ್ತಾನೆ. ಆದ್ದರಿಂದ ಪಂಪನ ಕರ್ಣ ಗೆಳೆತನದ ಸಂಕೇತಕ್ಕಾಗಿ ಮಾತ್ರ ಪ್ರಿಯನಾಗುವುದಿಲ್ಲ, ಶೋಷಕ ವ್ಯವಸ್ಥೆಯಲ್ಲಿ ಶೋಷಿತರ ಪ್ರತಿಭಟನೆಯ ಪ್ರತಿನಿಧೀಕರಣ ವಾಗಿದ್ದಾನೆ. ಒಂದೂವರೆ ಸಾವಿರ ವರ್ಷಗಳ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಬ್ದಾಡಂಬರದ ಕವಿಗಳೇ ಅಧಿಕವಾಗಿದ್ದಾರೆ. ಅವರಾರೂ ಕಾವ್ಯ ರಚನೆಯ ಚರಿತ್ರೆಯಲ್ಲಿ ಲೆಕ್ಕದಲ್ಲಿದ್ದಾರೆಯೇ ಹೊರತು ಪಂಪನಂತೆ ಕಾವ್ಯಾಸಕ್ತರ ಮನಸ್ಸಿನಲ್ಲಿಲ್ಲ. ವಸ್ತುವಿನ ಆಲೋಚನೆ ಹೊಸದಾಗಿರಬೇಕು ಎಂಬ ಪಂಪನ ತಿಳುವಳಿಕೆಯೇ ಜೀವಪರವಾದದ್ದು, ಧರ್ಮನಿಷ್ಠವಾದದ್ದು. ಅದಕ್ಕೆ ಪಂಪ ಚಿತ್ರಿಸಿದ ಕರ್ಣನ ಪಾತ್ರವೇ ಅತ್ಯುತ್ತಮ ಉದಾಹರಣೆ. ಹುಟ್ಟಿನ ಮೂಲ ಆಧಾರಿತವಾದ ಜಾತಿಯನ್ನು ನಿರಾಕರಿಸಿ ವೀರತ್ವದ ಮೌಲ್ಯವನ್ನು ಲೇಪಿಸಿದ ಪಂಪನ ಆಲೋಚನೆ ನೂತನವಾದುದು. ಇದನ್ನು ಸಾಮಾನ್ಯೀಕರಿಸಲು ಸಾಧ್ಯವಾಗದಿರಬಹುದು. ಇಂದು ಅದಕ್ಕೆ ಮಿತಿಯಿರಬಹುದು ಆದರೆ ಚಾರಿತ್ರಿಕವಾಗಿ ಅದು ಕ್ರಾಂತಿಕಾರಕವಾದುದು. ಕಾವ್ಯ ರಚನೆಯ ಚರಿತ್ರೆಯಲ್ಲಿ ಅನುಪಮವಾದುದು.

ಪಂಪನ ಕಾಲಕ್ಕೆ, ಆ ಕಾಲದ ಚಾರಿತ್ರಿಕ ಸಂದರ್ಭಕ್ಕೆ ಪಂಪನ ಕಾವ್ಯ ವಸ್ತುವಿನ ಚಿಂತನೆ ಹೊಸತಾದುದು. ಕತೆ ಹಳೆಯದಿರಬಹುದು, ಆದರೆ ಅದರ ಮೂಲಕ ಕಟ್ಟಿ ಕೊಡುವ ಜೀವನ ಚಿತ್ರಣ ಮತ್ತು ಚಿಂತನೆ ಎಂದೂ ಹಳತಾಗುವುದಿಲ್ಲ, ಅದು ಕಾಲಕಾಲದ ಚಾರಿತ್ರಿಕ ರಾಜಕೀಯ-ಆರ್ಥಿಕ ವಿಚಾರಗಳನ್ನು ಅರಗಿಸಿಕೊಳ್ಳುತ್ತಲೇ ಬೆಳೆಯುತ್ತದೆ. ಅದರ ಬೆಳವಣಿಗೆಯೇ ಹೊಸತನ್ನು ಸೂಚಿಸುತ್ತಿರುತ್ತದೆ. ಕಾವ್ಯದ ವಸ್ತು ಚಿಂತನೆ ಹೊಸದಾಗಿರ ಬೇಕು ಎಂದು ಹೇಳುವ ಮೂಲಕ ಪಂಪ ಮುಂದಿನ ಕವಿಗಳಿಗೆ ಮಾರ್ಗದರ್ಶಕನಾಗುತ್ತಾನೆ. ವ್ಯವಸ್ಥೆಯ ಕುರಿತ ಕವಿಯ ದೃಷ್ಟಿಕೋನ ಹೊಸದಾಗಿರಬೇಕು ಎನ್ನುತ್ತಾನೆ. ಇದಕ್ಕೆ ಪ್ರಭುತ್ವದ ಹುಳುಕುಗಳನ್ನು ಕುರಿತು ರಾಜನ ಎದುರಿಗೇ ಕಾವ್ಯ ಕಟ್ಟಿ ವಾಚಿಸುವ ಅವನ ಎದೆಗಾರಿಕೆಯೇ ಸಾಕ್ಷಿ. ಹೊಸ ಚಿಂತನೆಯೆಂದರೆ ಜಾತಿ, ಧರ್ಮ, ವರ್ಗ, ಪ್ರಭುತ್ವದ ಶೋಷಣೆಯ ವೈಭವೀಕರಣವಲ್ಲ. ಅದರ ವಿರೋಧದ ನೆಲೆಯ, ವೈರುಧ್ಯಗಳ ಸಂಘರ್ಷದ, ಮಾನವೀಯ ಕಾಳಜಿಯ ಹೊಸ ಹೊಳಹುಗಳು ಎಂದರ್ಥ.

೨. ಕಾವ್ಯದ ಹೊಸ ಆಲೋಚನೆಯು ಮೃದುವಾದ ಶಬ್ದಗಳ ಹೊಂದಾಣಿಕೆಯಿಂದ ಕೂಡಿರಬೇಕು : ಕವಿಯ ಆಲೋಚನೆ ಕೇವಲ ಹೊಸದಾಗಿದ್ದರೆ ಸಾಲದು ಅದನ್ನು ಅಭಿವ್ಯಕ್ತಿಸುವ ಪದಗಳ ಜೋಡಣೆ ಮುಖ್ಯವಾದುದು. ಈ ಪದಗಳ ಜೋಡಣೆಯೇ ಅದು ಕಾವ್ಯವೋ ಅಲ್ಲವೋ ಎಂಬುದನ್ನು ತಿಳಿಸುತ್ತದೆ. ಭಾಷೆಯಲ್ಲಿನ ಪದಗಳನ್ನು ಹೊಂದಿಸಿ ಬರೆಯುವುದು ಕವಿಯ ಜಾಣ್ಮೆಯಾಗಿದೆ. ಪಂಪ ಇಲ್ಲಿ ಭಾಷಾ ಬಳಕೆಯ ವಿಶಿಷ್ಟ ರಚನೆಯನ್ನು ಕುರಿತು ಹೇಳುತ್ತಿದ್ದಾನೆ. ಕಾವ್ಯವೆನ್ನುವುದು ಹೊಸ

# ಮುಳ್ಳಿನ ಹಾರ




ಉರ್ದು ಮೂಲ : **ಸಾಹಿರ್ ಲುಧಿಯಾನ್ವಿ**

ಕನ್ನಡಕ್ಕೆ : **ಪ್ರೊ॥ ಶ್ರೀನಿವಾಸ್ ವಿ. ಸುತ್ರಾವೆ**

೧೬೪೬/೧೮, ಮಹಡಿ, ವಿದ್ಯಾನಗರ

ದಾವಣಗೆರೆ - ೫೭೭೦೦೫


**ಯಾ**ರಿಗೆ ತಮ್ಮ ಪ್ರೀತಿಗೆ ಪ್ರೀತಿ ದೊರೆಯಿತೋ
ಅವರು ಎಂತಹ ಜನರಿದ್ದರೆಂಬುದು ತಿಳಿಯದು
ನಾನು ಮೊಗ್ಗುಗಳನ್ನು ಕೇಳಿದರೆ ನನಗೆ ಮುಳ್ಳಿನ ಹಾರ ದೊರೆಯಿತು.

ಸಂತಸಗಳ ಗುರಿಯನರಿಸಿದಾಗ ನನಗೆ ದುಃಖದ ಧೂಳು ದೊರೆಯಿತು
ಪ್ರೇಮಗೀತೆಗಳ ಬಯಸಿದಾಗ ನನಗೆ ನಿಟ್ಟುಸಿರಿನ ನಿರುತ್ಸಾಹ ದೊರೆಯಿತು
ನನಗೆ ದೊರೆತ ಪ್ರತಿಯೊಬ್ಬ ಶೋಕನಿವಾರಕನೂ ನನ್ನ ಎದೆಯ ಭಾರವನ್ನು ದ್ವಿಗುಣಗೊಳಿಸಿದನು
ನಾನು ಮೊಗ್ಗುಗಳನ್ನು ಕೇಳಿದರೆ ನನಗೆ ಮುಳ್ಳಿನ ಹಾರ ದೊರೆಯಿತು.

ನನ ಎಲ್ಲ ಸಂಗಾತಿಗಳೂ ಒಂದೆರಡು ಗಳಿಗೆ ನನ್ನ ಜೊತೆಯಲ್ಲಿದ್ದು ಅಗಲಿದರು
ಯಾರಿಗೆ ತಾನೆ ಸಮಯವಿದೆ ಹುಚ್ಚರ ಕೈ ಹಿಡಿಯಲು
ನನಗೆ ನನ್ನ ನೆರಳು ಕೂಡ ಅನೇಕ ಸಲ ಬೇಸರಗೊಂಡಿರುವಂತೆ ತೋರಿತು
ನಾನು ಮೊಗ್ಗುಗಳನ್ನು ಕೇಳಿದರೆ ನನಗೆ ಮುಳ್ಳಿನ ಹಾರ ದೊರೆಯಿತು.

ಇದಕ್ಕೇ ಜೀವನವೆಂದು ಕರೆಯುತ್ತಾರೆಂದರೆ ನಾನು ಹೀಗೇ ಇದ್ದುಬಿಡುವೆ
ಉಸ್ಸೆಂದು ನಿಟ್ಟುಸಿರು ಬಿಡುವುದಿಲ್ಲ, ತುಟಿ ಹೊಲಿದುಕೊಂಡುಬಿಡುತ್ತೇನೆ, ಕಣ್ಣೀರು ಕುಡಿಯುತ್ತೇನೆ.
ಈಗ ದುಃಖಕ್ಕೇಕೆ ಹೆದರಬೇಕು, ದುಃಖ ನೂರು ಸಲ ದೊರಕಿರುವಾಗ
ನಾನು ಮೊಗ್ಗುಗಳನ್ನು ಕೇಳಿದರೆ, ನನಗೆ ಮುಳ್ಳಿನ ಹಾರ ದೊರೆಯಿತು.

ಆಲೋಚನೆಯಿಂದ ಕೂಡಿದ ಪದಗಳ ಜೋಡಣೆಯ ರಚನೆಯಾಗಿದೆ. ಕಾವ್ಯವೆಂದರೆ ಓದುವುದು ಮಾತ್ರವಲ್ಲ, ಅದು ಕೇಳಿಸಿಕೊಳ್ಳುವುದು ಕೂಡ. ವಾಸ್ತವವಾಗಿ ಕನ್ನಡ ಕಾವ್ಯ ಪರಂಪರೆ ಎಂದರೆ ಕಾವ್ಯವನ್ನು ವಾಚಿಸುವ, ಕೇಳಿಸಿಕೊಳ್ಳುವ ಪರಂಪರೆ. ಹಳಗನ್ನಡ ಕಾವ್ಯಗಳ ಕಾವ್ಯ ರಚನೆಯ ಶೈಲಿಯೇ ಹೇಳುವ, ವಾಚಿಸುವ ಹಾಗೂ ಕೇಳಿಸಿಕೊಳ್ಳಬೇಕೆಂಬ ಒತ್ತಾಯದ ರಚನೆಗಳಾಗಿವೆ. ಕವಿಯ ಕಾವ್ಯ ರಚನೆಯ ಮುಂದೆ ಒಂದು ಶ್ರೋತೃ ವರ್ಗದ ಉಪಸ್ಥಿತಿ ಇರುವುದು ಕಾವ್ಯರಚನೆಯ ಶೈಲಿ ಮತ್ತು ಪ್ರಕಾರದಲ್ಲಿಯೇ ಅಂತರ್ಗತವಾಗಿರುವುದನ್ನು ಕಾಣಬಹುದು. 'ಕೇಳು ಜನಮೇಜಯ', 'ಹೇಳತೇನು ಕೇಳ' ಎಂದು ನೇರ ಸಂಬೋಧನಾ ಕ್ರಮದಲ್ಲಿರಬಹುದು. ಇಲ್ಲವೇ ಪರೋಕ್ಷವಾಗಿರಬಹುದು. ಒಟ್ಟಿನಲ್ಲಿ ಕಾವ್ಯವನ್ನು ಓದುವ ಮತ್ತು ಕೇಳುವ ಎರಡು ಕ್ರಿಯೆಗಳು ಅರ್ಥ ಸಂವಾದಕ್ಕೆ ಸಂಬಂಧಿಸಿದವುಗಳಾಗಿವೆ. ಕಾವ್ಯದ ರಚನೆ ಕೇಳುಗನಿಗೆ ಹಿತವಾಗಿರಬೇಕು. ಕರ್ಕಶವಾಗಿರಬಾರದು. ಅರ್ಥಭಂಗವಾಗುವಂತಿರಬಾರದು. ರಸಭಂಗವಾಗಬಾರದು. ಹಾಗಾಗಿ ಪಂಪ ಕಾವ್ಯದಲ್ಲಿ ಬಳಸುವ ಶಬ್ದಗಳು ಮೃದುವಾಗಿರಬೇಕು ಮತ್ತು ಹೊಂದಾಣಿಕೆಯಿಂದ ಕೂಡಿರಬೇಕು ಎನ್ನುತ್ತಾನೆ. ಕೇಶಿರಾಜ ಎರಡು ರೇಫೆಗಳನ್ನು ಸಂಧಿ ಮಾಡಿ ಬಳಸುವುದರಿಂದ ಎಂತಹ ಧ್ವನಿ ಹೊರಡುತ್ತದೆ. ಯಾವ ಯಾವ ಅಕ್ಷರ, ಪದಗಳನ್ನು ಸಂಧಿ ಮಾಡಿ ಬಳಸಬಾರದು ಎಂದು ಉದಾಹರಣೆ ಮೂಲಕ ಸೂಚಿಸುತ್ತಾನೆ. ನವರಸಗಳ ಭಾವಗಳನ್ನು ಅಭಿವ್ಯಕ್ತಿಸುವ ಕವಿ ಅರ್ಥ ಭಾವಕ್ಕೆ ಸಂವಾದಗೊಳ್ಳುವಂತೆ ಪದಗಳನ್ನು ಹೊಂದಿಸಿ ಕಾವ್ಯ ರಚಿಸಬೇಕು. ಪಂಪನ ಕಾವ್ಯಗಳು ಅಮರವಾಗುವುದು ನೆನಪಿನಲ್ಲಿ ಉಳಿಯುವುದು ಈ ಕಾರಣಕ್ಕಾಗಿಯೇ. 'ದೇವರು ಋಜು ಮಾಡಿದನು, ರಸವಶನಾಗುತ ಕವಿ ಅದ ನೋಡಿದನು' ಎಂಬ ಮುಂತಾದ ಕುವೆಂಪು ಅವರ ಕವಿತೆಗಳು ಮತ್ತು ಅವರ ಕಥನ ಕವನಗಳು ಆಪ್ಯಾಯಮಾನವಾಗಲು ಮೃದುವಾದ ಶಬ್ದಗಳ ಹೊಂದಾಣಿಕೆಯೇ ಕಾರಣ. ಬೇಂದ್ರೆ, ಕೆ.ಎಸ್.ನ. ಹಾಗೂ 'ದೊಡ್ಡ ಗೌಡರ ಬಾಗಿಲಿಗೆ ನಮ್ಮ ಮೂಳೆಯ ತೋರಣ' ಎಂಬ ಸಿದ್ದಲಿಂಗಯ್ಯ ಅವರ ಮುಂತಾದ ಕವನಗಳು ಅಮರವಾಗಿರಲು ವಸ್ತು, ಆಲೋಚನೆಯ ಜೊತೆಗೆ ಶಬ್ದಗಳ ಹೊಂದಾಣಿಕೆಯಿಂದ ಹೊರಡುವ ಅರ್ಥ, ಭಾವಸ್ಫುರಣೆಯೇ ಕಾರಣ. ಪಂಪ ಆ ಕಾಲದ ಸಾಂಸ್ಕೃತಿಕ ಪರಿಸರಕ್ಕೆ ಪ್ರತಿಕ್ರಿಯಿಸಿದ ಕವಿ. ಅಷ್ಟೇ ಅಲ್ಲ, ಭಾರತೀಯ ಕಾವ್ಯ ಮೀಮಾಂಸೆಯ ತತ್ವಗಳಿಗನುಗುಣವಾಗಿ ಕಾವ್ಯ ರಚಿಸಿದ ರಸನಿಷ್ಠ ಕವಿಯೂ ಹೌದು. ಹಾಗಾಗಿ ಕಾವ್ಯವೆನ್ನುವುದು ಕೇವಲ ಕವಿಯ ರಚನೆಯಷ್ಟೇ ಆಗಿದ್ದರೆ ಸಾಲದು, ಅದು ಸಂವಹನದ ಸಾಧನವೂ ಆಗಬೇಕು ಎಂದು ಪ್ರತಿಪಾದಿಸುತ್ತಾನೆ. ಅದಕ್ಕೆ ಪೂರಕವಾಗಿ ಕಾವ್ಯರಚನೆಯಲ್ಲಿ ಮೃದುವಾದ ಶಬ್ದಗಳ ಹೊಂದಾಣಿಕೆಯಿರಬೇಕು ಎನ್ನುತ್ತಾನೆ.

೩. ಕಾವ್ಯದ ಹೊಸ ಆಲೋಚನೆಯು ಮೃದುವಾದ ಶಬ್ದಗಳ ಜೋಡಣೆಯಿಂದ ಕೂಡಿ ದೇಶಿ ಶೈಲಿ ಅಥವಾ ಅಚ್ಚಗನ್ನಡ ಶೈಲಿಯಲ್ಲಿ ಆರಂಭವಾಗಬೇಕು : ಪಂಪ ಕಾವ್ಯವನ್ನು ಅಚ್ಚಗನ್ನಡ ಶೈಲಿಯಿಂದ ಆರಂಭಿಸಬೇಕು ಎನ್ನುತ್ತಾನೆ. ಕಾವ್ಯವನ್ನು ಓದಿದಾಗ ಮೊದಲಿಗೆ ಇದು ಕನ್ನಡ ಕಾವ್ಯ ಎಂಬ ಅನುಭವವಾಗಬೇಕು. ಒಂದು ಕಾವ್ಯದ ಜೀವಂತಿಕೆಯಿರುವುದು ಅದರ ದೇಸಿ ಶೈಲಿಯಲ್ಲಿ ಮಾತ್ರ. ಬೇರೊಂದು ಭಾಷೆಯ ಪದಗಳು ಅದರ ಜೀವಂತಿಕೆಗೆ ಅರ್ಥಪೂರ್ಣತೆಯನ್ನು ತಂದುಕೊಡಬಲ್ಲವು. ಆದರೆ ಸಂಸ್ಕೃತದ ಪದ ಮತ್ತು ಭಾಷೆಯೇ ಕನ್ನಡದ ಆತ್ಮಶಕ್ತಿಯಾಗಲು ಸಾಧ್ಯವಿಲ್ಲ. ಸಂಸ್ಕೃತ ಮತ್ತು ಕನ್ನಡ ಭಾಷೆಯ ಬಳಕೆಯಲ್ಲಿ ಕನ್ನಡದ ಪದಗಳೇ ಪ್ರಾಣ. ಸಂಸ್ಕೃತದ ಪದಗಳೇನಿದ್ದರೂ ದೇಹದ ಅಂಗರಚನೆಯಂತೆ ವಿವಿಧ ರೂಪಗಳನ್ನು ತಂದುಕೊಡಬಲ್ಲುದು. ಮೂಗಿಗಿಂತ ಮೂಗುತಿ ಭಾರವಾಗಬಾರದುವೆಂಬಂತೆ ಪಂಪನ ಮೊದಲ ಆದ್ಯತೆ ಅಚ್ಚಗನ್ನಡ ಶೈಲಿಯ ರಚನೆಯ ಕುರಿತಾಗಿದೆ. ಪಂಪ ಅಚ್ಚಗನ್ನಡ ಶೈಲಿಯ ಮೋಹಕತೆಗೆ ಮನಸೋತ ಕವಿ. ಅಚ್ಚಗನ್ನಡ ಶೈಲಿಯ ಮೋಹಕತೆಯನ್ನು ಬೆಚ್ಚಗೆ ಇಡಲು, ಸುಂದರವಾಗಿಡಲು ಸಂಸ್ಕೃತದ ಪದಗಳನ್ನು ಆಲಂಕಾರಿಕವಾಗಿ ಬಳಸುತ್ತಾನೆ. ಆದ್ದರಿಂದ ಕಾವ್ಯ ಅಚ್ಚಗನ್ನಡ ಶೈಲಿಯಲ್ಲಿ ಪ್ರವೇಶಿಸಬೇಕು ಎನ್ನುತ್ತಾನೆ. ಪಂಪ ಕೇವಲ ಪಾಂಡಿತ್ಯದ ಕವಿಯಲ್ಲ 'ವಿಕ್ರಮಾರ್ಜುನ ವಿಜಯ' ಕೃತಿಯ ಬಹುಪಾಲು ಕಂದ ಪದ್ಯಗಳ ರಚನೆಗಳು ಇದಕ್ಕೆ ಉದಾಹರಣೆಯಾಗಿ ನೋಡಬಹುದು. ಒಂದು ರೀತಿಯಲ್ಲಿ ಚಂಪೂ ಶೈಲಿಯೇ ಕನ್ನಡ ಜಾಯಮಾನದ ದೇಸಿ ಶೈಲಿಯನ್ನು ಬಳಸಿಕೊಳ್ಳಲು ಸಾಧ್ಯವಾಯಿತೆಂದು ಹೇಳಬಹುದು. ಸಂಸ್ಕೃತದ ವೃತ್ತಗಳು ಕನ್ನಡದ ದೇಸಿ ಬಳಕೆಯಿಂದಾಗಿಯೇ ಕನ್ನಡದಲ್ಲಿ ಖ್ಯಾತ ಕರ್ನಾಟಕಗಳಾದವೆನ್ನಬಹುದು. ಅವು ರೂಪದಲ್ಲಿ ಸಂಸ್ಕೃತದ ಚಹರೆಯನ್ನುಳಿಕೊಂಡು ಅಂತಸ್ಸತ್ವದಲ್ಲಿ ದೇಶೀಯತೆಯನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸಿದ್ದರ ಫಲವಾಗಿ ಕರ್ನಾಟಕದಲ್ಲಿ ಕನ್ನಡದ ಕಗಳಿಗೆ ಇಷ್ಟವಾಗಿ ಪ್ರಖ್ಯಾತವಾದವು.

೪. ಕಾವ್ಯದಲ್ಲಿ ದೇಶಿಶೈಲಿಯು ಸಂಸ್ಕೃತ ಶೈಲಿಯಲ್ಲಿ ಸೇರಿ ಹೊಂದಿಕೊಳ್ಳಬೇಕು : ಅಚ್ಚಗನ್ನಡ ಶೈಲಿಯಿಂದ ಕಾವ್ಯ ಪ್ರವೇಶವಾಗಬೇಕು ಎಂದು ಹೇಳುವ ಪಂಪ ಅದು ಸಂಸ್ಕೃತ ಶೈಲಿಯಲ್ಲಿ ಸೇರಿ ಹೊಂದಿಕೊಳ್ಳಬೇಕು ಆಗ ಕಾವ್ಯ ರಚನೆಯು ಸೊಗಸಾಗಿರುತ್ತದೆ ಎನ್ನುತ್ತಾನೆ. ಭಾಷಾಬಳಕೆಯ ದೃಷ್ಟಿಯಲ್ಲಿ ಪಂಪ ಮಡಿವಂತಿಕೆಯ ಕವಿಯಲ್ಲ. ಸಂಸ್ಕೃತದ ಸೊಬಗನ್ನು ಅದರ ಶಕ್ತಿಯನ್ನು ಅರಿತ ಕವಿ. ಸಂಸ್ಕೃತದ ದಟ್ಟ ಪ್ರಭಾವದಿಂದ ತಪ್ಪಿಸಿಕೊಳ್ಳದ ಕವಿ. ಮಾರ್ಗಕಗಳ ಮಧ್ಯೆ ಮಾರ್ಗ-ದೇಸಿಯ ಚಂದವನ್ನು ಚಿತ್ರಿಸಿದ ಕವಿ. ಪಂಪನ ಕಾಲವೆಂದರೆ ಕನ್ನಡ ಮತ್ತು ಸಂಸ್ಕೃತವನ್ನು ಬೇರ್ಪಡಿಸಲಾಗದಷ್ಟು ಬೆರೆತುಹೋದ ಕಾಲ. ಪಂಪ ದೇಶೀ ಕಾವ್ಯದ ಪಠವಾದಿಯಲ್ಲ, ಆದ್ದರಿಂದ ಕಾವ್ಯ ರಚನೆ ಸೊಗಸಾಗಿರಲು ಭಾಷೆಯ ಹೊಂದಾಣಿಕೆ ಬಿಟ್ಟರೆ ಬೇರೆ ಮಾರ್ಗವಿಲ್ಲ ಎಂದು ಹೇಳುತ್ತಾನೆ. ದೇಶಿ ಸಂಸ್ಕೃತದೊಂದಿಗೆ ಹೇಗೆ ಹೊಂದಿಕೊಳ್ಳಬೇಕು ಎಂಬ ಉದಾಹರಣೆಗೆ ಪಂಪನ 'ಮೃಗಯಾವ್ಯಾಜದಿನೊರ್ಮೆ..' ಎಂಬ ಪದ್ಯವನ್ನೆ ನೋಡಬಹುದು. ಪಂಪ ತನ್ನ ಕೃತಿಗಳಲ್ಲಿ ಬಳಸಿರುವ ಎಲ್ಲ ವೃತ್ತಗಳಲ್ಲಿ ಕನ್ನಡದ ದೇಶೀ ಶೈಲಿಯನ್ನು ಸಂಸ್ಕೃತದ ಶೈಲಿಯೊಂದಿಗೆ ಹೊಂದಿಸುತ್ತಾನೆ. ಹೊಸಗನ್ನಡದ ಆರಂಭಿಕ ಕವಿಗಳ ಕಾವ್ಯಗಳಲ್ಲಿ ಈ ಧೋರಣೆ ಕಾಣಬಹುದು. ಆಧುನಿಕ ಕನ್ನಡ ಕವಿಗಳಲ್ಲಿ ಕುವೆಂಪು ಈ ಪ್ರಯೋಗಗಳನ್ನು ಮಾಡಿರುವುದನ್ನು ಗಮನಿಸಬಹುದು. ಪಂಪನಂತಹ ಕವಿಗೆ ಸಂಸ್ಕೃತದ ಬಲವಾದ ಹಿಡಿತದಿಂದ ಪಾರಾಗಿ ಕನ್ನಡದಲ್ಲಿ ಕಾವ್ಯ ಕಟ್ಟುವ ಇಕ್ಕಟ್ಟಿನ ಪರಿಸ್ಥಿತಿಯಿದೆ ಎಂಬಂತೆ ಕಾಣುತ್ತದೆ. ಸಂಸ್ಕೃತವನ್ನು ಪೂರ್ಣವಾಗಿ ಬಿಟ್ಟುಕೊಡಲಾಗದ, ಕನ್ನಡವನ್ನೇ ಪೂರ್ತಿ ಅಪ್ಪಿಕೊಳ್ಳಲಾಗದ ಚಾರಿತ್ರಿಕ ಸಂದರ್ಭವೆಂಬಂತೆ ಅದು ಕಾಣುತ್ತದೆ. ಮಹಾಕಾವ್ಯವನ್ನು ಬರೆಯ ಹೊರಟ, 'ಸಮಸ್ತ ಭಾರತ'ವನ್ನು ಕನ್ನಡಿಗರಿಗೆ ಕಟ್ಟಿಕೊಡಲು ಹೊರಟ ಪಂಪನಿಗೆ ತೋರಿದ ಮಾರ್ಗವಿದು. ಅದು ಕಾವ್ಯಕ್ಕೆ ಮೆರುಗು ನೀಡಬಲ್ಲುದು ಎಂಬುದು ಪಂಪನ ಸಮರ್ಥನೆಯಾಗಿದೆ. ಸಂಸ್ಕೃತದ ದಟ್ಟ ಪ್ರಭಾವವನ್ನು ಅರಗಿಸಿಕೊಳ್ಳಲೇಬೇಕಾದ ಅನಿವಾರ್ಯತೆಯನ್ನೂ ಪಂಪ ಇಲ್ಲಿ ಸೂಚಿಸುತ್ತಿದ್ದಾನೆ.

ಕಾವ್ಯವನ್ನು ಕುರಿತ ಪಂಪನ ಮಾತುಗಳನ್ನು ಸೂತ್ರೀಕರಿಸಿದರೆ : ಆಲೋಚನೆಯು ಮೃದುವಾದ ಶಬ್ದಗಳ ಜೋಡಣೆಯಿಂದ ಕೂಡಿ ಅಚ್ಚಗನ್ನಡ ಶೈಲಿಯಿಂದ ಆರಂಭವಾಗಿ ಅದು ಸಂಸ್ಕೃತ ಶೈಲಿಯಲ್ಲಿ ಸೇರಿ ಹೊಂದಿಕೊಳ್ಳಬೇಕು. ಆಗ ಕಾವ್ಯದ ರಚನೆಯು ಸೊಗಸಾಗಿರುತ್ತದೆ. ಅದೆಷ್ಟು ಸೊಗಸಾಗಿರುತ್ತದೆಯೆಂದರೆ ವಸಂತ ಕಾಲದ ಸುಗ್ಗಿಯ ಸಮಯದಲ್ಲಿ ಎಳೆಯ ಮಾವಿನ ಮರವು ಕೆಂಪಾದ ಚಿಗುರಿನ ಹೂವಿನ ಭಾರದಿಂದ ಜೋತುಬಿದ್ದು ದುಂಬಿಗಳಿಂದ ಆವೃತವಾಗಿ ಆ ಮಾವಿನ ಮರದಲ್ಲಿ ಕೋಗಿಲೆಯು ಕೂಗುತ್ತಿದ್ದರೆ ಎಷ್ಟು ಸೊಗಸಾಗಿ ಕಾಣುತ್ತದೆಯೋ ಹಾಗೆ ಕಾವ್ಯವು ಸೊಗಸಾಗಿ ಶೋಭಿಸುತ್ತದೆ ಎಂದು ಪಂಪ ಹೇಳುತ್ತಾನೆ. ಕಾವ್ಯದ ಸೊಗಸನ್ನು ನಿಸರ್ಗದ ಸೊಬಗಿನೊಂದಿಗೆ ಪಂಪ ಹೋಲಿಸುತ್ತಾನೆ. ವಸಂತ, ಸುಗ್ಗಿ, ಹೂ, ಚಿಗುರು, ಮಾವು, ಮತ್ತು ಕೋಗಿಲೆಯ ಕೂಗು ಒಂದಕ್ಕೊಂದು ಹೇಗೆ ಹೊಂದಿಕೊಂಡು ಸೊಗಸಾಗಿವೆಯೋ ಹಾಗೆಯೇ ಕಾವ್ಯವು ಆಲೋಚನೆ, ಪದಗಳ ಜೋಡಣೆ, ದೇಸೀ ಮತ್ತು ಮಾರ್ಗಶೈಲಿಯ ಸಮನ್ವಯದ ಹೊಂದಿಕೆಯ ರಚನೆಯಿಂದ ಸೊಗಸಾಗಿರುತ್ತದೆ.

ಕಾವ್ಯದ ಸೃಷ್ಟಿ ಕ್ರಿಯೆಯು ಕೇವಲ ರಸಾನುಭವದ ಅಭಿಯಕ್ತಿಯಲ್ಲ, ಪದಗಳ ಚಮತ್ಕಾರವಲ್ಲ. ಅಲ್ಲೊಂದು ಜೀವ ಜೀವಗಳ ಸಂಚಯನವಿದೆ. ಚರಿತ್ರೆಯ ಚಲನಶೀಲ ನಡೆಯಿರುತ್ತದೆ. ಸಾಮಾಜಿಕ ವೈರುಧ್ಯಗಳನ್ನು ದಾಖಲಿಸುವ ತುರ್ತಿರುತ್ತದೆ. ಚಾರಿತ್ರಿಕ ಸಂದರ್ಭದ ಪ್ರತಿಕ್ರಿಯೆಯಾಗಿರುತ್ತದೆ. ಕಾವ್ಯವೆಂಬ ಸಂತೋಷದ ಅಲೆಗಳಲ್ಲಿ ನೊಂದ ಜೀವಗಳ ನೋವಿನ ನೆಲೆಗಳಿರುತ್ತವೆ. ಕಲಾತ್ಮಕತೆಯ ಮೆರುಗಿನಲ್ಲಿ ಸಾಮಾಜಿಕ ಜವಾಬ್ದಾರಿಯಿರುತ್ತದೆ. ಪಂಪನ ಸಾಮಾಜಿಕ ಜವಾಬ್ದಾರಿ ಕಾವ್ಯದ ಕಲೆಗಾರಿಕೆಯಲ್ಲಿ ಅರಮನೆಯ ಆಸ್ಥಾನದ ಅರಸನೆದುರಲ್ಲಿ ಪ್ರಕಟವಾಗಿರುವುದು ಕನ್ನಡ ಕಾವ್ಯ ಪರಂಪರೆಯಲ್ಲಿ ದಾಖಲೆಯೇ ಸರಿ.

*(ಈ ಲೇಖನದಲ್ಲಿನ ಪದ್ಯದ ಅರ್ಥವನ್ನು ಡಾ।। ಡಿ.ಎಲ್.ಎನ್. ಅವರ 'ಪಂಪ ಭಾರತ ದೀಪಿಕೆ'ಯಿಂದ ಬಳಸಿಕೊಳ್ಳಲಾಗಿದೆ.)*

ಡಿ. ಅಂಜನಪ್ಪ
ಉಪನ್ಯಾಸಕರು, ಮೊದಲ ತಿರುವು, ಎಡಭಾಗ, ಜೆ. ಸಿ.ಆರ್. ಬಡಾವಣೆ
ಚಿತ್ರದುರ್ಗ - ೫೭೭ ೫೦೧



## ಬದುಕು ಕುತೂಹಲದ ಒಂದು ಸರಕು

**(ಪ್ರಬಂಧ ಸಂಕಲನ)**

*ಎನ್ಕೆ. ಕುಲಕರ್ಣಿ*

**ಪುಟ : ೧೭೨**

**ಬೆಲೆ : ರೂ. ೯೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೧

ಎನ್ಕೆ ಕುಲಕರ್ಣಿಯವರ ಒಂದಷ್ಟು ಬರಹಗಳು ಇಲ್ಲಿ ಸಂಕಲನಗೊಂಡಿವೆ. ಇವುಗಳನ್ನು ಬರೆದ ಕಾಲ ಹಿಂದಿನದು – ಅಂದರೆ ಸುಮಾರು ನಲ್ವತ್ತರಿಂದ ಐವತ್ತು ವರ್ಷಗಳಷ್ಟು ಹಿಂದೆ. ಲಲಿತ ಪ್ರಬಂಧಗಳಾದ ಈ ಬಿಡಿ ಬರಹಗಳಲ್ಲಿ ಸಮಾಜದ ಅಂದಿನ ಓರೆಕೋರೆಗಳಿಗೆ ಲಘು ಚಾಟಿಯೇಟಿನಂತಹ ಚುರುಕನ್ನು ಅವರು ಮುಟ್ಟಿಸುತ್ತಿದ್ದರು. ಆಕಾಶವಾಣಿಯಲ್ಲಿ ಉನ್ನತ ಹುದ್ದೆಯಲ್ಲಿದ್ದ ಎನ್ಕೆ ಬದುಕನ್ನೂ ಸಾಹಿತ್ಯವನ್ನೂ ಅತ್ಯಂತ ಪ್ರೀತಿಯಿಂದ ಕಂಡವರು. ಮಗುಮ್ಮಾಗಿ ಸೆಟೆದು ನಿಂತಾಗ ತಿಳಿಹಾಸ್ಯದ ಲೇಪನ, ವಿಪರೀತ ಬೇಸರಿಕೆ ಬಂದಾಗ ಸಾಂತ್ವನ, ಗೊಂದಲದ ಗೂಡಾಗಿ ತಬ್ಬಿಬ್ಬಾದಾಗ ಸಿಕ್ಕು ಬಿಡಿಸುವ ಜಾಣತನ ಇವೆಲ್ಲ ಇಲ್ಲದೆ ಹೋದರೆ ಬಾಳೊಂದು ಬಾಳೆ? ಹುಲ್ಲು, ಹಸು, ಹುಲಿ ಇವನ್ನು ಒಂದೊಂದಾಗಿ ಹೊಳೆಯಾಚೆ ದೋಣಿಯಲ್ಲಿ ದಾಟಿಸಬೇಕಾದಾಗ ಅಂಬಿಗನಿಗಿರುವ ಜಾಣ್ಮೆ ನಮಗೂ ಬೇಡವೆ? ಬಸ್ಸು ಎಂಬ ಸೌಕರ್ಯ ಸಾಧನವೊಂದು ನಿಮ್ಮೆದುರಿಗೇ ನಿಂತು ನಿಮ್ಮನ್ನು ಒಳಸೆಳೆದು ನಾನಾತರದ ಹಿಂಸೆಕೊಡುವ ಕೀಟಲೆ ಪ್ರಾಣಿಯೆಂದು ಗೊತ್ತೆ? ಪ್ರಾಚೀನ ಕವಿವರ್ಯ ಆಂಡಯ್ಯನಂತೆ ತಾನು ಕೂಡ 'ಭಾರೀ ಪಂಡಿತೋತ್ತಮ'ನೆಂಬ ಭ್ರಮೆಯಿಂದ ಕೋಳಾಹಳನೆಂಬ ಹೆಸರಲ್ಲಿ ಕನ್ನಡದ ಕವಿಯೊಬ್ಬ ಸಾಹಿತ್ಯೋದ್ಧಾರ ಗೈದದ್ದು ತಿಳಿದಿದೆಯೇ? 'ಜಾಮಾತಾ ದಶಮಗ್ರಹ'ದ ಕಾಟದಿಂದ ಕ.ಪಿ.ಯೊಬ್ಬ 'ಸಾಲಂ'ಕೃತ ಕನ್ಯೆಯನ್ನು ಧಾರೆಯೆರೆದ ತಪ್ಪಿಗೆ ಅಸಿಧಾರಾವ್ರತ ಕೈಗೊಂಡದ್ದು... ಹೋಗಲಿ, ಇನ್ನುಳಿದವೆಲ್ಲ ಹೇಳುವುದಕ್ಕಿಂತ ತಾವೆಲ್ಲ ಓದುವುದೇ ಸೊಗಸು.

## ದೇಶ ವಿಭಜನೆಯ ಕಥೆಗಳು

*ಉರ್ದು ಮೂಲ : ಸಾದತ್ ಹಸನ್ ಮಂಟೋ*

*ಕನ್ನಡ ರೂಪಾಂತರ : ಫಕೀರ್ ಮುಹಮ್ಮದ್ ಕಟ್ಪಾಡಿ*

**ಪುಟ : ೧೦೮** **ಬೆಲೆ : ರೂ. ೨೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಸಾದತ್ ಹಸನ್ ಮಂಟೋ ಉರ್ದು ಬರಹಗಾರ. ದೇಶ ವಿಭಜನೆಯ ಕಾಲದಲ್ಲಿನ ಕೋಮು ಗಲಭೆಗಳ ಕ್ರೌರ್ಯವನ್ನು ಕಣ್ಣಾರೆ ಕಂಡವರು. ಮನುಷ್ಯ ಮನುಷ್ಯನನ್ನು ಅಮಾನುಷವಾಗಿ ಕೊಚ್ಚಿ ತುಂಡರಿಸುವ ಪೈಶಾಚಿಕ ಕೃತ್ಯಕ್ಕೆ ರೋಸಿಹೋದವರು. ಜನರನ್ನು ರೊಚ್ಚಿಗೆಬ್ಬಿಸುವ ಸಂದರ್ಭಗಳನ್ನು ಸೃಷ್ಟಿಮಾಡುವ ಅಪರಾಧಿವರ್ಗವೊಂದು ಸದಾ ಸಂಚು ನಡೆಸುತ್ತಲೇ ಇರುತ್ತದೆ. ಪಾತಕಿಗಳ ಕೈ ಮೇಲಾದಲ್ಲಿ ರಕ್ತದೋಕುಳಿ ನಡೆಯುತ್ತದೆ. ಇಂಥದೊಂದು ಘಟನೆ ನಮ್ಮ ಭಾರತವು ವಿಭಜನೆಗೊಂಡ ಸಂದರ್ಭದಲ್ಲಿ ನಡೆದು, ಒಂದು ಕೋಮಿನ ಜನರನ್ನು ಇನ್ನೊಂದು ಕೋಮಿನವರು ಸಹಿಸಲಾರದಂಥ ಪರಿಸ್ಥಿತಿಯೊಂದು ನಿರ್ಮಾಣಗೊಂಡಿತ್ತು. ಸಾಕಷ್ಟು ಪ್ರಾಣಹಾನಿಯೂ ಆಗಿ ಕ್ರೌರ್ಯದ ಅಟ್ಟಹಾಸ ಮೇರೆ ಮೀರಿತ್ತು. ದಂಗೆ-ಯುದ್ಧ-ಗಲಭೆಗಳಂತಹ ಅತಿರೇಕಗಳನ್ನು ಖಂಡಿಸುತ್ತ ಹಸನ್ ಮಂಟೋ ಕಥೆಗಳನ್ನು ಬರೆಯುತ್ತಾರೆ; ಕಥೆ ಕಟ್ಟುಕಥೆಯಾಗಿರದೆ ವಾಸ್ತವವೇ ಆಗಿರುತ್ತದೆ. ಗಲಭೆಯ ಸಂದರ್ಭದಲ್ಲಿನ ಸೇಡಿಗೆ-ಸೇಡು ಎನ್ನುವಂಥ ಕೇಡಿನ ಮನೋಭಾವವೊಂದು ಮನುಷ್ಯನಲ್ಲಿ ಮಿಂಚಿದಾಗ ವಿವೇಚನೆ ಕಳೆದುಕೊಂಡಾಗ, ನಡೆಯುವ ಅನರ್ಥಗಳನ್ನು ಯಥಾವತ್ತಾಗಿ ಇಲ್ಲಿ ನಿರೂಪಿಸಿದ್ದಾರೆ. ಹೆಸರು, ಧರ್ಮ, ಆಚರಣೆಗಳನ್ನೇ ಪ್ರಧಾನ ಅಳತೆಗೋಲಾಗಿಟ್ಟು ನಿರ್ದಯನಾಗುತ್ತಿರುವ ಮನುಷ್ಯನ ಈ ಸಂಸ್ಕಾರಕ್ಕೆ ಏನೆನ್ನೋಣ ? ಇಂತಹ ಮನಕಲಕುವ ಕಥೆಗಳನ್ನು ಉರ್ದುವಿನಿಂದ ಕನ್ನಡಕ್ಕೆ ಅನುವಾದಿಸಿದವರು ಶ್ರೀ ಫಕೀರ್ ಮುಹಮ್ಮದ್ ಕಟ್ಪಾಡಿ ಅವರು.



## ಮನಜ ಸಾಹಿತ್ಯ - ಸಮಗ್ರ ಅಧ್ಯಯನ (ಕರ್ನಾಟಕದಾದ್ಯಂತದ ೯೦ ಮಂದಿ ವಿದ್ವಾಂಸರ ಲೇಖನ ಸಂಪುಟ)

*ಗೌರವ ಸಂಪಾದಕರು : ಡಾ|| ಎಂ. ಲೀಲಾವತಿ, ಡಾ|| ಎಸ್. ನರೇಂದ್ರ ಕುಮಾರ್*

**ಪುಟ : ೭೫೨ + XVI** **ಬೆಲೆ : ರೂ. ೬೫೦**

**ಬಹುಜನ ಮಾಧ್ಯಮ ಕೇಂದ್ರ (ರಿ),** ಸಂಪಾದಕ ಮಂಡಳಿ, (ಮುದ್ರಣ ಮಾಧ್ಯಮ, ಕಂಪ್ಯೂಟರ್ ಎಲೆಕ್ಟ್ರಾನಿಕ್, ಮತ್ತು ಥಿಯೇಟರ್ ಮಾಧ್ಯಮ ಕೇಂದ್ರ), ನಂ. ಎಂ-೧೩, ೨ನೇ ಕ್ರಾಸ್, ೨ನೇ ಮುಖ್ಯರಸ್ತೆ, ೨ನೇ ಹಂತ ರಾಮಕೃಷ್ಣನಗರ, ಮೈಸೂರು - ೫೭೦ ೦೨೨

ಮ. ನ. ಜವರಯ್ಯ ಸಾಹಿತ್ಯಕ್ಷೇತ್ರದಲ್ಲಿ ಬಹುದೊಡ್ಡ ಹೆಸರು. ಇವರ ಬರಹಗಳು ಭಾರತದ ಕೆಳವರ್ಗದ ಶೋಷಿತ ಜನರ ಪರವಾಗಿದ್ದು ಅವರ ಸಂಕಷ್ಟಗಳನ್ನು ಢಾಳಾಗಿ ಎತ್ತಿ ತೋರಿಸುತ್ತವೆ. ಮಾತ್ರವಲ್ಲ, ವೈದಿಕ ಪರಂಪರೆಯ ಹಿಂದೂಧರ್ಮವು ಸಮಾಜದ ಕೆಲವರ್ಗಗಳ ಮೇಲೆ ನಡೆಸಿದ್ದ ದೌರ್ಜನ್ಯದ ಬಗೆಗೂ ಆಕ್ರೋಶಭರಿತ ಹೇಳಿಕೆಗಳನ್ನೊಳಗೊಂಡಿವೆ. ಡಾ|| ಅಂಬೇಡ್ಕರ್ ಅವರ ವಿಚಾರಧಾರೆಯನ್ನು ಪೂರ್ಣವಾಗಿ ತನ್ನಲ್ಲಿಳಿಸಿಕೊಂಡು ಅಸ್ಪೃಶ್ಯತೆ ಮತ್ತು ಜಾತಿವಾದಕ್ಕೆ ಸವಾಲೆಸೆಯುತ್ತ ಸಾಗುವಂತೆಯೇ ಮನದಾಳದಲ್ಲಿ ತೀವ್ರತರ ನೋವು ಮತ್ತು ಅಸಹನೆಗಳನ್ನೂ ಒಳಗೊಂಡಿವೆ. 'ಸೂರಪ್ಪ' ಮತ್ತು 'ಮಾಗಿ' ಇವರ ಶ್ರೇಷ್ಠ ಕಾದಂಬರಿಗಳು. ಅಲ್ಲದೆ ಹತ್ತು ಸಂಪುಟಗಳ 'ಅಂಬೇಡ್ಕರ್ ಸಮಗ್ರ ಚಿಂತನ' ಭಾಷಾಂತರವೂ ಇವರ ವಿದ್ವತ್ತಿಗೆ ಸಾಕ್ಷಿ. ಇವರ ಸಮಗ್ರ ಸಾಹಿತ್ಯದ ಅಧ್ಯಯನ ಈ ಪುಸ್ತಕದಲ್ಲಿ ತೊಂಬತ್ತು ಮಂದಿಯ ಲೇಖನಗಳ ಮೂಲಕ ನಡೆದಿದೆ.

## ಗದ್ಯ ಸಂಗಾತಿ (ವಿಮರ್ಶಾ ಲೇಖನಗಳು)

*ಡಾ|| ಅಶೋಕ ನರೋಡೆ*

**ಪುಟ : x + ೧೫೮ = ೧೬೮**

**ಬೆಲೆ : ರೂ. ೧೦೦**

**ಕುಕ್ಕೆಶ್ರೀ ಪ್ರಕಾಶನ,** ನಂ. ೨೧, ಮಾಚೋಹಳ್ಳಿ ಕಾಲನಿ, ವಿಶ್ವನೀಡಂ ಅಂಚೆ, ಬೆಂಗಳೂರು ಉತ್ತರ ತಾಲೂಕು, ಬೆಂಗಳೂರು - ೫೬೦ ೦೯೧




ಪ್ರಸಿದ್ಧ ಬರಹಗಾರರ ಕೆಲವು ಕೃತಿಗಳನ್ನಾಯ್ದು ವಿಮರ್ಶೆ ಮಾಡಿದ ಈ ಸಂಕಲನದಲ್ಲಿ ನಾಲ್ಕು ವಿಭಾಗಗಳಿದ್ದು ಕಾದಂಬರಿ - ಕಥೆ - ಜೀವನ ಚರಿತ್ರೆ - ಅನುವಾದಗಳೆಂದು ವರ್ಗೀಕರಿಸಲಾಗಿದೆ. ನವೋದಯ - ನವ್ಯ- ನವ್ಯೋತ್ತರಗಳಲ್ಲೇ ಸಾಹಿತ್ಯದ ಸ್ವರೂಪ ಬೇರೆ ಬೇರೆಯಾಗಿತ್ತು. ವೈಚಾರಿಕ - ದಲಿತ ಬಂಡಾಯ - ಪ್ರಗತಿಶೀಲ ಎಂದು ಕರೆಯಲಾದ ಸಾಹಿತ್ಯ ಇನ್ನೊಂದು ಜಾಡುಹಿಡಿದು ಜನರನ್ನೆಚ್ಚರಿಸುವ ಪ್ರಯತ್ನ ಮಾಡಿತು. ಇಂಥ ಕಾಲದಲ್ಲೇ ಪರಂಪರೆಯ, ಜಾತಿಮತದ ಸುಳಿಯಿಂದ ಹೊರಗೆ ಬಂದಂಥ, ಅಂತರ್ಜಾತೀಯ - ಅಂತರ್ ಮತೀಯ - ಪ್ರೇಮವಿವಾಹಗಳ ಕಥಾವಸ್ತುವನ್ನೊಳಗೊಂಡ ವಿಪುಲ ಸಾಹಿತ್ಯ ರಚನೆಯಾಯಿತು. ಇದರಿಂದ ಒಂದು ಸಾಮಾಜಿಕ ಪಲ್ಲಟವಾದದ್ದೇನೋ ನಿಜವಾದರೂ ಜನರಿಗೆ ಇದರಿಂದ ಸ್ವಾತಂತ್ರ್ಯ ಮತ್ತು ಸ್ವೇಚ್ಛೆಯ ಅಂತರ ತಿಳಿಯದಂಥ ಸ್ಥಿತಿ ನಿರ್ಮಾಣವಾಯಿತು. ಎಲ್ಲ ಕಾಲದ ಲೇಖಕರು ಇದನ್ನು ಗಮನಿಸಿ ತಮ್ಮ ಕೃತಿಗಳಲ್ಲಿ ಅದನ್ನು ಪ್ರತಿಫಲಿಸಿದ್ದಾರೆ. ಈ ಕಾಲದ ಸಾಹಿತ್ಯಕ್ಕೆ ಸಾಕಷ್ಟು ವಿಮರ್ಶೆಗಳೂ ಬಂದಿವೆ, ವಿಮರ್ಶೆಗಳಿಗೂ ವಿಮರ್ಶೆಗಳು ಬಂದು ಒಂದು ರೀತಿಯ ಚಿಂತನ-ಮಂಥನ ನಡೆದಿದೆ. ಇಲ್ಲಿನ ಬರಹಗಳಲ್ಲಿ ಡಾ|| ಅಶೋಕ ನರೋಡೆ ತಮ್ಮ ಅನಿಸಿಕೆಗಳನ್ನು ಕೃತಿ ವಸ್ತು ವಿಶ್ಲೇಷಣೆಯೊಂದಿಗೆ ನೀಡಿದ್ದು, ಆಯಾ ಬರಹಗಾರರ ಬರವಣಿಗೆಗೆ ಪ್ರೇರಕ ಶಕ್ತಿ ಏನಿರಬಹುದೆಂಬ ಹುಡುಕಾಟವನ್ನೂ ಮಾಡಿದ್ದಾರೆ. ನಿರಂಜನರ ಚಿರಸ್ಮರಣೆ, ಎಚ್. ಎನ್. ಅವರ ತೆರೆದ ಮನ, ದು. ನಿಂ. ಬೆಳಗಲಿ ಅವರ ಮರಾಠಿ ಅನುವಾದಗಳು, ಇಲ್ಲಿ ವಿಮರ್ಶೆಗೊಳಗಾದ ಕೆಲವು ಕೃತಿಗಳು.

**ಪರಕಾಯ** (ಲೇಖನ ಸಂಕಲನ)

ಡಾ|| ರಾಮಲಿಂಗಪ್ಪ ಟಿ. ಬೇಗೂರು

**ಪುಟ :** ೧೪೦ **ಬೆಲೆ :** ರೂ. ೯೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಹಳ್ಳಿಯಲ್ಲಿ ಬಾಲ್ಯ ಕಳೆದು ಉದ್ಯೋಗವನ್ನರಸಿ ನಗರಗಳಿಗೆ ವಲಸೆ ಬರುವಂಥ ಅನಿವಾರ್ಯತೆ ಕಳೆದ ಶತಮಾನದಲ್ಲಿತ್ತು. ಕಾರಣ – ಹಳ್ಳಿಯ ಬಾಳ್ವೆ ದುರ್ಭರ, ಕೈಗಾರಿಕೀಕರಣದಿಂದಾಗಿ ನಗರಗಳಲ್ಲಿ ಉದ್ಯೋಗದ ಭರವಸೆ ಮತ್ತು ಆಕರ್ಷಣೆ. ಒಂದು ಪೀಳಿಗೆಯ ಮಟ್ಟಿಗೆ ಅದು ಯಶಸ್ವಿಯೂ ಆಗಿತ್ತು. ನಗರಗಳಿಗೆ ಕೊಟ್ಟಷ್ಟು ಪ್ರಾಮುಖ್ಯತೆ ಗ್ರಾಮಗಳಿಗೆ ಕೊಟ್ಟಿದ್ದರೆ ಬಹುಷಃ ಚಿತ್ರಣವೇ ಬದಲಾಗುತ್ತಿತ್ತು. ಬಾಳಿನ ಬಿಂಬವೇ ಬರಹ ಎಂಬ ಲೇಖಕರ ಮಾತು ಸತ್ಯ. ನಮ್ಮ ಸುತ್ತಲ ಸಮಾಜದಲ್ಲಿನ ವಿವಿಧ ಆಚರಣೆ, ಜೀವಿಸುವ ವಿಧಾನ ಎಲ್ಲ ಕಾಲದಲ್ಲೂ ಸಾಹಿತ್ಯದಲ್ಲಿ ಮೂಡಿಬಂದು ದಾಖಲಾಗಿದೆ. ಬಹು ಪ್ರಾಚೀನ ಕಾಲದಲ್ಲದು ಮೌಖಿಕವಾಗಿ ಕಾವ್ಯರೂಪದಲ್ಲಿತ್ತು, ಉತ್ಪ್ರೇಕ್ಷಿಸಿ ಹೇಳಿದ್ದೂ ಉಂಟು. ಏಕೆಂದರೆ ಕವಿಗಳಿಗೆ ರಂಜನೆ ಮುಖ್ಯ. ಹೀಗೆ ಮಾನವನ ಬದುಕಿನ ಹೆಜ್ಜೆಗಳನ್ನು ಅನುಸರಿಸಿ, ಸಾಕಷ್ಟು ಅಧ್ಯಯನ ಮಾಡಿ ಇಲ್ಲಿನ ವಿಶ್ಲೇಷಣಾತ್ಮಕ ಲೇಖನಗಳನ್ನು ಬರೆದವರು ಅಧ್ಯಾಪಕರಾದ ಡಾ|| ರಾಮಲಿಂಗಪ್ಪ ಟಿ. ಬೇಗೂರು. ಸ್ವಕೀಯ - ಪರಕೀಯ ಎನ್ನುವಂಥ ನೆಲೆಗಳು ಪರಸ್ಪರ ಒಂದನ್ನು ಇನ್ನೊಂದು ಬೆರಳೆತ್ತಿ ತೋರಿಸುತ್ತವೆ. ಏಕತೆ ಎನ್ನುವುದು ವಿಭಿನ್ನ ಸಂಸ್ಕೃತಿ ಇರುವಲ್ಲಿ ಅಸಾಧ್ಯಯ ಮಾತು. ಒಂದೊಂದು ಕಾಲಕ್ಕೆ ಒಂದೊಂದು ಸಂಸ್ಕೃತಿ ಮೇಲುಗೈ ಪಡೆದಿದೆ. ಚರಿತ್ರೆ, ಪುರಾಣ, ಜಾನಪದ, ರಾಜಕಾರಣ, ಸಾಹಿತ್ಯದ ಅನುಸಂಧಾನ ಇವುಗಳಲ್ಲಿ ಹಾದು-ಹೊರಳಿ ಇಲ್ಲಿನ ಲೇಖನಗಳು ಸಿದ್ಧಗೊಂಡಿವೆ. ಎಲ್ಲವನ್ನೂ ಹೊಸನೋಟದಿಂದ ಕಂಡಿರುವುದು ಇಲ್ಲಿನ ವಿಶೇಷ. ದೃಷ್ಟಿಕೋನ ಭಿನ್ನವಾದಷ್ಟೂ ಆಕೃತಿಗಳು ಬದಲಾಗುತ್ತವೆ.

**ನವಚಾರಿತ್ರಿಕವಾದ**

ಡಾ|| ಸಿ. ಆರ್. ಗೋವಿಂದರಾಜು

**ಪುಟ : vi + ೪೪** **ಬೆಲೆ :** ರೂ. ೧೦

**ಪ್ರಸಾರಾಂಗ,** ನಿರ್ದೇಶಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಇತ್ತೀಚಿನ ವರ್ಷಗಳಲ್ಲಿ ಬಹಳಷ್ಟು ಕೃತಿಗಳನ್ನು ಹೊರ ತರುತ್ತಿದೆ. ಕನ್ನಡ-ಕನ್ನಡಿಗ-ಕರ್ನಾಟಕ ಎಂಬ ಅಭಿಮಾನದಿಂದ, ಕನ್ನಡ ಸಂಸ್ಕೃತಿಯನ್ನು ಬೆಳೆಸಬೇಕೆಂಬ ಉದ್ದೇಶದಿಂದ ಚಿಗುರಿ ಅಸ್ತಿತ್ವಕ್ಕೆ ಬಂದು ಇದೀಗ ಕಾರ್ಯೋನ್ಮುಖವಾಗಿ ಹತ್ತು ಹಲವು ಯೋಜನೆಗಳನ್ನು ಸಿದ್ಧಪಡಿಸಿ ಕಾರ್ಯಗತಗೊಳಿಸುತ್ತಿದೆ. 'ಮಂಟಪಮಾಲೆ'ಯ ಕಿರುಹೊತ್ತಿಗೆಗಳು ಕಡಿಮೆ ಬೆಲೆಯಲ್ಲಿ ಸಾಮಾನ್ಯ ಜನರ ಪ್ರಾಥಮಿಕ ತಿಳುವಳಿಕೆ ಹೆಚ್ಚಿಸುವ ಸಲುವಾಗಿ ರೂಪುಗೊಂಡಿದ್ದು ಇದು ಈ ಮಾಲೆಯ ೧೬೩ನೇ ಪುಸ್ತಕವಾಗಿದೆ. ಹೊಸ ಹೊಸ ಜ್ಞಾನಶಾಖೆ ಮತ್ತು ಪರಿಕಲ್ಪನೆಗಳನ್ನು ಪರಿಚಯಿಸುತ್ತಿರುವ ಪ್ರಸಾರಾಂಗವು ಇದೀಗ ವಸಾಹತೋತ್ತರ ಚಿಂತನೆಗಳಲ್ಲೊಂದಾದ ನವಚಾರಿತ್ರಿಕವಾದವನ್ನು ನಿಮ್ಮ ಮುಂದಿಟ್ಟಿದೆ. ಮೂಲತಃ ಪಾಶ್ಚಾತ್ಯ ಪರಿಕಲ್ಪನೆಯಾಗಿ ಕಳೆದ ಶತಮಾನದ ಕೊನೆಯ ವೇಳೆಗೆ ಅದು ಸ್ಟೀಫನ್ ಜೆ. ಗ್ರೀನ್ ಬ್ಲಾಟ್ ಅವರಿಂದ ರೂಪುಗೊಂಡಿತು. ಅದನ್ನು ಅಂಗೀಕರಿಸಲು ಚಿಂತಕರನೇಕರು ಹಿಂದೇಟುಹಾಕಿದ್ದೂ ಇದೆ. ನವಚಾರಿತ್ರಿಕವಾದದ ಬಗ್ಗೆ ವಿದ್ವಾಂಸರಲ್ಲಿ ಇನ್ನೂ ದ್ವಂದ್ವಗಳು ಸಾಕಷ್ಟಿವೆ. ನಮ್ಮ ಭಾರತದ, ಕರ್ನಾಟಕದ ಸಂದರ್ಭದಲ್ಲಿ ಅದಿನ್ನೂ ಬಂದು ತಲುಪಿಲ್ಲದ ಅತಿಥಿ. ಅಲ್ಲಿ-ಇಲ್ಲಿ ಕೆಲವು ಪತ್ರಿಕೆಗಳಲ್ಲಿ ಮಾತ್ರ ಪ್ರಸ್ತಾಪ ಇರುವ ನವಚಾರಿತ್ರಿಕವಾದದ ಬಗ್ಗೆ ಯಾವುದೇ ಅಧ್ಯಯನಗಳಿನ್ನೂ ಆಗಿಲ್ಲ. ಈ ಕಿರುಹೊತ್ತಿಗೆ ಅದಕ್ಕೊಂದು ಪ್ರವೇಶವನ್ನೊದಗಿಸಬಹುದು.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಒಂಭತ್ತನೆಯ ತಿರುಮುರೈ** (ಶೈವ ಪವಿತ್ರ ಗ್ರಂಥ)
ಅನು : ಪ್ರೊ|| ಕೆ. ಮಲರ್‌ವಿಳಿ
**ಪುಟ :** ೧೧೨ **ಬೆಲೆ :** ರೂ. ೫೦
**ಜ್ಞಾನ ಸಂಬಂಧಂ ಪದಿಪ್ಪಗಂ,** ಧರ್ಮಪುರ ಆಧೀನಂ, ಮಯಿಲಾಡುದುರೆ - ೬೦೯೦೦೧ (ಭಾರತ)

**ಕ್ರಾಂತಿವೀರ ಶ್ರೀ ಮಹಾದೇವಪ್ಪ ಪಟ್ಟಣ**
ಶ್ವೇತಾನರಗುಂದ
**ಪುಟ :** ೯೦ **ಬೆಲೆ :** ರೂ. ೧೦೦
**ಶಾರದ ಪ್ರಕಾಶನ,** ಪ್ಲಾಟ್ ನಂ. ೮೨, ಬುಡಾ ಕಾಂಪ್ಲೆಕ್ಸ್ ಎದುರು, ದೂರದರ್ಶನ ನಗರ, ಬೆಂಗಾವಿ - ೫೯೦೦೦೧

**ಭಾಲಚಂದ್ರ ಘಾಣೇಕರ ಜನ್ಮಶತಮಾನ ದಿನ**
ವಿವಿಧ ಲೇಖಕರು
**ಪುಟ :** ೮೬ **ಬೆಲೆ :** ನಮೂದಿಸಿಲ್ಲ
**ಘಾಣೇಕರ ಅಭಿಮಾನಿ ಬಳಗ ಸಮಾಜ ಪುಸ್ತಕಾಲಯ,** ಶಿವಾಜಿ ಬೀದಿ, ಧಾರವಾಡ - ೫೮೦೦೦೧

**ಸುಹಾಸ** (ಹಾಸ್ಯಲೇಖನಗಳ ಸಂಗ್ರಹ) ವಿಜಯಾ ಶ್ರೀಧರ್
**ಪುಟ :** ೧೭೨ **ಬೆಲೆ :** ರೂ. ೯೦
**ಸ್ನೇಹಾ ಪಬ್ಲಿಷಿಂಗ್ ಹೌಸ್,** ೧೩೮, ೭ನೇ 'ಸಿ' ಮುಖ್ಯರಸ್ತೆ ಹಂಪಿನಗರ (ಆರ್.ಪಿ.ಸಿ. ಲೇಔಟ್), ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦ ೧೦೪

**ಕಾದಂಬರಿ ಸಂಚಯ** ಡಾ|| ಬಿ. ಪ್ರಭಾಕರ ಶಿಶಿಲ
**ಪುಟ :** ೫೭೬ **ಬೆಲೆ :** ರೂ. ೩೪೦

**ಯಕ್ಷಗಾನ ಕಲಾವಲೋಕನ** ಡಾ|| ಬಿ. ಪ್ರಭಾಕರ ಶಿಶಿಲ
(ಯಕ್ಷ ಶಿಕ್ಷಣ ಪಠ್ಯ ಮತ್ತು ಆಕರಗ್ರಂಥ)
**ಪುಟ :** ೧೬೮ **ಬೆಲೆ :** ರೂ. ೧೦೦

**ನಿಸರ್ಗ ನಿನಾದ** (ಚಾರಣ ಮತ್ತು ಬೈಸಿಕಲ್ಲು ಸಾಹಸಗಳು)
ಡಾ|| ಬಿ. ಪ್ರಭಾಕರ ಶಿಶಿಲ
**ಪುಟ :** ೧೪೪ **ಬೆಲೆ :** ರೂ. ೯೦

**ಮೂಡದ ಕೆಂಪು ಕಿರಣ**
(೧೮೩೭ರ ಅಮರ ಸುಳ್ಯ ರೈತ ಬಂಡಾಯ)
ಡಾ|| ಬಿ. ಪ್ರಭಾಕರ ಶಿಶಿಲ
**ಪುಟ :** ೨೩೨ **ಬೆಲೆ :** ರೂ. ೧೪೦

**ಎಂಟು ನಂಟು** (ಮಾನವೀಯ ಸಂಬಂಧಗಳು)
ಡಾ|| ಬಿ. ಪ್ರಭಾಕರ ಶಿಶಿಲ
**ಪುಟ :** ೧೬೮ **ಬೆಲೆ :** ರೂ. ೧೦೦

ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ರಾಜ್ ಪ್ರಕಾಶನ,** ನಂ. ೮೩, ಕೆ.ಎಸ್.ಆರ್.ಟಿ.ಸಿ. ಲೇಔಟ್, ಹನುಮಂತನಗರ, ಬನ್ನಿಮಂಟಪ ಮೈಸೂರು - ೫೭೦೦೧೫



## ಪರದಾಟ

ಜಲ ಪ್ರಳಯದಿಂದ
ಹಾಳಾದ ಹಳ್ಳಿಯಲಿ
ಹದ್ದು ಕಾಗೆಗಳ ಚೆಲ್ಲಾಟ
ಹರಿದು ಬಂದ
ಪರಿಹಾರದಿಂದ
ಕನಸಿನ ಹೊಸೂರಿನಲ್ಲಿ
ನೆಲೆಗಾಗಿ ಜನಗಳ ಪರದಾಟ.

ರವಿ ಸೋ. ದೇವರಡ್ಡಿ
ಹೇಮರಡ್ಡಿ ಮಲ್ಲಮ್ಮ ನಗರ, ಮುಂಡರಗಿ, ಗದಗ ಜಿಲ್ಲೆ

■ ಬಿ. ಪಿ. ಶಿವಾನಂದ ರಾವ್




ಒಳ್ಳೆಯ ಅಸಲಿ ವಸ್ತುಗಳ ಬಳಕೆಗಾಗಿ ಲಕ್ಷಾಂತರ-ಕೋಟಿಗಟ್ಟಲೆ ಜಾಹೀರಾತಿಗಾಗಿ ಖರ್ಚು ಮಾಡಿ ಪ್ರಚಾರಗೊಳಿಸುವ (ಈಗೀಗ ಜಾಹೀರಾತು ಚಿತ್ರ ವಿನ್ಯಾಸ-ಸಾಹಿತ್ಯ-ಸಾಧನ ಸಿದ್ಧಪಡಿಸಿ ಪೂರೈಸುವ ದೊಡ್ಡ ದೊಡ್ಡ ಏಜನ್ಸಿಗಳಿವೆ!) ಅಗತ್ಯವಾದರೂ ಏನಿದೆ ಆ ಸರಕು ಉತ್ಪಾದಿಸುವ ಈ ಕಂಪೆನಿಗಳಿಗೆ, – ಎಂಬ ಮೂಲ ಪ್ರಶ್ನೆ ಓದುಗರಿಗೆ ಚಿಂತಕರಿಗೆ ಉದ್ಭವಿಸುವುದು ಸಹಜವೇ. ಪ್ರಶ್ನೆ ಅದಲ್ಲ! ಈಗ ಯಾವುದೇ ಸರಕು ಇಂತಿಷ್ಟು ಅವಧಿಯಲ್ಲಿ ತಯಾರಿಸಿದ್ದನ್ನು ಜಾಹೀರಾತುಗೊಳಿಸಿ ಮಾರುಕಟ್ಟೆಗೆ ತುರುಕುತ್ತಾರೆ. ಸ್ಪರ್ಧಾ ಜಗತ್ತಿನಲ್ಲಿ ಆ ಸರಕು ಬೇರೆ ಕಂಪೆನಿಗಳೂ ಅದೇ ಗುಣಾಂಶದ ಸರಕನ್ನೂ ದಬ್ಬಿರುತ್ತಾರಲ್ಲ, ಹಾಗಾಗಿ ಯಾವ ಕಂಪನಿ (ಅಸಲಿ) ಇರುತ್ತದೆಯೋ, ಅವರಿಗೆ ಆರ್ಥಿಕ ಪೆಟ್ಟು ಬೀಳುತ್ತದೆ. ಏಕೆಂದರೆ ಮಾರ್ಕೆಟ್‌ನಲ್ಲಿ ಅಸಲಿ ತರಹದ್ದೇ ಮುಖವಾಡ ತೊಡಿಸಿದ ನಕಲಿ ಮಾಲು ಖರ್ಚಾಗಿಹೋಗುವುದೂ ಕಾರಣವಾಗಿರುತ್ತದಲ್ಲ, ದರವೂ ಕಮ್ಮಿ, ಹಾಗಾಗಿ! ಜಾಹೀರಾತಿನ ಅಬ್ಬರಕ್ಕೆ ವ್ಯಾಪಾರಿಗಳೂ ಅಧಿಕ ಕಮಿಷನ್ ಆಸೆಗಾಗಿ ತಾಳ ಹಾಕಿ ಕುಣಿಯುವುದೂ ಕಾರಣವಾಗಿದೆ. ಬಿಕರಿಯಾಗದೆ ಉಳಿದ ಮಾಲನ್ನು ಗಿರಾಕಿಗಳ ತಲೆಗೆ ಕಟ್ಟಲಿಕ್ಕಾಗಿಯೇ ಪುನಃ ತಮ್ಮ ಮೊದಲ ದರದಲ್ಲಿ ರಿಯಾಯ್ತಿ, ಗಿಫ್ಟ್ ಅಥವಾ ಲಾಟರಿ ಮುಂತಾಗಿ ಮತ್ತೆ ಭರ್ಜರಿ ರಂಗುರಂಗಿನ ಜಾಹೀರಾತು ಪ್ರಕಟಿಸಿ ಅಂತೂ ಹಳೇ ಮಾಲು ಖಾಲಿ ಮಾಡೋ ಅದ್ಭುತ ದಂಧೆಗೆ 'ಜಾಹೀರಾತು' ಪ್ರಾಣವಾಯು ಆಗಿರುತ್ತದೆ. ಇದು ವ್ಯಾಪಾರೀ ಗುಟ್ಟಿನ ಮೂಲ ಮಂತ್ರ! ನಕಲಿ ಎಂಬುದನ್ನು ನಗುತ್ತ ನಗುತ್ತ ನೋಡುತ್ತ ನಲಿಯುತ್ತ ಕಲಿ ಎಂಬಂತಾಗಿರುವ ವರ್ತಮಾನದ ಪರಿಸ್ಥಿತಿಗೆ ಭ್ರಷ್ಟಾಚಾರ-ಲಂಚ-ಶೋಷಣೆ-ರಾಜಕಾರಣ ಕೃಪೆ ಮುಂತಾಗಿ ನೀರು-ಗೊಬ್ಬರ-ಮಣ್ಣು ಸಿಗುತ್ತದಲ್ಲ, ಇದಕ್ಕೆ ಸಾವೇ ಇಲ್ಲ!. ಹೀಗಾಗಿ ನಿಧಾನ ವಿಷವಾಗಿ ಕೊಲ್ಲುವ ಈ 'ಜಾಹೀರಾತು' ನಮ್ಮ ನಂಬಿಕೆ-ಸಮಯ ಪ್ರಜ್ಞೆ-ತರ್ಕಬದ್ಧತೆ-ಶೋಧನಾ ಬುದ್ಧಿಗೆ ಬಗ್ಗುವ ಪ್ರಚಾರ ವಸ್ತು ಅಲ್ಲ ಎಂಬುದಂತೂ ಕಟುಸತ್ಯ ಎನಿಸುತ್ತಿದೆ. ಸಂತೋಷವೆಂದರೆ ಜಾಹೀರಾತಿಲ್ಲದೆ ಆಧುನಿಕ ಜೀವನ ಶೈಲಿಗೆ ಸ್ವಾರಸ್ಯವೂ ಇಲ್ಲ, ಅರ್ಥವೂ ಇಲ್ಲ! ಏಕೆಂದರೆ ಇದು ಜಾಹೀರಾತು ಯುಗ!

**ಜಾ**ಹೀರಾತು ಎಂದರೆ ಜಗಜ್ಜಾಹೀರು ಮಾಡುವುದು ಎಂದೇ ಅರ್ಥ. ಈ ಜಾಹೀರಾತು ನಮ್ಮ ಸುತ್ತಣ ಜನರಿಗೆ - ಸಮಾಜಕ್ಕೆ ಉತ್ಪಾದಿಸಿದ ಯಾವುದೇ ಬಗೆಯ ವಸ್ತುವಿನ ಬಗೆಗೆ ಅದರ ಮಹತ್ತು - ಮೆಹನತ್ತು, ರೂಪ - ಗುಣಾಂಶ, ಉಪಯೋಗಗಳ ಬಗೆಗೆ 'ತಿಳುವಳಿಕೆ' ಕೊಡುವ ಕ್ರಿಯೆ. ಅಂಗಡಿಗೆ ಹೋದರೆ ಹೊಸ ವಸ್ತುವನ್ನು ನಮ್ಮೆದುರಿಟ್ಟು, ''ಇದು ಹೊಸ ಪ್ರಾಡಕ್ಟು ಸರ್... ಚೆನ್ನಾಗಿದೆ... ರೇಟು ಕಮ್ಮಿ ಇದೆ... ಇದನ್ನು ಪರ್ಚೇಸ್ ಮಾಡಿ... ಈ ವಸ್ತುಗೆ ಬೇರೆ ಗಿಫ್ಟ್ ಪುಕ್ಕಟೆ ಕೊಡ್ತಿದೆ ಕಂಪೆನಿ'' ಎಂದು ನಮ್ಮನ್ನು ಆ ವಸ್ತುಗಳನ್ನು ಖರೀದಿಸಲು ಅಂಗಡಿಯವನು ಪ್ರಲೋಭಿಸುತ್ತಾನೆ, ಅರ್ಥಾತ್ ಪುಸಲಾಯಿಸುತ್ತಾನೆ. ಆಗೆಂತಹ ಇಕ್ಕಟ್ಟಿನ ಪ್ರಸಂಗ ಎದುರಾಗುತ್ತೆ ನೋಡಿ, 'ರೇಟೂ ಕಮ್ಮಿ... ಹೊಸ ವಸ್ತು ಗಿಫ್ಟ್ ಬೇರೆ... ಒಂದ್ಸಲ ಪ್ರಯೋಗಾರ್ಥವಾಗಿ ಯಾಕೆ ಖರೀದಿ ಮಾಡಬಾರದು' ಎನ್ನಿಸುತ್ತದೆ, ಆದರೂ ಹಿಂದೇಟು ಹಾಕುತ್ತೇವೆ.

ಏಕೆಂದರೆ ಆ ವಸ್ತುವಿನ ಬಗೆಗೆ ಪತ್ರಿಕೆ-ರೇಡಿಯೋ-ಟ.ವಿ. ಕರಪತ್ರ, ರಸ್ತೆ ಬದಿ ಬೋರ್ಡು, ಯಾವುದೂ ಜಾಹೀರಾತು 'ನೋಡಿರಲ್ಲ, ಕೇಳಿರಲ್ಲ, ಅಥವಾ ಅವರಿವರು ಹೇಳಿರಲ್ಲ ಎಂತಾದಾಗ ಗುಣಮಟ್ಟ ಹೇಗೇ ಇರಲಿ, ಆ ಹೊಸ ವಸ್ತುವಿನ ಖರೀದಿಯ ಬಗೆಗೆ ನಮಗೆ ಆಸಕ್ತಿ ಉಂಟಾಗುವುದಿಲ್ಲ! ಇದರ ಮಥಿತಾರ್ಥ ಇಷ್ಟೆ. ನಾವು 'ಜಾಹೀರಾತು'ಗಳ ವ್ಯಸನಿಗಳಾಗಿಬಿಟ್ಟಿದ್ದೇವೆ. ''ಈ ವಸ್ತುವಿನ ಜಾಹೀರಾತು ನೋಡಿಲ್ಲ... ಕೇಳಿಲ್ಲ... ಬೇಡಾ'', ಅನ್ನುವಷ್ಟು ನಮ್ಮ ಚಿತ್ತವು ಸಿದ್ಧಗೊಂಡೇ ಬಿಡುತ್ತದೆ. ಹೀಗೇಕೆ ವ್ಯಕ್ತಿ ಜಾಹೀರಾತು ಪ್ರಚಾರಕ್ಕೆ ಶರಣಾಗಿಬಿಟ್ಟಿದ್ದಾನೆಂದರೆ ಈ ಜಾಹೀರಾತು ಪ್ರಪಂಚವೇ ಅಂಥದ್ದು.

ಇಷ್ಟೆಲ್ಲ ಜಾಹೀರಾತುಗಳ ಉದ್ದೇಶ್ಯವೇ 'ಪೈಪೋಟಿ'. ಯಾವುದೇ ಉತ್ಪಾದನಾ ಸಂಸ್ಥೆ ತಾನು ಉತ್ಪಾದಿಸಿದ ವಸ್ತುಗಳನ್ನು ಆದಷ್ಟು ಬೇಗ ಮಾರುಕಟ್ಟೆಯಲ್ಲಿ ಬಿಕರಿಯಾಗಿ ಮತ್ತೆ ಅಷ್ಟೇ ವೇಗದಲ್ಲಿ 'ಬೇಡಿಕೆ' ಬರಬೇಕು ಎಂಬ ಸ್ಪರ್ಧೆಯಿಂದ 'ತಾ ಮುಂದು, ನೀ ಮುಂದು' ಎಂದು ಸ್ಪರ್ಧೆ ನಡೆಸುತ್ತದೆ. ಈ ಧಾವಂತ ಹಾಗೂ ಬೇಡಿಕೆ ಸೃಷ್ಟಿಸುವ ತಂತ್ರವೇ 'ಜಾಹೀರಾತು' ಎಂಬ ಮೋಹಕಾಸ್ತ್ರ! ಈ ಜಾಹೀರಾತಿನ, ಮೋಹಕಾಸ್ತ್ರಕ್ಕೆ ಬಲಿ ಬೀಳದಿರುವ ವ್ಯಕ್ತಿ ಯಾರಿದ್ದಾರೆ ಭುವಿಯಲ್ಲಿ!' ಎಂಬಷ್ಟು 'ಸರ್ವಂ ಪ್ರಚಾರ ಪ್ರಿಯಂ' ಆಗಿಹೋಗಿದೆ ವಿಶ್ವವ್ಯಾಪಾರ!

ಈ ಜಾಹೀರಾತು ಬರಿಯ ಉತ್ಪಾದನಾ ವಸ್ತುಗಳಿಗೆ ಖಂಡಿತಾ ಸೀಮಿತವಾಗಿಲ್ಲ... ನಾವು ತಿಂದುಣ್ಣುವ ವಸ್ತುಗಳಿಗೆಲ್ಲ ಪ್ರಚಾರ ಬಯಸುತ್ತೇವೆ. ಈ ಪ್ರಚಾರ ಬರಿಯ ಬಿಸ್ಕತ್ತು, ಪೇಸ್ಟ್, ಸಾಬೂನು, ಬ್ಲೇಡು, ಬ್ರಷ್, ತಂಪು ಪಾನೀಯಗಳು, ಎಣ್ಣೆಯಂತಹ ಕಡಿಮೆ ಬೆಲೆಯ ವಸ್ತುಗಳಿಗೆ ಮಾತ್ರ ಅಂದುಕೊಳ್ಳಬೇಡಿ.

ಸಾವಿರಾರು - ಲಕ್ಷಾಂತರ ರೂಪಾಯಿ ಬೆಲೆಬಾಳುವ ಯಂತ್ರೋಪಕರಣಗಳು, ವಿದ್ಯುತ್ ಚಾಲಿತ ಯಂತ್ರಗಳು, ಕಾರು, ಜೀಪು, ಟ್ರಕ್ಕು, ಫ್ಯಾನ್, ಮೊಬೈಲ್, ಫ್ರಿಜ್ಡ್, ಮಿಕ್ಸರ್, ಬಸ್ಸು, ಟ್ರ್ಯಾಕ್ಟರ್, ಬಿತ್ತನೆ ಯಂತ್ರ, ಸೈಕಲ್, ಮೋಟಾರ್ ಸೈಕಲ್, ಸ್ಕೂಟಿ, ರಿಕ್ಷಾ – ಮುಂತಾಗಿ. ಈಗ ವಿಮಾನ ಪ್ರಯಾಣವನ್ನು ಸುಖಮಯಗೊಳಿಸುವ ವಿಮಾನಗಳ ಜಾಹೀರಾತು ಸಹ !'

ಈ ಜಾಹೀರಾತು ಎಂಬ ಮೋಹಕಾಸ್ತ್ರಕ್ಕೆ ಬಲಿ ಬೀಳದವರೇ ಇಲ್ಲ. ದಿನಗಳೆದಂತೆ ಹಣಕಾಸಿನ ವ್ಯವಹಾರ ನಡೆಸುವ ಸಂಸ್ಥೆಗಳು, ಬ್ಯಾಂಕುಗಳು, ಸೊಸೈಟಿಗಳು, ಚಿಟ್‌ಫಂಡ್ ಕಂಪೆನಿ, ಇನ್ಶೂರೆನ್ಸ್, ಸರ್ಕಾರದ ಯೋಜನೆಗಳ ಪ್ರಚಾರ, ಫೈನಾನ್ಸ್ ಕಂಪೆನಿಗಳೂ, ಬಂಡವಾಳ ಹೂಡಿಕೆಯ ಯೋಜನಾ ಸಂಸ್ಥೆಗಳು ಗೃಹನಿರ್ಮಾಣ ಸಂಸ್ಥೆ– ಇಂತಹ ನೂರಾರು ಸಂಘ ಸಂಸ್ಥೆಗಳೂ ತಮ್ಮ ವ್ಯವಹಾರ ವೃದ್ಧಿಯ ಉದ್ದೇಶಕ್ಕಾಗಿ ಪ್ರಚಾರಕ್ಕೆ ಸಮೂಹ ಮಾಧ್ಯಮಗಳಿಗೆ ಮುಗಿಬೀಳುತ್ತವೆ. ಆಕರ್ಷಕ ಬಡ್ಡಿ ನೀಡಿ ಹೂಡಿಕೆದಾರರನ್ನು ಬಲೆಯಲ್ಲಿ ಬೀಳಿಸಿಕೊಳ್ಳುವ ಹುನ್ನಾರದಲ್ಲಿ ಬಡ್ಡಿ ರಿಯಾಯ್ತಿ, ಗಿಫ್ಟ್, ಯಂತ್ರೋಪಕರಣ, ಸೈಟು ವಿತರಣೆ, ವಿದೇಶಗಳಲ್ಲಿ ನೌಕರಿ ಕೊಡಿಸಿ ಲಕ್ಷಾಧೀಶರನ್ನಾಗಿ ಮಾಡುವುದಾಗಿ ಜಾಹೀರಾತು ನೀಡಿ ಹಣ ಸಂಗ್ರಹಿಸಿ ನಿರುದ್ಯೋಗಿಗಳಿಗೆ 'ಇಂಟರ್‌ವ್ಯೂ' ಎಂಬ ನಾಟಕ ನಡೆಸಿ ನಂತರ ನಾಪತ್ತೆ ಆಗುವ ಪ್ರಚಂಡ ವ್ಯಕ್ತಿ/ಸಂಸ್ಥೆಗಳು – ಹೀಗೆ ಅನೇಕ ತಂತ್ರ ಕೌಶಲ್ಯ ಮುಂದಿಟ್ಟು, ಸ್ಪರ್ಧೆಗಿಳಿದು 'ಜಾಹೀರಾತು' ನೀಡಿ ಹಣ ಸಂಗ್ರಹಣೆಯ ಅದ್ಭುತ ದಂಧೆಗೆ ತೊಡಗುವ ದಂಧಾ ಸಂಸ್ಥೆಗಳಿಗೇನೂ ಕೊರತೆ ಇಲ್ಲ.

ಬಾಯಲ್ಲಿ ನಿರೂರಿಸುವ ಬಂಗಾರ-ವಜ್ರ – ಮುಂತಾದ ಬೆಲೆಯುಳ್ಳ ವಸ್ತು-ಒಡವೆ ಮಾರುವ ವ್ಯಾಪಾರಿಗಳು ಜಾಹೀರಾತಿಲ್ಲದೆ ಬದುಕುವುದೇ ಕಷ್ಟ ಎಂಬಷ್ಟು ಇಂದು ಪರಸ್ಪರ ಜಾಹೀರಾತು ಸ್ಪರ್ಧೆ ಏರ್ಪಡಿಸುತ್ತಿದೆ. ಆರೋಗ್ಯಕ್ಕೆ ಸಂಬಂಧಿಸಿದ್ದು ಮತ್ತೆ ವಿಚಿತ್ರದ್ದು. 'ಆರೋಗ್ಯ ರಕ್ಷಣೆ' ಅಂದಾಕ್ಷಣ ನಮ್ಮ ಕಿವಿ ತೆಗೆದುಕೊಳ್ಳುತ್ತದೆ. ಆರೋಗ್ಯ ಭಾಗ್ಯ ಭುವಿಯಲ್ಲಿ ಎಲ್ಲ ಭಾಗ್ಯಕ್ಕಿಂತ ದೊಡ್ಡದು. ಏಕೆಂದರೆ ಆರೋಗ್ಯ ಇದ್ದರೆ ಜಗತ್ತಿನೊಡನೆ ನಮ್ಮ ಅಸ್ತಿತ್ವದ್ದೇ ಸಂಪರ್ಕ ! ಹೀಗಾಗಿ ಔಷಧಿ ತಯಾರಿಸುವ ಕಂಪೆನಿಗಳು ಗಲ್ಲಿಗೆಂಟು ಎಂಬಂತೆ ಸ್ಥಾಪಿತಗೊಂಡಿವೆ ! ಆರೋಗ್ಯ ಸಂಬಂಧೀ ಮಾತ್ರೆ, ಗುಳಿಗೆ, ಇಂಜೆಕ್ಷನ್, ಸಾಧನಗಳು, ರಕ್ಷಾಕವಚಗಳು, ದೇಹದ ವಿವಿಧ ಅಂಗಾಂಗಳನ್ನು ಪರೀಕ್ಷಿಸುವ ಎಕ್ಸ್‌ರೇ, ಸ್ಕ್ಯಾನಿಂಗ್, ಶಸ್ತ್ರಕ್ರಿಯಾ ಸಂಬಂಧಿ ನೂರೆಂಟು ವಿಧದ ಯಂತ್ರಗಳು, ಅವುಗಳ ನಿರ್ವಹಣೆ ಇತ್ಯಾದಿ ಪ್ರಚುರ ಪಡಿಸಲಿಕ್ಕೆಂದೇ ತಯಾರಿಕಾ ಕಂಪೆನಿಗಳು ಏಜಂಟರ ಮೂಲಕ ಪ್ರಚುರ ಪಡಿಸಿ ಪೂರೈಸುತ್ತವೆ. ದಿನಪತ್ರಿಕೆ, ನಿಯತಕಾಲಿಕ ಪತ್ರಿಕೆಗಳೂ, ಬುಲೆಟಿನ್, ಮ್ಯಾಗಜ಼ಿನ್‌ಗಳ ಮೂಲಕ ನವಶೋಧ ಔಷಧಿ, ರೋಗಪತ್ತೆ ಯಂತ್ರ, ಮುಂತಾಗಿ ಜಾಹೀರಾತನ್ನು ಫೋಟೊ ಸಹಿತ ಪ್ರಕಟಿಸಿಯೇ ಪ್ರಚುರಪಡಿಸುವ ಪ್ರಚಾರಾಂಗವನ್ನೇ ಸೃಷ್ಟಿಮಾಡಿಕೊಂಡಿದ್ದಾರೆ. ಅದಕ್ಕಾಗಿ ಆಡಿಯೊ, ವೀಡಿಯೋ, ಸಿಡಿಗಳನ್ನು, ಕ್ಯಾಮೆರಾಗಳನ್ನು ಬಳಸಿಕೊಳ್ಳುತ್ತಾರೆ. ಇನ್ನು ಬಟ್ಟೆ ಭಾಗ್ಯದ ಕಥೆ ನೋಡಿರಿ, ಹೆಂಗಸರ ಒಳ ಉಡುಪುಗಳ ಜೊತೆ ಮೈ ಮುಚ್ಚದಿರುವ (ನವಿರೇಳಿಸುವ) ಅಥವಾ ಮುಚ್ಚಿದಂತೆ ಕಾಣುವ, ಆದರೆ ಬಿಚ್ಚಿಕೊಂಡಿರುವ (ಅಪರೂಪಕ್ಕೆ ಉಲ್ಟಾನೂ ಉಂಟು!) ಬನಿಯನ್, ಫ್ರಾಕ್, ಪ್ಯಾಂಟ್, ಷರ್ಟ್, ಸೀರೆ, ಜೀನ್ಸ್, ಚೂಡಿದಾರ, ಬ್ರಾ, ಚಡ್ಡಿ, (ಪಾರದರ್ಶಕ) ಮುಂತಾಗಿ ಎಲ್ಲ ವಯೋಮಾನದವರಿಗೆ ಒಗ್ಗುವ ಉಡುಪು ಪ್ರಚುರಗೊಳಿಸಲು ನಾನಾ ವಿಧದಲ್ಲಿ 'ಜಾಹೀರಾತು' ನೀಡಿ ತಮ್ಮ ಮಾಲಿಗೆ ಗಿರಾಕಿಗಳನ್ನು ಚುಂಬಕ ಶಕ್ತಿಯಂತೆ ಆಕರ್ಷಿಸುತ್ತಾರೆ. ಇದರ ಪ್ರಚಾರ ತಂತ್ರಗಾರಿಕೆಗಾಗಿ ಲಕ್ಷಾಂತರ-ಕೋಟ್ಯಂತರ ರೂಪಾಯಿ ವ್ಯಯಿಸಿ ನಂತರ ಪರೋಕ್ಷವಾಗಿ ಆ ಖರ್ಚನ್ನು ತಮ್ಮ ಉತ್ಪಾದಿತ ವಸ್ತುಗಳ ಮೇಲೆ ಲೇಪಿಸಿ ಅರ್ಥಾತ್ ದರ ಹೆಚ್ಚಿಸಿ ಮಾರುವ ಕಸರತ್ತಿನ ಕೌಸಲ್ಯ. ಅದರಲ್ಲೂ ಸ್ಪರ್ಧೆ !.



ಅಕ್ರಮ ಗಣಿಗಾರಿಕೆಯಲ್ಲಿ ಇವರದ್ದು ಎತ್ತಿದ "ಕೈ" ಸಾರ್.. ಇವರ ಹೆಸರೊಂದು ಸೇರಿಸಿಬಿಡಿ ಸಾರ್.

ಹೀಗೆ ಜಾಹೀರಾತಿಲ್ಲದೆ ಪ್ರಚಾರವಿಲ್ಲ, ಪ್ರಚಾರವಿಲ್ಲದೆ ಬಳಕೆ ಇಲ್ಲ, ಬಳಕೆ ಇಲ್ಲದೆ ಬದುಕಿಲ್ಲ ಎಂದಾಗಿಬಿಟ್ಟಿದೆ ಈ ಜಾಹೀರಾತಿನ ತಂತ್ರಲೋಕ! ಈ ಜಾಹೀರಾತು ಎಂಥವರನ್ನೂ ಮೂರ್ಖರನ್ನಾಗಿ ಮಾಡುವಷ್ಟು ಬಣ್ಣಗಟ್ಟಿ ಬುದ್ಧಿಗೆಡಿಸಿಬಿಡುತ್ತದೆ. ಸ್ವಭಾವತಃ ಯಾವುದೇ ಮನುಷ್ಯ ತನಗೆ ಕಡಿಮೆ ವೆಚ್ಚದಲ್ಲಿ ಹೆಚ್ಚಿನ ಸುಖ-ಸೌಲಭ್ಯ ಪ್ರಾಪ್ತಿಗೊಳಿಸಿಕೊಳ್ಳುವ ಆಮಿಷಗಳಿಗೆ, ಪ್ರಲೋಭಗಳಿಗೆ ತಕ್ಷಣ ವಿಚಾರ-ವಿಮರ್ಶೆ ಮಾಡಲಿ, ಮಾಡದಿರಲಿ ಲಾಭದಾಸೆಯಿಂದ, ಬಿಚ್ಚು-ಕೆಚ್ಚು ಮನಸ್ಸಿನಿಂದ ತಾನಾಗಿ ಹೋಗಿ ಧಕ್ಕನೆ ಬಲಿ ಬೀಳುತ್ತಾನೆ ! ಹೀಗಾಗಿ ಎಷ್ಟೋ ಗೃಹ-ನಿವೇಶನಗಳಿಗೆ ಭರ್ಜರಿ ಜಾಹೀರಾತು ಪ್ರಕಟಿಸಿ ಹಣ ಸಂಗ್ರಹಿಸಿ ಕೊನೆಗೊಂದು ದಿನ ಗೃಹವೂ ಇಲ್ಲ, ನಿವೇಶನವೂ ಇಲ್ಲ, ಹಣ ರಿಟರ್ನೂ ಇಲ್ಲದಂತೆ ಮಾಡಿ ನ್ಯಾಯಾಂಗದಕ್ಕೆ ಮೊರೆ ಹೋಗುವಂತೆ ಮಾಡುವ/ಮಾಡಿ ಪಂಗನಾಮ ಹಾಕುವ ವ್ಯಕ್ತಿ/ಸಂಸ್ಥೆಗಳೆಷ್ಟಿಲ್ಲ!? ಇಂಥಹ ಸುರಳಿತ ನಕಲಿ ವ್ಯವಹಾರಗಳಿಗಾಗಿ ಬೃಹತ್ತಾದ ಜಾಹೀರಾತುಗಳನ್ನು ಪ್ರಕಟಿಸಲಿಕ್ಕಾಗಿ ಪತ್ರಿಕೆ-ಟಿ.ವಿ. ರೇಡಿಯೊ-ಮ್ಯಾಗಜ಼ೀನ್, ಬುಲೆಟಿನ್‌ನಲ್ಲಿ ಲಕ್ಷಾಂತರ ರೂಪಾಯಿ ಖರ್ಚು ಮಾಡಿ ಪ್ರಕಟಿಸಿ ಆಮೇಲೆ ಕೋಟ್ಯಂತರ ರೂಪಾಯಿ ದೋಚುವ ದರೋಡೆಕಾರರ ಹಗಲು ವ್ಯವಹಾರದಲ್ಲಿ ಸಿಕ್ಕಷ್ಟೇ ಇವರಿಂದ ಸುಲಿದು ಮುಕ್ಕಿ ಮುಕ್ತರಾಗುವ ಮಂದಿ ನಮ್ಮ ಮಣ್ಣಲ್ಲಿ ಎಷ್ಟೋ ಮಮತಾಮಣಿಗಳಿದ್ದಾರೆ. ಇದು ಒಂದು ಬೃಹತ್ ಜಾಲ ಎಂಬುದು ಕಾಡಿಗೆ ಬಿದ್ದ ಬೆಂಕಿಯಂತಾಗಿ ಬಡವ-ಮಧ್ಯಮ ವರ್ಗದವರ ಬದುಕನ್ನು ಕಂಗೆಡಿಸುವ ಪರಿ-ಕುತಂತ್ರವಾಗಿದೆ. ಎಲ್ಲ ಗಿಲೀಟ್ ದಂಧೆಗಳನ್ನೂ ನಂಬಿಕೆ ಮೊದಲು ಪ್ರಾಮಾಣಿಕತನದಲ್ಲಿ ಆರಂಭಿಸಿ ಮೋಸ ಹೋದ ಮೇಲೆಯೇ ಜನರಿಗೆ ಅತಿ ಆಸೆಯ, ಬುದ್ಧಿಗೆ ಬಡಿದ ಮಂಕು ಹರಿಯುವುದೇ ಆಗಿದೆ, ವಿಶೇಷತಃ ಅಲ್ಪಾದಾಯದ ಜನರಿಗೆ ! 'ಜಾಹೀರಾತಿನ' ಮಂಕುಬೂದಿ ಸೋಂಕಿಸಿಕೊಳ್ಳದಿರುವವನೇ ಪಾಪಿ ಎಂಬಂತೆ !

ಇಷ್ಟಾದರೂ ಜಾಹೀರಾತಿನ ವಿಷಯ ಚರ್ಚಿಸಿ, ವಿವರ ತಿಳಿದು ಖರೀದಿಸಿದ ವಸ್ತು/ಯಂತ್ರ/ಔಷಧಿ/ಬಟ್ಟೆ/ಗೃಹೋಪಯೋಗಿ ವಸ್ತುಗಳೆಲ್ಲ 'ಅಸಲಿ'ಯೇ ಆಗಿರುತ್ತವೆ ಎಂದೇನಲ್ಲ. ಕಳ್ಳತನದಲ್ಲಿ ನಕಲಿ ನೋಟುಗಳನ್ನು ಮುದ್ರಿಸಿ ಜಾರಿಗೊಳಿಸಿ ನಿಯಂತ್ರಣ ಕಾರ್ಯ ಸರ್ಕಾರಕ್ಕೂ ಸಮಾಜಕ್ಕೂ 'ಕಷ್ಟಕರ' ಮಾಡಿರುವ ಧೂರ್ತ ಮಂದಿಗೆ ನಕಲಿ ವಸ್ತುಗಳನ್ನು ಸೃಷ್ಟಿಸಿ ಅಸಲಿ ಕಂಪೆನಿಗಳ ಲೇಬಲ್ ಅಂಟಿಸಿ ಮಾರಾಟ ಮಾಡುವ ಜನರಿಗೇನು ನಮ್ಮ ದೇಶದಲ್ಲಿ ಕೊರತೆಯೇ ? ಬರ್ಪೂರ್ ಇದ್ದಾರೆ ! ಅಂಥವರು ತುಂಬಾ ಚಾಣಾಕ್ಷರಾಗಿದ್ದು, ಸಾಮಾನ್ಯ ಜನರ ಬುದ್ಧಿಗೆ ಗ್ರಹಣ ಹಿಡಿಸಿ ಮೂರ್ಖರನ್ನಾಗಿ ಮಾಡುತ್ತಾರೆ ! ಇತ್ತೀಚೆಗೆ ಲಕ್ಷಾಂತರ ರೂಪಾಯಿಗಳ ಮೌಲ್ಯದ ನಕಲಿ ಸಿನೆಮಾ ಸಂಗೀತದ ಸಿ.ಡಿ.ಗಳನ್ನು ಬೆಂಗಳೂರಿನಲ್ಲಿ ಪೊಲೀಸರು ವಶಪಡಿಸಿಕೊಂಡರು !

ಆಧುನಿಕ ಮನುಷ್ಯನ, ಅದರಲ್ಲೂ ಪಟ್ಟಣ/ನಗರವಾಸಿ ಜನರ ಜೀವನಶೈಲಿ ಹೇಗಾಗಿದೆ ಎಂದರೆ ಅವರು ಬಳಸುವ ಸಕಲ ವಸ್ತುಗಳು ಜಾಹೀರಾತಿನ ಸೋಂಕಿಲ್ಲದೆ ಅಥವಾ ಆ ಬಗೆಗಿನ ಜ್ಞಾನ ಪಡೆಯದೆ ಅಲ್ಲಿ ನೆಮ್ಮದಿಯಿಂದ ಅವರು ಬದುಕುವುದು ಸಾಧ್ಯವಿಲ್ಲ ಎಂಬಷ್ಟು ಜಾಹೀರಾತು ಅವರನ್ನು ತಬ್ಬಿಕೊಂಡುಬಿಟ್ಟಿದೆ. ಇಷ್ಟಾಗಿಯೂ ಈಗ ಈ ಜಾಹೀರಾತಿನ ಬಳಕೆಯ ವಸ್ತುಗಳ ಗುಣಮಟ್ಟ ಕೀಳು-ಅಧೋಗತಿಯದು ಎಂದೇನು ಅರ್ಥೈಸಬೇಕಿಲ್ಲ. ಅದು ಒಂದು ರೀತಿಯಲ್ಲಿ ಗಟ್ಟಿ ಕಾಳಿನ ಜೊತೆ ಜೊಳ್ಳು ಕಾಳಿದ್ದಂತೆ. ಹಾಗೆ ವಿವೇಚಿಸಿದರೆ ನಾವು ಬಳಸುವ ಅಕ್ಕಿ, ಗೋಧಿ, ಧಾನ್ಯ, ಎಣ್ಣೆ, ಸಾಬೂನು, ಚಹ, ಕಾಫಿಯಂತಹ ಪಾನೀಯಗಳು (ಅಮಲು ಪಾನೀಯಗಳಾದ ಬ್ರಾಂದಿ, ವಿಸ್ಕಿ, ಬೀರು, ಸಾರಾಯಿ, ರಮ್ ಇತ್ಯಾದಿ ಸಹ) ಕುಡಿಯುವ ಇವೆಲ್ಲ ನೂರಕ್ಕೆ ನೂರು ಅಪ್ಪಟವಾಗಿ ಇವೆಯೆ ? ಇಲ್ಲ. ಕಳಪೆ ಬೀಜ, ಮಿಶ್ರಣ, ನಕಲಿ ವಸ್ತುಗಳು ಇಂದಿನ ಆಧುನಿಕ ಮನುಷ್ಯ 'ಅಸಲಿ' – ಎಂದೇ ಭ್ರಮಿಸಿಕೊಳ್ಳುತ್ತ ಉಪಯೋಗಿಸಿಕೊಳ್ಳಲೇಬೇಕಾದ 'ಅನಿವಾರ್ಯ ಸ್ಥಿತಿ' ಅನುಭವಿಸಿ ತೃಪ್ತನಾಗುವಷ್ಟು ಭರ್ಜರಿ ತರಬೇತಿ ಪಡೆದು ಸ್ವಾತಂತ್ರ್ಯ ನೀಡಿದ ಈ ಫಲಶ್ರುತಿಯ ಈ ಆರು ದಶಕಗಳಲ್ಲಿ ಭಾರತೀಯರಿಗೆ ರಕ್ತಗತವಾಗಿಬಿಟ್ಟಿದೆ !

ಈ ಜಾಹೀರಾತು ಪ್ರಕಟಿಸುವ ವಿಷಯದ ಬಗೆಗೆ ಹೀಗಾಗಿ ಸತ್ಯಾಸತ್ಯತೆ ವಿವೇಚಿಸಿ ಚರ್ಚಿಸಿ ವಸ್ತು/ಔಷಧಿ/ಯಂತ್ರ ಇತ್ಯಾದಿ ಖರೀದಿಸುವಷ್ಟು ಸಂಯಮ ಶೀಲತೆಯನ್ನು ಕಳೆದುಕೊಂಡಿಬಿಟ್ಟಿದ್ದಾನೆ. ಆ ಮಟ್ಟಿಗೆ ಆತ ಯಾಂತ್ರಿಕ ಮನುಷ್ಯನೂ ಆಗಿದ್ದಾನೆ.

ಇಷ್ಟಾದರೂ 'ಜಾಹೀರಾತು' ಓದಿಯೋ, ನೋಡಿಯೋ, ಅಂಗಡಿಯವರೊಡನೆ ಚರ್ಚಿಸಿಯೋ ತಕ್ಕಷ್ಟು ಮಾಹಿತಿ ಪಡೆಯುತ್ತಾನೆ. ತನ್ನ ಖರೀದಿಯ ಸಾಮರ್ಥ್ಯಕ್ಕೆ ಅನುಗುಣವಾಗಿ ಅಗತ್ಯಕ್ಕೆ ತಕ್ಕಂತೆ ವಸ್ತುಗಳನ್ನು ಖರೀದಿಸಿ ಬಳಸುತ್ತಾನೆ; ವಿಶೇಷತಃ ಗೃಹೋಪಯೋಗಿ ವಸ್ತುಗಳನ್ನು ಕೊಡು-ಕೊಳ್ಳುವಲ್ಲಿ ಅಂತೂ ಒಂದು ಹಂತದಲ್ಲಿ ಆ ಗಿರಾಕಿ ನಂಬಿಕೆಯನ್ನು ಇಟ್ಟುಕೊಳ್ಳಬೇಕಾಗುವುದೂ ತೀರಾ ಅನಿವಾರ್ಯ. ಉತ್ಪಾದಕನ

ಸರಕು ಬಳಕೆದಾರನ ಕೈಗೆ ಮುಟ್ಟುವವರೆಗೆ ಮಧ್ಯೆ ದಲ್ಲಾಳಿಗಳ ಕೈಚಳಕ ಬೇಕಾದಷ್ಟು ಇದ್ದೇ ಇರುತ್ತದೆ. ಅದನ್ನು ಉತ್ಪಾದಿಸಿದ ಹಾಗೂ ಔಷಧಿ ಗುಳಿಗೆ, ಇಂಜಕ್ಷನ್ ಖರೀದಿಸುವಾಗ ಬಳಸುವ ಕೊನೆಯ ತಾರೀಕು ಆ ಪ್ಯಾಕೆಟ್ ಮೇಲೆಯೇ ನೀಟಾಗಿ ಮುದ್ರಿಸಿರುತ್ತಾನಲ್ಲ ಎಂಬುದು ಅದನ್ನು ಖರೀದಿಸುವವನಿಗೆ ತಕ್ಕಮಟ್ಟಿಗೆ ತಿಳಿದಿರುತ್ತದೆ. ಅಥವಾ ತಿಳಿದಿರ ಬೇಕಾಗುತ್ತದೆ. ಇಲ್ಲಿನ ಜ್ವಲಂತ ಪ್ರಶ್ನೆ ಎಂದರೆ ಪ್ಯಾಕೆಟ್ ಒಳಗಿರುವ ಆ ಗುಳಿಗೆ ಇಂಜೆಕ್ಷನ್-ಉಪಕರಣದಲ್ಲಿ ಅಸಲೆಷ್ಟು- ನಕಲೆಷ್ಟು ಅದೇ ತಿಳಿಯುವುದಿಲ್ಲವಲ್ಲ!? ಅದನ್ನು ಕಲಿಸುವ ವಿಶ್ವವಿದ್ಯಾಲಯ ಯಾವುದು ? ಅರ್ಥವಾಗುವುದಿಲ್ಲ! ಇದೊಂದು ಸ್ಯಾಂಪಲ್ ಅಷ್ಟೆ.

ದಿನನಿತ್ಯ ಬಳಕೆಯ ವಸ್ತು/ಯಂತ್ರ/ಇತ್ಯಾದಿ ನೂರೆಂಟು ಬಳಕೆಯ ವಸ್ತುಗಳ, ಬಳಕೆ ಹಾಗೂ ಗುಣಮಟ್ಟದ ಬಗೆಗೆ ಅಷ್ಟಿಷ್ಟು ಪೂರ್ವಜ್ಞಾನವಂತೂ ಯಾರಿಗಾದರೂ ಸೈ ಲಭಿಸುತ್ತದೆ, – ಆಸಕ್ತಿ ಇದ್ದರೆ! ಸಾಮಾನ್ಯ ಜನರಿಗೆ ಮಾಹಿತಿ ನೀಡುವುದರ ಜೊತೆಗೆ ವಿನೋದ, ಹಾಸ್ಯಪ್ರಜ್ಞೆ ಮನರಂಜನೆ, ನೀಡುವ ಈ ಜಾಹೀರಾತು ಪ್ರಪಂಚದಲ್ಲಿ ಈಗೀಗ ಬರಿಯ ಯಂತ್ರೋಪಕರಣಗಳಷ್ಟೇ ಅಲ್ಲ, ರಂಜನೆ ಹಾಗೂ ಮನೋವಿಕಾಸಕ್ಕೆ ಪೂರಕವಾದಂತಹ ಕ್ರೀಡೆಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು, ಶಿಕ್ಷಣ, ವಿಜ್ಞಾನ, ಸಂಸ್ಕೃತಿ, ವಾಣಿಜ್ಯ ಕ್ರೀಡೆ, ಆರ್ಥಿಕ ವ್ಯವಹಾರಗಳಿಗೆ ಸಂಬಂಧಿಸಿದಂತೆ ಇದ್ದರೂ ಕೂಡ ವರ್ಣ ರಂಜಿತ ಜಾಹೀರಾತುಗಳೂ ಯಥೇಚ್ಛವಾಗಿ ಪ್ರಕಟವಾಗುತ್ತಿವೆ. ಅವುಗಳ ಪ್ರಸಾರದಿಂದಾಗಿ ಅಶಿಕ್ಷಿತ-ಸುಶಿಕ್ಷಿತ ಜನಸಮೂಹಕ್ಕೆ ವಿಷಯ ಮಾಹಿತಿಯ ಸೂಕ್ತ ಶಿಕ್ಷಣ ಹಾಗೂ ಉತ್ತೇಜನ ನಂಬಿದವರಿಗೆ ಅಷ್ಟಿಷ್ಟು ಸಿಗುತ್ತದೆ ಎಂಬುದರಲ್ಲಿ ಮಾತ್ರ ಭರವಸೆ ಇಡಬಹುದೇನೋ ಎನಿಸುತ್ತದೆ.

ಒಳ್ಳೆಯ ಅಸಲಿ ವಸ್ತುಗಳ ಬಳಕೆಗಾಗಿ ಲಕ್ಷಾಂತರ-ಕೋಟಿಗಟ್ಟಲೆ ಜಾಹೀರಾತಿಗಾಗಿ ಖರ್ಚು ಮಾಡಿ ಪ್ರಚಾರಗೊಳಿಸುವ (ಈಗೀಗ ಜಾಹೀರಾತು ಚಿತ್ರ ವಿನ್ಯಾಸ-ಸಾಹಿತ್ಯ-ಸಾಧನ ಸಿದ್ಧಪಡಿಸಿ ಪೂರೈಸುವ ದೊಡ್ಡ ದೊಡ್ಡ ಏಜನ್ಸಿಗಳಿವೆ!) ಅಗತ್ಯವಾದರೂ ಏನಿದೆ ಆ ಸರಕು ಉತ್ಪಾದಿಸುವ ಈ ಕಂಪೆನಿಗಳಿಗೆ, – ಎಂಬ ಮೂಲ ಪ್ರಶ್ನೆ ಓದುಗರಿಗೆ ಚಿಂತಕರಿಗೆ ಉದ್ಭವಿಸುವುದು ಸಹಜವೇ. ಪ್ರಶ್ನೆ ಅದಲ್ಲ! ಈಗ ಯಾವುದೇ ಸರಕು ಇಂತಿಷ್ಟು ಅವಧಿಯಲ್ಲಿ ತಯಾರಿಸಿದ್ದನ್ನು ಜಾಹೀರಾತುಗೊಳಿಸಿ ಮಾರುಕಟ್ಟೆಗೆ ತುರುಕುತ್ತಾರೆ. ಸ್ಪರ್ಧಾ ಜಗತ್ತಿನಲ್ಲಿ ಆ ಸರಕು ಬೇರೆ ಕಂಪೆನಿಗಳೂ ಅದೇ ಗುಣಾಂಶದ ಸರಕನ್ನೂ ದಬ್ಬಿರುತ್ತಾರಲ್ಲ. ಹಾಗಾಗಿ ಯಾವ ಕಂಪನಿ (ಅಸಲಿ) ಇರುತ್ತದೆಯೋ, ಅವರಿಗೆ ಆರ್ಥಿಕ ಪೆಟ್ಟು ಬೀಳುತ್ತದೆ. ಏಕೆಂದರೆ ಮಾರ್ಕೆಟ್‌ನಲ್ಲಿ ಅಸಲಿ ತರಹದ್ದೇ ಮುಖವಾಡ ತೊಡಿಸಿದ ನಕಲಿ ಮಾಲು ಖರ್ಚಾಗಿಹೋಗುವುದೂ ಕಾರಣವಾಗಿರುತ್ತದಲ್ಲ. ದರವೂ ಕಮ್ಮಿ, ಹಾಗಾಗಿ! ಜಾಹೀರಾತಿನ ಅಬ್ಬರಕ್ಕೆ ವ್ಯಾಪಾರಿಗಳೂ ಅಧಿಕ ಕಮಿಷನ್ ಆಸೆಗಾಗಿ ತಾಳ ಹಾಕಿ ಕುಣಿಯುವುದೂ ಕಾರಣವಾಗಿದೆ. ಬಿಕರಿಯಾಗದೆ ಉಳಿದ ಮಾಲನ್ನು ಗಿರಾಕಿಗಳ ತಲೆಗೆ ಕಟ್ಟಲಿಕ್ಕಾಗಿಯೇ ಪುನಃ ತಮ್ಮ ಮೊದಲ ದರದಲ್ಲಿ ರಿಯಾಯ್ತಿ, ಗಿಫ್ಟ್ ಅಥವಾ ಲಾಟರಿ ಮುಂತಾಗಿ ಮತ್ತೆ ಭರ್ಜರಿ ರಂಗುರಂಗಿನ ಜಾಹೀರಾತು ಪ್ರಕಟಿಸಿ ಅಂತೂ ಹಳೇ ಮಾಲು ಖಾಲಿ ಮಾಡೋ ಅದ್ಭುತ ದಂಧೆಗೆ 'ಜಾಹೀರಾತು' ಪ್ರಾಣವಾಯು ಆಗಿರುತ್ತದೆ. ಇದು ವ್ಯಾಪಾರೀ ಗುಟ್ಟಿನ ಮೂಲ ಮಂತ್ರ! ನಕಲಿ ಎಂಬುದನ್ನು ನಗುತ್ತ ನಗುತ್ತ ನೋಡುತ್ತ ನಲಿಯುತ್ತ ಕಲಿ ಎಂಬಂತಾಗಿರುವ ವರ್ತಮಾನದ ಪರಿಸ್ಥಿತಿಗೆ ಭ್ರಷ್ಟಾಚಾರ-ಲಂಚ- ಶೋಷಣೆ-ರಾಜಕಾರಣ ಕೃಪೆ ಮುಂತಾಗಿ ನೀರು-ಗೊಬ್ಬರ-ಮಣ್ಣು ಸಿಗುತ್ತದಲ್ಲ, ಇದಕ್ಕೆ ಸಾವೇ ಇಲ್ಲ!. ಹೀಗಾಗಿ ನಿಧಾನ ವಿಷವಾಗಿ ಕೊಲ್ಲುವ ಈ 'ಜಾಹೀರಾತು' ನಮ್ಮ ನಂಬಿಕೆ- ಸಮಯ ಪ್ರಜ್ಞೆ-ತರ್ಕಬದ್ಧತೆ-ಶೋಧನಾ ಬುದ್ಧಿಗೆ ಬಗ್ಗುವ ಪ್ರಚಾರ ವಸ್ತು ಅಲ್ಲ ಎಂಬುದಂತೂ ಕಟುಸತ್ಯ ಎನಿಸುತ್ತಿದೆ. ಸಂತೋಷವೆಂದರೆ ಜಾಹೀರಾತಿಲ್ಲದೆ ಆಧುನಿಕ ಜೀವನ ಶೈಲಿಗೆ ಸ್ವಾರಸ್ಯವೂ ಇಲ್ಲ, ಅರ್ಥವೂ ಇಲ್ಲ! ಏಕೆಂದರೆ ಇದು ಜಾಹೀರಾತು ಯುಗ!

ಬಿ. ಪಿ. ಶಿವಾನಂದ ರಾವ್
ನಂ. ೭೯೫, 'ಶಶಿಕಿರಣ', ೬ನೇ ಮುಖ್ಯರಸ್ತೆ, ೧೨ನೇ ಅಡ್ಡರಸ್ತೆ
ಎಮ್‌ಸಿಇಸಿಎಚ್‌ಎಸ್ ಬಡಾವಣೆ, ಡಾ।। ಶಿವರಾಮಕಾರಂತ ನಗರ, ಬೆಂಗಳೂರು - ೫೬೦ ೦೭೭



## ಕಾದಲೆ

(ಚೀನೀ ಕವಿತೆ)

ಹಸಿರೇ ಹಸಿರಾಗಿಹುದು
ಹೊಳೆಯ ಬದಿಯ ಹುಲ್ಲು
ನೋವಿನ ಭಾರಕೆ ಬಾಗಿವೆ
ತೋಟದ ವಿಲೋ ಮರದೆಲೆಗಳು.

ಬನ್ನಿ ಬನ್ನಿರಿ ಎಂದು ಕರೆಯುತ
ಕೆಂಪು ದೀಪದಡಿ ಬಾಲಿಕೆ ನಿಂತಿಹಳು
ಮಾಸಿದ ಚೆಲುವಿನ ಚಹರೆಯ ಹೊತ್ತು
ಕಿಟಕಿಯೊಳಗೆ ಮೊಗವಿಟ್ಟು ನಿರುಕಿಸುವಳು.

ಪಟ ಪಟ ಅಲುಗುವ
ಪಾತರಗಿತ್ತಿಯ ಪಕ್ಕಗಳಂಥ ಕಣ್ಣಿನ ರೆಪ್ಪೆಗಳು
ಸೌಮ್ಯ ಸುಕೋಮಲ
ಮುಂದಕೆ ಚಾಚಿದ ಬಿಳಿ ಬಿರಿದೋಳುಗಳು!

"ಓ, ಹಿಂದೊಮ್ಮೆ ನಾನೆನಿಸಿದ್ದೆ ಸುಶೀಲ ಸುಂದರ ಬಾಲೆ
ಉಂಡಲೆಯುವ ಒಬ್ಬ ಯುವಕನ ಜೊತೆಗೆ
ಮದುವೆಯೂ ಆಗಿತ್ತೆನಗೆ
ಆ ಮಾರಾಯ ಈಗೆಲ್ಲಿಹನೋ ತಿಳಿಯದು ನನಗೆ!
ಅಣಕಿಸುತಿರಲು ಈ ಬರಿ ಹಾಸಿಗೆ
ನಾನೊಬ್ಬಂಟಿಯೆ ಮಲಗುವುದಾದರು ಹೇಗೆ?"

ಅನಾಮಿಕ (ಕ್ರಿ. ಶ. ಪೂ. ಸುಮಾರು ೩೦೦), ಕನ್ನಡಕ್ಕೆ : **ಡಾ।। ಬಿ. ಎ. ಸನದಿ**
'ಮಿಲನ', ವಿನಾಯಕ ಸಾ ಮಿಲ್ ಎದುರು, ಹೆರವಟ್ಟ, ಕುಮಟ ತಾಲೂಕು, ಉ. ಕ. ಜಿಲ್ಲೆ

# ದಲಿತರು ಹಾಕಿಸಿಕೊಂಡ ಜನಿವಾರ ಬ್ರಾಹ್ಮಣ್ಯದ ತಂತ್ರವಷ್ಟೆ !

ಜನಪದರ ಯಾವುದೇ ಆಚರಣೆಗಳನ್ನು ಮೇಲ್ನೋಟಕ್ಕೆ ಅಧ್ಯಯನ ಮಾಡಿದರೆ ವಾಸ್ತವಾಂಶವು ಅರಿವಾಗುವುದಿಲ್ಲ. ಆದ್ದರಿಂದ ಯಾವುದೇ ಆಚರಣೆಯ ಘಟನೆಯನ್ನು ವಿಮರ್ಶಾತ್ಮಕವಾಗಿ, ಚಿಕಿತ್ಸಕ ಮನಸ್ಸಿನಿಂದ ಒಳಹೊಕ್ಕು ಸೂಕ್ಷ್ಮವಾಗಿ ಅಧ್ಯಯನ ನಡೆಸಿದಾಗ ಮಾತ್ರ ವಾಸ್ತವತೆಯ ಅರಿವಾಗುತ್ತಾ ಹೋಗುತ್ತದೆ. ಈ ದೃಷ್ಟಿಯಿಂದ ಉಜ್ಜನಿಯ ಗ್ರಾಮದೇವತೆ ಚೌಡಮ್ಮನ ೧೫ ದಿನಗಳ ಹಬ್ಬದ ಆಚರಣೆ ವೇಳೆ ಆರು ಜನ ದಲಿತರಿಗೆ ಶಾಸ್ತ್ರೋಕ್ತವಾಗಿ ಜನಿವಾರ ಧಾರಣೆ ಮಾಡಿ ಬ್ರಾಹ್ಮಣರಂತೆ ಬದುಕುವರು ಎಂಬುದಕ್ಕಷ್ಟೇ ಸೀಮಿತಗೊಳ್ಳುವುದು ಸರಿಯಲ್ಲ. ಏಕೆಂದರೆ ಬ್ರಾಹ್ಮಣರಂತೆ ವಿಧಿಗಳನ್ನು ಆಚರಿಸುವ ಇವರಿಗೆ ಬ್ರಾಹ್ಮಣರ ಯಾವುದೇ ಸ್ಥಾನಮಾನ ಗೌರವಗಳಿರುವುದಿಲ್ಲ.

ಈ ಹಿನ್ನೆಲೆಯಲ್ಲಿ ಗ್ರಾಮದ ಆಚರಣೆ ಕುರಿತು ಡಾ|| ಹಿ. ಚಿ. ಬೋರಲಿಂಗಯ್ಯನವರು ತಮ್ಮ 'ಉಜ್ಜನಿ ಚೌಡಮ್ಮ ಗ್ರಾಮದೇವತೆ ಅಧ್ಯಯನ' (ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೧) ಕೃತಿಯ ಪ್ರಸ್ತಾವನೆಯಲ್ಲಿ ಹಲವು ಪ್ರಶ್ನೆಗಳನ್ನು ಎತ್ತಿದ್ದಾರೆ. ಈ ಕೃತಿಯ ಆರಂಭದಲ್ಲಿ ಆಚರಣೆಯ ಹಿಂದಿನ ಮರ್ಮವನ್ನು ಭೇದಿಸಲು ಪ್ರಯತ್ನಿಸಿದ್ದಾರೆ :

''...ಇದು (ದಲಿತರು ಬ್ರಾಹ್ಮಣರಾಗುವುದು) ತಾತ್ಕಾಲಿಕ ಮಾತ್ರ ಎಂಬುದು ಇಲ್ಲಿ ಮುಖ್ಯ. ಇಲ್ಲಿ ಎರಡು ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ. ಒಂದು : ಹೀಗೆ ಜನಿವಾರ ಧರಿಸಿ ಬ್ರಾಹ್ಮಣರಾದ ಹೊಲೆಯರ ಸಾಮಾಜಿಕ ಸ್ಥಾನಮಾನದಲ್ಲಿ ಏನಾದರೂ ಬದಲಾವಣೆ ಆಗಿದೆಯೆ ? ಎರಡು: ಬ್ರಾಹ್ಮಣರಾಗಿ ಪರಿವರ್ತನೆ ಹೊಂದಿದಾಕ್ಷಣ ಬ್ರಾಹ್ಮಣರಿಗೆ ಇರುವ 'ಗುಡಿ ಪ್ರವೇಶ'ದ ಹಕ್ಕು ಲಭ್ಯವಾಗುತ್ತದೆಯೇ ? ವಾಸ್ತವವಾಗಿ ಈ ಎರಡೂ ಪ್ರಶ್ನೆಗಳಿಗೆ ಒಂದೇ ಉತ್ತರ 'ಇಲ್ಲ' ಎಂಬುದು... ಅವರನ್ನು ಬ್ರಾಹ್ಮಣರನ್ನಾಗಿ ಸ್ವೀಕರಿಸುವ ಅಥವಾ ಗುಡಿ ಇತ್ಯಾದಿ ಒಳ ಆವರಣಗಳಿಗೆ ಪ್ರವೇಶ ನೀಡುವ ದೊಡ್ಡತನವನ್ನು ಮಾತ್ರ ಸವರ್ಣೀಯ ಸಮಾಜ ತೋರಿಲ್ಲ. ಚೌಡಮ್ಮನ ಕೊಂಡದಲ್ಲಿ ಓಡುವ ಅವಕಾಶ ಮಾತ್ರ ಅವರಿಗುಂಟು.''

ದಲಿತರು ಬ್ರಾಹ್ಮಣರಾಗಿದ್ದ ೧೫ ದಿನಗಳ ಅವಧಿಯ ಅಂತಿಮ ಘಟ್ಟವೇ ಕೊಂಡ ಹಾಯುವುದು. ಭಾರಿ ಕೆಂಡಗಳ ರಾಶಿಯನ್ನು ಹಾಯುವ ದಲಿತರಾದ ಹೆಬ್ಬಾರೆ ಗುಡ್ಡರು ಮಾನಸಿಕ ಸಮತೋಲನ ಕಾಯ್ದುಕೊಳ್ಳಲು ಒಂದು ರೀತಿಯಲ್ಲಿ ಸಾಮಾನ್ಯ ಮನುಷ್ಯರನ್ನು ಮೀರಿದ ಮಧ್ಯಂತರ ಜಗತ್ತೊಂದನ್ನು ಪ್ರವೇಶಿಸುವಂತೆ ಮಾಡಲು, ಜನಿವಾರ ಧಾರಣೆ ಆಚರಣೆ ಮತ್ತು ನಂತರದ 'ಮಡಿ' ಆಚರಣೆಗಳು ಕಾರಣವಾಗಬಹುದು.

ಇಷ್ಟಾದರೂ ಆ ಆರೂ ಜನರಿಗೆ ದಲಿತರ ಸ್ಥಾನಕ್ಕಿಂತ ಮೇಲಿನ ಸ್ಥಾನವನ್ನೇನೂ ಸವರ್ಣೀಯರು ಕೊಡುವುದಿಲ್ಲ. ಇದನ್ನು ಹಿ. ಚಿ. ಬೋರಲಿಂಗಯ್ಯನವರು ಹೀಗೆ ದಾಖಲಿಸುತ್ತಾರೆ :

''...ಕೊಂಡ ಹಾಯ್ದುಬರುವ ಆರು ಜನ 'ಬ್ರಾಹ್ಮಣರೆನಿಸಿಕೊಂಡ' ಹೆಬ್ಬಾರೆ ಗುಡ್ಡರಿಗೆ ದೇವಸ್ಥಾನದ ಹಜಾರದೊಳಕ್ಕೆ ಪ್ರವೇಶವಿಲ್ಲ! ಕೆಂಡದಲ್ಲಿ ಓಡಿ ಆವೇಶಭರಿತರಾಗಿ ದೇವಸ್ಥಾನದ ಒಳಗೆ ನುಗ್ಗಲು ಆ ಆರೂ ಜನರೂ ಪ್ರಯತ್ನಿಸುತ್ತಾರೆ. ಅವರ ಮೈಮೇಲೆ ದೇವರ ಪ್ರವೇಶವಾಗಿರುತ್ತದೆ ಎಂದು ನಂಬಲಾಗುತ್ತದೆ. ಹಾಗೆ ಆವೇಶದಿಂದ ಅವರು ಒಳನುಗ್ಗಲು ಪ್ರವೇಶಿಸಿದಷ್ಟೂ ಅವರನ್ನು ಬಾಗಿಲಲ್ಲೇ ತಡೆಯುವ ಪ್ರಯತ್ನಗಳಾಗುತ್ತವೆ. ನಿಗದಿಪಡಿಸಿದ ಸವರ್ಣೀಯ ವ್ಯಕ್ತಿಗಳು ಬಾಗಿಲಲ್ಲಿ ನಿಂತು ಅವರನ್ನು ನಿಯಂತ್ರಿಸುತ್ತಾರೆ. ಇದು ಪ್ರತಿ ವರ್ಷ ನಡೆಯುವ ಒಂದು ಅಭಿನಯಾತ್ಮಕ ಆಚರಣೆ. ದೇವಸ್ಥಾನದ ಒಳಗಿಂದ ಬ್ರಾಹ್ಮಣ ಪೂಜಾರಿ ಬಂದು ಹೆಬ್ಬಾರೆ ಗುಡ್ಡರ ಮೇಲೆ ಚೌಡಮ್ಮನ ತೀರ್ಥವನ್ನು ಹಾಕಿದ ಮೇಲೆ ನಿಧಾನಕ್ಕೆ ಆವೇಶ ತಗ್ಗುತ್ತದೆ. ನುಗ್ಗುವ ಕ್ರಿಯೆ ನಿಲ್ಲುತ್ತದೆ. ಹೆಬ್ಬಾರೆಗಳನ್ನು ಹೊತ್ತ ಗುಡ್ಡರು ತಮ್ಮ (ದಲಿತರ) ಮನೆ ದೇವರ ಗುಡಿ – ಎನಿಸಿದ ಹೆಬ್ಬಾರಮ್ಮನ ಗುಡಿಗೆ ಹಿಂತಿರುಗುತ್ತಾರೆ.''

ಈ ಪ್ರಸಂಗವು ಪ್ರಾಚೀನ ವ್ಯವಸ್ಥೆಯೊಂದರ ಪಳೆಯುಳಿಕೆಯ ರೀತಿಯೂ ಇರಬಹುದು ಅಥವಾ ಕಾಲಘಟ್ಟವೊಂದರಲ್ಲಿ ಬದಲಾವಣೆಗೊಂಡ ಅಥವಾ ಹೇರಲ್ಪಟ್ಟ ಸಾಮಾಜಿಕ ಮೌಲ್ಯವೂ ಇರಬಹುದು. ಈ ಕುರಿತು ನಾಡಿನ ಕೆಲವು ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ಹೀಗೆ ದಾಖಲಿಸಿದ್ದಾರೆ :

''...ಇಲ್ಲಿ ಮುಖ್ಯ ಸಂಗತಿ ಎಂದರೆ; ಹರಿಜನರು ಜನಿವಾರ ಹಾಕಿ, ನಿರ್ದಿಷ್ಟ ಅವಧಿಗೆ ಬ್ರಾಹ್ಮಣರಾಗುವುದು. ಮತ್ತೆ ಇನ್ನೊಂದು ಕಡೆ, ಹರಿಜನರು ಆವೇಶದಿಂದ ಗುಡಿಗೆ ನುಗ್ಗಲು ಪ್ರಯತ್ನಿಸುತ್ತಾರೆ. ಅವರನ್ನು ಸವರ್ಣೀಯರು ತಡೆದು ನಿಲ್ಲಿಸುತ್ತಾರೆ. ಹರಿಜನರಿಗೆ ಕೊಟ್ಟ ಬ್ರಾಹ್ಮಣ್ಯದ ಮಿತಿ ಇದು. ಜನಿವಾರ ಕಳಚುವವರೆಗೆ ಅವರು ತಮ್ಮ ಜಾತಿಯೊಂದಿಗೆ ಯಾವುದೇ ರೀತಿಯ ಸಂಬಂಧವನ್ನು ಇಟ್ಟುಕೊಳ್ಳಬಾರದು. ಈ ಆಚರಣೆಯ ಉಳಿದ ವಿವರಗಳ ಹಿಂದೆ ಇರುವ ಸಂಗತಿಗಳನ್ನು ಅಧ್ಯಯನ ಮಾಡಿದರೆ ಈ ಆಚರಣೆ ಒಂದು ಬಂಡುಕೋರ ರಿಚುಯಲ್ ಇರಬಹುದು ಎಂಬುದು ಸ್ಪಷ್ಟವಾಗುತ್ತದೆ.'' ಎಂದು ಡಿ. ಆರ್. ನಾಗರಾಜ್ ಅಭಿಪ್ರಾಯಪಡುತ್ತಾರೆ.

''ತುಳಿಯಲ್ಪಟ್ಟ ಜಾತಿಗಳ ಜನ ವಿವಿಧ ಆಚರಣೆಗಳ ಮೂಲಕ ಶೋಷಕ ಸಮಾಜಕ್ಕೆ ತಮ್ಮ ಪ್ರತಿಭಟನೆ ಸಲ್ಲಿಸಿದ್ದಾರೆ... ಉಜ್ಜನಿ ಚೌಡಮ್ಮನ ಹಬ್ಬದಲ್ಲಿ ಆರು ಜನ ಹೊಲೆಯರಿಗೆ ಜನಿವಾರ ಧಾರಣೆ ಮಾಡಿದ ನಂತರ ಅವರ ಮೇಲೆ ದೇವತೆ

ನವೆಂಬರ್ 2010ರ ಸಂಚಿಕೆಯಲ್ಲಿ ಡಾ|| ಡಿ. ಎನ್. ಯೋಗೀಶ್ವರಪ್ಪ ಅವರು 'ದಲಿತರು ಜನಿವಾರ ಹಾಕಿದಾಗ' ಎಂಬ ಲೇಖನದಲ್ಲಿ ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಉಜ್ಜನಿ ಗ್ರಾಮದಲ್ಲಿ ನಡೆಯುವ ಗ್ರಾಮದೇವತೆಯ ಹಬ್ಬದ ಆಚರಣೆಯನ್ನು ಪರಿಚಯಿಸಿದ್ದಾರೆ. ಏಣಿಶ್ರೇಣಿಯ ಭಾರತೀಯ ವರ್ಣಾಶ್ರಮ ವ್ಯವಸ್ಥೆಯ ಒಳಗೆ, ದಲಿತರಾದ ಹೆಬ್ಬಾರೆ ಗುಡ್ಡರು ವರ್ಷದಲ್ಲಿ 15 ದಿನಗಳ ಕಾಲ ಬ್ರಾಹ್ಮಣರಾಗಿ ಬದುಕುವ ಈ ಆಚರಣೆ ದೇಶದ ಇತಿಹಾಸದಲ್ಲಿಯೇ ಅತ್ಯಂತ ವಿಶಿಷ್ಟವಾದುದಾಗಿ ಅಭಿಪ್ರಾಯಪಟ್ಟಿದ್ದಾರೆ. ಆದರೆ ಇದು ವಿಶಿಷ್ಟ ಆಚರಣೆಯಾದರೂ, ಈ ವ್ಯವಸ್ಥೆಯು ದಲಿತರು ಬ್ರಾಹ್ಮಣರಾಗಲು ಅವಕಾಶ ಕಲ್ಪಿಸಿಕೊಟ್ಟಿದೆ ಎಂದು ಹೆಮ್ಮೆಪಡುವ ಅವಶ್ಯಕತೆ ಉದ್ಭವಿಸುವುದಿಲ್ಲ. ಏಕೆಂದರೆ ಎಲ್ಲಾ ಜಾನಪದ ಮೌಲ್ಯಗಳೂ ಸಾರ್ವಕಾಲಿಕವೆನ್ನಲಾಗದು.

ಹಂ. ಗು. ರಾಜೇಶ್

ಬರುತ್ತದೆ. ಅವರು ಚೌಡಮ್ಮನ ಗುಡಿಯೊಳಗೆ ನುಗ್ಗಲು ಓಡುತ್ತಾರೆ. ಆದರೆ ಗುಡಿಯ ಬಾಗಿಲಿನಲ್ಲೇ ಮೇಲು ಜಾತಿಯ ಜನ ಈ ದೇವರುಗಳನ್ನು ತಡೆಯುತ್ತಾರೆ. ದೇವರು ಮೈದುಂಬಿದ್ದರೂ ಮೈದುಂಬಲು ಆರಿಸಿಕೊಂಡಿರುವ ವ್ಯಕ್ತಿಗಳು ಹೊಲೆಯರಾಗಿರುವುದು ಇದಕ್ಕೆ ಕಾರಣ'', ಎಂದು ಡಾ|| ಸಿದ್ದಲಿಂಗಯ್ಯ ಅಭಿಪ್ರಾಯಪಡುತ್ತಾರೆ.

ಉಜ್ಜನಿಯ ಈ ಆಚರಣೆಗಳನ್ನು ಕುರಿತು ಡಾ|| ರಹಮತ್ ತರೀಕೆರೆ ಅವರು ತಮ್ಮ 'ಪ್ರತಿ ಸಂಸ್ಕೃತಿ' ಕೃತಿಯಲ್ಲಿ ಹೀಗೆ ಬರೆಯುತ್ತಾರೆ :

''...ಇಂಡಿಯಾದ ಸಮಾಜವು ಜಾತಿ ವೈಷಮ್ಯಗಳ ನಡುವೆಯೇ ರೂಪಿಸಿಕೊಂಡ ಆಂತರಿಕ ಸಾಮರ್ಥ್ಯದ ಮಾದರಿಯಿದು. ಈ 'ಸಾಮರಸ್ಯ'ದಲ್ಲಿ ಕೆಳಜಾತಿಗಳು 'ಮೇಲು' ಜಾತಿಗೆ ಸಮಾನವಾದ ಹಕ್ಕುಗಳನ್ನು ಪಡೆದರೂ, ಅವು ತಾತ್ಕಾಲಿಕವಾಗಿವೆ. ವಾಸ್ತವ ಬದುಕಿನಲ್ಲಿ ಅವರ ಸ್ಥಾನಮಾನಗಳು ಏನೂ ಬದಲಾಗುವುದಿಲ್ಲ''



ಕೆಸರಲ್ಲಿ 'ಕಮಲ' ಅರಳುವುದು ಸಹಜ... ಆದರೆ ಇವರನ್ನು ಕೆಸರಲ್ಲಿ ಯಾಕೆ ಹಾಕಿದ್ದಾರೆ ಗೊತ್ತಿಲ್ಲ.. ಇಲ್ಲಿ ಅರಳುವುದು ಸಾಧ್ಯವೇ ಇಲ್ಲ..

ತಳವರ್ಗದವರ ಆಚರಣೆಯಲ್ಲಿ ಸ್ವಾಲಿತ್ಯವಾಗಿ ವೈದಿಕೀಕರಣಗೊಂಡಿರುವ ಅಂಶಗಳನ್ನು ಹಿ. ಚಿ. ಬೋರಲಿಂಗಯ್ಯನವರು ಹೀಗೆ ಪಟ್ಟಿ ಮಾಡಿದ್ದಾರೆ :

''ಪ್ರಪ್ರಥಮವಾಗಿ, ವೈದಿಕ ನಂಬಿಕೆಯ ಪ್ರಕಾರ ಅಸ್ಪೃಶ್ಯರೆನಿಸಿದ ಹೊಲೆಮಾದಿಗರಿಗೆ ದೇವಸ್ಥಾನದ ಪ್ರವೇಶಾವಕಾಶವನ್ನು ನಿರಾಕರಿಸಲಾಗಿದೆ. ಎರಡನೆಯದಾಗಿ, ಇಡೀ ಹಬ್ಬದ ಸ್ವರೂಪವನ್ನು ವೈದಿಕೀಕರಣಗೊಳಿಸಲು ಪ್ರಯತ್ನಿಸಲಾಗಿದೆ. ಮೂರನೆಯದಾಗಿ, ಗ್ರಾಮದೇವತೆ ಚೌಡಮ್ಮನ ಹುಟ್ಟನ್ನು ತ್ರಿಪುರಾಪುರಿ ಎಂಬ ಪಟ್ಟಣದ ಜೊತೆಗೆ ಬೆಸೆದು, ಚೌಡಮ್ಮನ ಗಂಡ ಅವತಾರಪುರುಷರಲ್ಲಿ ಒಬ್ಬನಾದ ಕೃಷ್ಣ ಎಂದು ಪ್ರತಿಪಾದಿಸುವ ಪುರಾಣಗಳನ್ನು ಸೃಷ್ಟಿಸಲಾಗಿದೆ.''

ಒಟ್ಟಾರೆ ಹೇಳುವುದಾದರೆ ಚೌಡಮ್ಮ, ಮಾರಮ್ಮ ಇವೆಲ್ಲ ಶೂದ್ರಾತಿಶೂದ್ರ ದೇವತೆಗಳೇ ಆಗಿವೆ. ಕಾಲಘಟ್ಟದಲ್ಲಿ ಚೌಡಮ್ಮನ ಕೀರ್ತಿ ಪಸರಿಸಿದಂತೆ ಆಕರ್ಷಿತರಾದ ಮೇಲ್ವರ್ಗದ ಬ್ರಾಹ್ಮಣ - ಪುರೋಹಿತರು ಅನುಕೂಲ ಸಿಂಧು ನಡವಳಿಕೆ ಪ್ರದರ್ಶಿಸಿದ್ದಾರೆ. ಅದಕ್ಕಾಗಿ ಚೌಡಮ್ಮ ದೇವಿಗೆ ನಡೆದುಕೊಳ್ಳಲಾರಂಭಿಸಿದ್ದಾರೆ. ಆದರೆ ದಲಿತ ಮತ್ತು ಶೂದ್ರರೊಡನೆ ಸಾಮರಸ್ಯದಿಂದ ಬೆರೆತು ಆಚರಣೆ ನಡೆಸಲು ಮೇಲ್ವರ್ಗದವರಿಗೆ ಇರಸುಮುರಸಾಗಿರಬೇಕು. ಅದಕ್ಕೆ ಅವರ ಆಚರಣೆಯ ಭಾಗವಾದ ಕುರಿ, ಕೋಣಗಳೇ ಮೊದಲಾದ ಪ್ರಾಣಬಲಿಯೇ ಕಾರಣವಾಗಿರಬಹುದು. ಆಗ ಬ್ರಾಹ್ಮಣರು ಉಪಾಯವಾಗಿ ದಲಿತರನ್ನು ದೇವಾಲಯದಿಂದ ಹೊರಹಾಕಲು ಪ್ರಯತ್ನಿಸಿದ್ದಿರಬಹುದು ಅಂಥಾ ಸಂದರ್ಭದಲ್ಲಿ ಎದುರಾದ ದಲಿತರ ಪ್ರತಿಭಟನೆಗೆ ತಡೆಗೋಡೆಯಾಗಿ ಸವರ್ಣೀಯರನ್ನು ಓಲೈಸಿಕೊಂಡು ದಲಿತರ ಪ್ರತಿಭಟನೆಯನ್ನು ಶಮನಗೊಳಿಸಲು ಪ್ರಯತ್ನಿಸಿರಬಹುದು. ಆದರೆ ದಲಿತರನ್ನು ಸಂಪೂರ್ಣವಾಗಿ ಚೌಡಮ್ಮನ ದೇವಾಲಯದಿಂದ, ಆಚರಣೆಗಳಿಂದ ಬೇರ್ಪಡಿಸಲು ಸಾಧ್ಯವಾಗದೇ ಹೋದಾಗ, ಉಪಾಯವಾಗಿ ಈ ರೀತಿಯ ಸಾಂಕೇತಿಕ ಆಚರಣೆಯ ಮಡುವಿನಲ್ಲಿ ನೂಕಿ ದಲಿತರ ಬೇಗುದಿಯನ್ನು ಶಮನಪಡಿಸುವಲ್ಲಿ ಬ್ರಾಹ್ಮಣ್ಯದ ತಂತ್ರಗಳು ಫಲಿಸಿವೆ ಎಂದು ಪರಿಭಾವಿಸಬಹುದಾಗಿದೆ. ಊರಿನ ಶಾಸನಾಧಾರದಿಂದ ೧೫ನೇ ಶತಮಾನದ ಆರಂಭದಲ್ಲಿ ದೇವಾಲಯದೊಂದಿಗೆ ಬ್ರಾಹ್ಮಣರು ಬೆಸೆದುಕೊಂಡಿದ್ದ ಮತ್ತು ಊರಿನ ಪಾಳೆಯಗಾರ ಹಾಗೂ ಸವರ್ಣೀಯರು ಬ್ರಾಹ್ಮಣರಿಗೆ ಭೂಮಿ ನೀಡಿದ ಅಂಶಗಳನ್ನು ಕಾಣಬಹುದು.

ಈ ಪದ್ಧತಿ ಬೆಳೆದು ಬಂದಿರಬಹುದಾದ ಕಾಲವನ್ನು ಗುರ್ತಿಸಲು ಇನ್ನೊಂದು ಅಂಶವನ್ನು ಗಮನಿಸುವುದಾದರೆ, ಉಜ್ಜನಿಯಲ್ಲಿ ನಡೆಯುವ ೧೫ ದಿನಗಳ ಈ ಹಬ್ಬದ ಸಂದರ್ಭದಲ್ಲಿ ಊರಿನಲ್ಲಿ ಯಾರೂ ಮೆಣಸಿನ ಕಾಯಿಯನ್ನು ಸುಡುವಂತಿಲ್ಲ. ಇದು ಬಹಳ ಕಟ್ಟುನಿಟ್ಟಾಗಿ ಪಾಲಿಸುತ್ತಾ ಬಂದಿರುವ ಒಂದು ನಿಯಮ. ಮೆಣಸಿನ ಕಾಯಿಯನ್ನು ಪೋರ್ಚುಗೀಸರು 'ಚಿಲಿ' ದೇಶದಿಂದ ತಂದು ಭಾರತದಲ್ಲಿ ಪರಿಚಯಿಸಿದರು. ಆಗ ಹೊಸದಾಗಿ ಪರಿಚಯವಾದ ಮೆಣಸಿನ ಕಾಯಿಯನ್ನು ಹೊರಗಿನದೆಂದು ಹಬ್ಬ ಆಚರಣೆ ವೇಳೆ ನಿಷೇಧಿಸಿದ್ದಿರಬೇಕು. ಇಂದಿಗೂ ಕೆಲವು ಸಂಪ್ರದಾಯಸ್ಥ ಬ್ರಾಹ್ಮಣರು ಹಬ್ಬ ಹರಿದಿನಗಳಲ್ಲಿ ಮಾಡುವ ಅಡುಗೆಯಲ್ಲಿ ಕೆಂಪು ತರಕಾರಿಗಳಾದ ಟೊಮ್ಯಾಟೊ, ಕ್ಯಾರೆಟ್ ಮೊದಲಾದ ತರಕಾರಿಗಳನ್ನು ಬಳಸುವುದಿಲ್ಲ ಎಂದು ಕೇಳಿದ್ದೇನೆ. ಇವೂ ಭಾರತಕ್ಕೆ ಹೊರಗಿನಿಂದ ಪರಿಚಯವಾದವುಗಳು.

ಇದೇ ಕಾಲಘಟ್ಟಕ್ಕೆ ಸೇರಿಸಬಹುದಾದ ಆಚರಣೆಯೆಂದರೆ ವಲಸೆ ಪ್ರಕ್ರಿಯೆ. ಇಂದು ಚೌಡಮ್ಮನನ್ನು ಹೊತ್ತು ಕೊಂಡ ಹಾಯುವ ಕರಡಿ ಪಾಲಿನ ಪೈಕಿಯವರು ಬಹುಶಃ ಉತ್ತರದ ವಿಜಯನಗರದ ಕಡೆಯಿಂದ ಬಂದು ನೆಲೆಸಿರಬೇಕೆಂದು ಹಿ. ಚಿ. ಅವರು ಅಭಿಪ್ರಾಯಪಟ್ಟಿದ್ದಾರೆ. ಇದು ವಿಜಯನಗರ ಅರಸರ ಕಾಲದಲ್ಲಿ ಏಳಿಗೆಗೆ ಬಂದ ಪಾಳೆಯಗಾರರ ಸಮಯದಲ್ಲಿ ಈ ವಲಸೆ ನಡೆದಿರಬಹುದೆಂದು ನನ್ನ ಊಹೆ. ಹೀಗಾಗಿ ೧೫-೧೬ನೇ ಶತಮಾನದಲ್ಲಿ ಉಜ್ಜನಿಯ ಚೌಡಮ್ಮನ ಆಚರಣೆಗಳಲ್ಲಿ, ರೀತಿ ರಿವಾಜುಗಳಲ್ಲಿ ವೈದಿಕೀಕರಣ ನಡೆದು ದಲಿತರನ್ನು ದೇವಾಲಯದಿಂದ ಹೊರಗಿಡುವ ತಂತ್ರಗಳು ರೂಪುಗೊಂಡಿರಬಹುದು.

ಈ ವಿಚಾರಗಳನ್ನು ಮತ್ತಷ್ಟು ಪುಷ್ಟೀಕರಿಸುವಂತೆ ಹಿ. ಚಿ. ಬೋರಲಿಂಗಯ್ಯನವರ ಅಭಿಪ್ರಾಯಗಳನ್ನು ಅವರ 'ಉಜ್ಜನಿ ಚೌಡಮ್ಮ' ಕೃತಿಯಲ್ಲಿ (ಪುಟ : ೨೧-೨೨) ಕಾಣಬಹುದು. ಸಾವಿರಾರು ವರ್ಷಗಳ ಭಾರತೀಯ ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಯಲ್ಲಿ ತಳವರ್ಗದ ಜನತೆ ಬ್ರಾಹ್ಮಣ್ಯ ತಂತ್ರದ ಬೌದ್ಧಿಕ ಶೋಷಣೆಗೆ ಗುರಿಯಾಗಿ ಇಂದಿಗೂ ನರಳುತ್ತಿದ್ದಾರೆ. ಜನಪದರೂ ಶೋಷಣೆಯನ್ನೇ ಒಂದು ಮೌಲ್ಯವಾಗಿ ಸ್ವೀಕರಿಸುವ ಮಟ್ಟಿಗೆ ಬೌದ್ಧಿಕ ವರ್ಗ ಅದನ್ನು ಸ್ಥಿರೀಕರಿಸುವಲ್ಲಿ ಯಶಸ್ವಿಯಾಗಿರುವುದನ್ನು ಅರ್ಥಮಾಡಿಕೊಳ್ಳಬೇಕಿದೆ. ಪೇಜಾವರ ಸ್ವಾಮೀಜಿ ದಲಿತರಿಗೆ ನೀಡಲು ಹೊರಟಿರುವ ವೈಷ್ಣವ ದೀಕ್ಷೆ ಕೂಡ ಇಂಥಾ ಬ್ರಾಹ್ಮಣ್ಯದ ತಂತ್ರ ಎನ್ನಬಹುದಲ್ಲವೆ ?

**ಹಂ. ಗು. ರಾಜೇಶ್**
ಇತಿಹಾಸ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜ್, ಸೀಗೇಹಳ್ಳಿ, ತುರುವೇಕೆರೆ ತಾಲೂಕು, ತುಮಕೂರು ಜಿಲ್ಲೆ

# ನವಕರ್ನಾಟಕದ ಉಪಯುಕ್ತ ಹೊತ್ತಗೆಗಳು

**ಗೋಹತ್ಯೆ : ಒಂದು ಪರಾಮರ್ಶೆ**

'ಪ್ರಜಾವಾಣಿ'ಯಲ್ಲಿ ಬರುವ ವಿಜ್ಞಾನ ಅಂಕಣದ ಶೈಲಿಗಿಂತ ಭಿನ್ನವಾಗಿರುವಂಥ ಗಂಭೀರತೆಯಿಂದ ಇಲ್ಲಿ ಶ್ರೀ ನಾಗೇಶ್ ಹೆಗಡೆಯವರು ನಿಶ್ಚಿತ ಪ್ರಶ್ನೆಗಳಿಗೆ ಉತ್ತರ ಕೊಡುತ್ತಾರೆ. ವ್ಯಂಗ್ಯ, ಕಟಕಿಗಳಿಗಿಂತಲೂ ಹೆಚ್ಚಾಗಿ ವಿಷಯದ ಸಾಮಾಜಿಕ ಮುಖ, ಆರ್ಥಿಕ ಸ್ಥಿತಿ, ಜೀವನ ದಯೆಗಳು ಗಮನ ಸೆಳೆಯುತ್ತವೆ. ಪ್ರಶ್ನೆಗಳೂ ಅಷ್ಟೆ – ಸಾಮಾನ್ಯವಾಗಿ ಗೋಹತ್ಯೆಯ ಚರ್ಚೆ ಬಂದಾಗಲೆಲ್ಲ ಎದ್ದು ಬರುವಂಥವು.

ನಾನೊಮ್ಮೆ ತಮಿಳುನಾಡಿನ ಪಳನಿಯಲ್ಲಿ ಪಯಣಿಸುತ್ತಿದ್ದಾಗ ನನ್ನ ಮುಂದೆ ದನ-ಹೋರಿಗಳನ್ನು ತುಂಬಿಕೊಂಡು (ಬಹುಶಃ ಕೇರಳದ ಕಡೆಗೆ) ಹೋಗುತ್ತಿದ್ದ ಲಾರಿಯನ್ನು ಕಂಡೆ. ಮೇಲೆ ಕೆಳಗೆ, ಬದಿಗಳೆಲ್ಲ ಬಂದು. ಹಿಂದುಗಡೆ ಮಾತ್ರ ಏರಿ ಇಳಿಯಲು ಅನುಕೂಲವಾಗುವಂತೆ ಗಾಳಿ, ಬೆಳಕು ಹೋಗುವ ಎಡೆ ಇತ್ತು. ದನಗಳಿಗೆ ಮಿಸುಕಾಡಲು ಕೂಡ ಆಗದಂತೆ ನಿಲ್ಲಿಸಿದ್ದರು. ಕೆಲವು ದನಗಳ ಕಣ್ಣುಗಳಿಂದ ನೀರು ಬರುತಿತ್ತು - ನಿಂತು ಗಂಟೆಗಟ್ಟಲೆ ಅಲ್ಲಾಡದಿರುವ, ಅಲ್ಲಾಡಿದರೂ ಮೇಲೆ ಕೆಳಗೆ ಕುಣಿಯುವ ಆಯಾಸವೇ ಇದಕ್ಕೆ ಕಾರಣವಾಗಿರುಬಹುದು. ಈ ಅವಸ್ಥೆ ಯಾವ ಪ್ರಾಣಿಗೂ ಬರಬಾರದು. ಬಡಪಾಯಿ ದನಗಳಿಗಂತೂ ಹೇಗೂ ಬರಬಾರದು ಎನ್ನಿಸಿತ್ತು. ಈ ಕಿರುಪುಸ್ತಿಕೆಯಲ್ಲಿ ಇಂಥ ಸೂಕ್ಷ್ಮ ವಿಷಯಗಳ ಮೇಲೂ ಬೆಳಕು ಬಿದ್ದಿದೆ.

**ಸಾದತ್ ಹಸನ್ ಮಂಟೋ ಅವರ ದೇಶ ವಿಭಜನೆಯ ಕಥೆಗಳು**

ಈ ಕಥಾ ಸಂಕಲವನ್ನು ಓದುತ್ತಿದ್ದಂತೆ ಮೂಲ ಲೇಖಕರ ಬದುಕಿಗೇಕೆ ಕಲ್ಲು ಬಿತ್ತು ಎಂದು ಆಶ್ಚರ್ಯವಾಗುತ್ತದೆ. ಅನುವಾದದಲ್ಲಿ ಕೃತಕತೆ ಕಾಣುವುದಿಲ್ಲ. ಚಿತ್ರಗಳಲ್ಲಿ ಕಪ್ಪು ಹೆಚ್ಚು ವ್ಯಾಪಕವಾಗಿದೆ – ದೇಶ ವಿಭಜನೆಯ ಅಧೋಮುಖದ ಪ್ರತೀಕವೆಂದೆ ? ಇರಬಹುದು. ಕಟ್ಟಾಡಿಯವರ ಪ್ರಸ್ತಾವನೆ ಮಂಟೋ ಅವರ ಬದುಕಿನ ಬಗೆಗೂ ಬರಹದ ಬಗೆಗೂ ಬೆಳಕು ಚೆಲ್ಲುವುದರಿಂದ ಓದುಗರಿಗೆ ಕಥೆಗಳ ಹಿನ್ನೆಲೆಯನ್ನು ಗ್ರಹಿಸಲು ಅನುಕೂಲವಾಗುತ್ತದೆ.

**ಪರಕಾಯ**

ಸಂಸ್ಕೃತಿ, ಭಾಷೆ, ಸಾಹಿತ್ಯದ ಬಗೆಗಿನ ಗಂಭೀರ ಲೇಖನಗಳು – ಓದೂ ನಿಧಾನ ನಡೆಯಲ್ಲಿ ಸಾಗಬೇಕಾಗಬಹುದು. ಇಂಗ್ಲಿಷ್ ಮತ್ತು ಸಂಸ್ಕೃತ ಪದಗಳು, ಬರುವಾಗ ಯೋಚಿಸಿ ಮುಂದುವರಿದರಾಯಿತು. ಓರಿಯಂಟಲಿಸಂ, ಸರ್ವ ರುಜಾಪಹಾರಿ (ಸರ್ವರುಜಿನೋಪಹಾರಿ ?), ವರ್ನಾಕ್ಯುಲರ್ ಜೆಂಡರ್, ರೂಪ ನಿಷ್ಠತೆ (ಪುಟ ೧೫) – ಇವನ್ನು ಅರ್ಥಯಿಸಿಕೊಂಡೇ ಓದುಗರು ಮುಂದುವರಿಯುವುದು ಲೇಸು. ಹೀಗೆ ಮಾಡಿದರೆ ಓದಿಗೆ ತಕ್ಕ ಪ್ರತಿಫಲವಾದ ಲೇಖನಗಳೊಳಗಿನ ಒಳ ನೋಟ ಸಿಗುತ್ತದೆ.

ಈ ಬರಹಗಳು ಬೇರೆ ಬೇರೆ ಸಂದರ್ಭಗಳಲ್ಲಿ, ಸಂದರ್ಭಗಳಿಗಾಗಿ ಬರೆದಂಥವು ಎಂದು ಲೇಖಕರೇ ಹೇಳಿದ್ದಾರೆ. ಕೆಲವು ಸಂದರ್ಭಗಳು ತಿಳಿಯುತ್ತವೆ; ಕೆಲವು ತಿಳಿಯುವುದಿಲ್ಲ. ತಿಳಿಯುವಂತಿರುತಿದ್ದರೆ ಓದುಗನ ಫ್ರೇಮ್ ಆಫ್ ರೆಫರೆನ್ಸ್ ನಿಶ್ಚಿತವಾಗಿ, ಅನುಕೂಲಕರವಾಗಬಹುದಾಗಿತ್ತೇನೋ ಎನಿಸುತ್ತದೆ.

ರಾಷ್ಟ್ರೀಯ ವಾದ - ಸಮಾನ ನಾಗರಿಕ ಸಂಹಿತೆ, ಉಪರಾಷ್ಟ್ರೀಯತೆ ಮತ್ತು ಭಾಷೆ, ಸ್ಥಳೀಯ - ಪರಕೀಯ, ರಾಷ್ಟ್ರೀಯತೆ - ಸ್ಥಳೀಯ ಸಂಸ್ಕೃತಿ, ಉದ್ಯಮಿವರ್ಗ - ಗ್ರಾಹಕವರ್ಗ – ಹೀಗೆ ಹಲವು ಯಮಳಗಳ ಚಿಂತನೆ ಇನ್ನೂ ಆಳವಾದ ಯೋಚನೆಗಳ ಕಡೆಗೆ ನಡೆಸುತ್ತದೆ.

**ಬಿ. ರಂಗನಾಯಕಮ್ಮ**

ಈ ಕೃತಿಯಲ್ಲಿ ರಂಗನಾಯಕಮ್ಮ ಅವರ ಜೀವನ ಗಾಥೆ ಸರಳವಾಗಿ ಸ್ಪಷ್ಟವಾಗಿ ಮೂಡಿದೆ. ಅವರು ಸ್ವತಃ 'ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಭಾಗವಹಿಸಲು ಬರುವವರಿದ್ದರೆಂದೂ ಕೊನೆಯ ಗಳಿಗೆಯಲ್ಲಿ ಅನಿವಾರ್ಯವಾಗಿ ಆ ಯೋಚನೆ ಬಿಡಬೇಕಾಯಿತೆಂದೂ ಲೇಖಕಿಯವರಿಂದ ತಿಳಿಯಿತು. ಇಂದಿನ ವಿದ್ಯಾರ್ಥಿನಿಯರು ಭಾರತದ ವರ್ತಮಾನ ಪರಿಸ್ಥಿತಿಯಲ್ಲಿ ಕೆಲವೊಮ್ಮೆ ಪಡಬೇಕಾದ ಬವಣೆಗಳೂ ಈ ಜೀವನ ಚರಿತ್ರೆಯಿಂದ ಬೆಳಕು ಕಾಣುತ್ತದೆ. ಹದಿಹರೆಯದ ವಿದ್ಯಾರ್ಥಿನಿಯವರ ನೈತಿಕ ಧೈರ್ಯವನ್ನು ಹೆಚ್ಚಿಸಬಲ್ಲ ಕೃತಿ ಇದು.

**ದೀಪಧಾರಿಣಿ**

ದೀಪಧಾರಿಣಿಯಲ್ಲಿ ಬರುವ ಫ್ಲಾರೆನ್ಸ್ ನೈಟಿಂಗೇಲ್ ಬದುಕಿನ ನಿರೂಪಣೆ ಮಾಡುವ ಕೃತಿಗಳು ಹಲವಿವೆ. ಎಂ. ವಿಶ್ವೇಶ್ವರಯ್ಯನವರ ಬಗೆಗಿನ ಪುಸ್ತಕಗಳಂತೆ ಹೆಚ್ಚು ವಿವರಗಳೊಂದಿಗೆ ಹೊಸ ನಿರೂಪಣ ರೀತಿಗಳಿಂದ ಬರುವ ಜೀವನ ಚರಿತ್ರೆಗಳು ಬೇಸರ ತರಿಸುವುದಿಲ್ಲ. ನೈಟಿಂಗೇಲ್ ತೀರಿಹೋಗಿ ೧೦೦ ವರ್ಷಗಳಾದುವು. ಆದ್ದರಿಂದ ಆಕೆಯ ಜೀವನದೊಂದಿಗೆ ಆಕೆ ದುಡಿದ ಶುಶ್ರೂಷಣಾ ಕ್ಷೇತ್ರದ ಸಮೀಕ್ಷೆಯು ಸಂದರ್ಭೋಚಿತವಾಗಿದೆ. ಶೀರ್ಷಿಕೆ ಕಾವ್ಯಾತ್ಮಕವೂ ವಾಸ್ತವಕ್ಕೆ ಹತ್ತಿರವೂ ಆಗಿ ಆಕರ್ಷಕವಾಗಿದೆ.

**ಅಮ್ಮನಿಗೆ ಹಜ್ ಬಯಕೆ**

ಕಥಾ ಸಂಕಲದ ಭಾಷೆ, ಶೈಲಿ ಯಾವುದೇ ಕೃತಕತೆಯಿಲ್ಲದೆ ಮುಂದುವರಿದಿದೆ. 'ಸುಂದರವಾಗಿ ಸುಲಲಿತವಾಗಿ ಕನ್ನಡಕ್ಕೆ ಅನುವಾದ' ಎಂಬ ನೇಮಿಚಂದ್ರರ ಮಾತು ನಿಜ.

೧೨ ಕತೆಗಳಲ್ಲಿ ೪ ಕತೆಗಳ ಕೊನೆಗೆ (ಪ್ರಕಟಿಸಿದ) ವರ್ಷಗಳ ನಮೂದು ಇದೆ. ಪ್ರಾಯಶಃ ಅಲ್ಲಿನ ಪತ್ರಿಕೆಗಳಲ್ಲಿ ಪ್ರಕಟಿಸಿದ್ದರ ಉಲ್ಲೇಖ ಇರಬಹುದು. ಮಹಿಳಾ ಅನುಭವಗಳೊಂದಿಗೆ ಗಂಡಸರ ಭಾವಲಹರಿಯನ್ನೂ ಕತೆಗಾರ್ತಿ ಅಸ್ಮಾ ನಾಡಿಯಾ ಹಿಡಿದಿರಿಸುವ ರೀತಿ ವಿಶೇಷವಾದದ್ದು. ಇಸ್ಲಾಮ್ ಮತವನ್ನು ಅನುಸರಿಸುವ ಸಮಾಜದಲ್ಲಿ ಜನರ ಬದುಕಿನ ಕತೆಗಳು ಇತ್ತೀಚೆಗಿನ ವರ್ಷಗಳಲ್ಲಿ ಆ ಸಮಾಜದವರೇ ಆದ ಬರಹಗಾರರಿಂದ ಕನ್ನಡದಲ್ಲಿ ಬರುತ್ತಿವೆ. ಆದರೆ ಅವುಗಳಿಗಿಂತ ಈ ಕತೆಗಳು ಏಕೋ ಭಿನ್ನವಾಗಿ ಕಾಣುಸುತ್ತಿವೆ, ಅಂಕಿತನಾಮಗಳಲ್ಲಷ್ಟೇ ಅಲ್ಲ ಅಂತರ್ವರ್ತನೆಯ ಒಟ್ಟೂ ರೀತಿಯಲ್ಲಿ ಕೂಡ. ಮತವನ್ನು ಮೀರಿದ ಮತ್ತಾವುದೋ ಪ್ರಭಾವ ಇದಕ್ಕೆ ಕಾರಣವಾಗಿರಬಹುದು.




**ಸೂಫಿ ಮಹಿಳೆಯರು**

ಸಾಕಷ್ಟು ಅಧ್ಯಯನದ ಫಲವಾಗಿ ಬಂದ ಕೃತಿ ಎಂದು ಮೇಲುನೋಟಕ್ಕೂ ಇಡೀ ಓದಿಗೂ ಕಾಣಸುತ್ತದೆ. ಈ ಮಹಿಳೆಯರೆಲ್ಲರೂ ಐತಿಹಾಸಿಕ ವ್ಯಕ್ತಿಗಳು. ಆದರೆ ಅವರ ಬದುಕಿನಲ್ಲಿ ಬರುವ ಹಲವು ಘಟನೆಗಳು ಅಲೌಕಿಕವೇನೋ ಎಂದು ತೋರುತ್ತವೆ. ಹೀಗಿದ್ದರೂ ಸೂಫಿ ಹೆಸರನ್ನಷ್ಟೇ ಕೇಳಿದವರಿಗೆ ಅವರ ಯೋಚನೆ, ಜೀವನಶೈಲಿ, ದೇವರ ಜತೆಗಿನ ಮಾನಸಿಕ ಸಂಬಂಧ – ಇವೆಲ್ಲವುಗಳ ಬಗ್ಗೆ ಇಲ್ಲಿನ ಓದಿನಿಂದ ಒಂದು ಚಿತ್ರಣ ಸಿಗುತ್ತದೆ. ಸೂಫಿ ಮಹಿಳೆಯರ ಹೇಳಿಕೆ, ಉಪದೇಶ, ಬರಹಗಳನ್ನು ಉದ್ಧರಿಸಿರುವುದು ಇಂಥ ಚಿತ್ರಣವನ್ನು ಪಡೆಯಲು ಸಹಾಯಕ ಎನಿಸುತ್ತದೆ.

**ಕಾಲುಹಾದಿಯ ಕೋಲ್ಮಿಂಚುಗಳು – ಮಹಿಳಾ ವಿಜ್ಞಾನಿಗಳು**
**ಮತ್ತು ಹೋರಾಟದ ಹಾದಿಯಲ್ಲಿ ಧೀಮಂತ ಮಹಿಳೆಯರು**

ಇವೆರಡಕ್ಕೂ ಸಾಮಾನ್ಯವಾದ ಅಂಶಗಳು ನೇಮಿಚಂದ್ರರ ವ್ಯಾಪಕ ಓದು, ವೈಯಕ್ತಿಕ ಭೇಟಿ - ಪ್ರವಾಸ - ಸಂದರ್ಶನಗಳ ಫಲವಾಗಿ ಸಿಕ್ಕಿದ ವೈಯಕ್ತಿಕ ಅನುಭವ ಹಾಗೂ ಮಹಿಳೆಯರ ಸ್ಥಿತಿಗತಿ ಬಹಳಷ್ಟು ಸುಧಾರಿಸಬೇಕೆಂಬ ಬದ್ಧತೆ. ಇವು ನಿರೂಪಣೆಗೂ ಭಾಷೆಗೂ ಮೊನಚು ಮತ್ತು ಖಚಿತತೆಗಳನ್ನು ನೀಡಿವೆ.

**ಮಹಿಳಾ ವಿಜ್ಞಾನಿಗಳು**

ಒಂದು ರೀತಿಯ ಸಮೀಕ್ಷೆಯಿಂದ ಪ್ರಾರಂಭವಾಗುತ್ತದೆ. ಇದು ಸಾಕಷ್ಟು ದೀರ್ಘವಾಗಿದ್ದು ಸಂಕಲನದ ಇತರ ಲೇಖನಗಳಿಗಿಂತ ಭಿನ್ನವಾಗಿ ನಿಲ್ಲುತ್ತದೆ. ಇದರಲ್ಲಿ ಉಲ್ಲೇಖಗೊಂಡವರಲ್ಲಿ ಹಲವರ ಬಗ್ಗೆ ಮುಂದೆ ಪ್ರತ್ಯೇಕ ಲೇಖನಗಳಿವೆ. ಆದರೆ ಕೆಲವರ ಬಗೆಗಿಲ್ಲ (ಮೇರಿ ಲವಾಸಿಯೇ, ಮಾರ್ಗರೇಟ್ ಕ್ಯಾವೆಂಡಿಶ್, ಮಿಲೀವಾ. ಹೀಗೆ ಬರೆಯುತ್ತಿರುವಾಗಲೇ ಆಲ್ಬರ್ಟ್ ಐನ್‌ಸ್ಟೈನ್ ಮತ್ತು ಮಿಲೀವಾ ಅವರ ವಿವಾಹಪೂರ್ವದ ಹೆಣ್ಣು ಮಗು ಏನಾದಳೆಂದು ಇತಿಹಾಸ ಹೇಳುವುದಿಲ್ಲವಲ್ಲ ಎಂದು ಅನಿಸುತ್ತದೆ. ಲೀಸರ್ಲ್ ಎಂಬ ಹೆಸರಿನ ಆ ಮಗುವಿಗೆ ಜ್ವರ ಬಂದ ಬಳಿಕ ಜಗತ್ತಿನಿಂದ ಹೇಗೆ ಮರೆಯಾಗಿರ ಬಹುದೆಂಬುದನ್ನು ನೆನಪಾದಾಗಲೆಲ್ಲ ಮನ ಮಿಡಿಯುವ ಅನುಭವವಾಗುತ್ತದೆ.) ಹಾಗೆಯೇ ಪ್ರತ್ಯೇಕ ಲೇಖನಗಳಿರುವ ಸೋನ್ಯಾ, ಕ್ಯಾರೊಲಿನ್ ಶೂಮೇಕರ್ ಹೆಸರುಗಳು ಸಮೀಕ್ಷಾ ಲೇಖನದಲ್ಲಿ ಕಾಣಿಸುವುದಿಲ್ಲ. ಪುನರಾವರ್ತನೆಯಾಗುತ್ತದೆ ಎಂದು ಕೈ ಬಿಟ್ಟಿರಬಹುದು.

ಕುತೂಹಲದ ಒಂದು ವಿಷಯವೆಂದರೆ ಪ್ರಾಚೀನ ಕಾಲದಲ್ಲಿ ಇತ್ತು ಎನ್ನಲಾಗುವ (ಸುಮಾರು ೩೦೦೦ ವರ್ಷಗಳಿಂದ ೧೦೦೦ ವರ್ಷಗಳ ಹಿಂದಿನ ಅವಧಿ) ಮಹಿಳೆಯರ ಸ್ಥಾನಮಾನ ಏಕೆ ಮತ್ತು ಹೇಗೆ ಮುಂದೆ ಇಲ್ಲವಾಯಿತು ಎನ್ನುವುದು. ಈ ಪ್ರಶ್ನೆಯನ್ನು ಈ ಪುಸ್ತಕದಲ್ಲಿ ಎತ್ತಲಾಗಿದೆ. ಆದರೆ ಉತ್ತರ ಸಿಗುವುದಿಲ್ಲ. ಶೋಷಣೆಯ ಮಾರ್ಗವನ್ನು ಜಗತ್ತಿಡೀ, ಹೆಚ್ಚಿನ ಪುರುಷ ವರ್ಗ ಅನುಸರಿಸತೊಡಗಿದ್ದು ಐತಿಹಾಸಿಕ ಕಾಲದಲ್ಲೇ. ಅದರ ಮೇಲೆ ಬೆಳಕು ಚೆಲ್ಲುವ ಕೆಲಸ ಕಷ್ಟದ್ದಾದರೂ ಬೆಲೆಯುಳ್ಳದ್ದು ಎನಿಸಿತು. (ಹೆಣ್ಣು ಮಗುವೇ ಕುಟುಂಬದ ವಾರಸುದಾರಳಾಗುವ, ತುಳುನಾಡಿನಲ್ಲಿದ್ದ ಪದ್ಧತಿಯ ನೆನಪು ಈ ಸಂದರ್ಭದಲ್ಲಿ ಆಗುತ್ತದೆ.) ರಾಹುಲ ಸಾಂಕೃತ್ಯಾಯನರು (?) ಪ್ರಾಚೀನ ಸಮಾಜದಲ್ಲಿ ಮಹಿಳೆಯ ಆದ್ಯತೆಯನ್ನ ತಿಳಿಸಿದ ನೆನಪು.

ಸಮೀಕ್ಷಾ ಲೇಖನದಲ್ಲಿ ಉಲ್ಲೇಖಗೊಂಡ ಲೀ ಮೇಟ್ನರ್ ನೊಬೆಲ್ ಪ್ರಶಸ್ತಿಯಿಂದ ವಂಚಿತಳಾದ ಮೊದಲ ದರ್ಜೆಯ ವಿಜ್ಞಾನಿ. ಇದೇ ರೀತಿ ೨೦ನೇ ಶತಮಾನದ ಖಗೋಲ ಆವಿಷ್ಕಾರಗಳಲ್ಲಿ ಬಹಳ ಮಹತ್ವದ್ದೆಂದು ಪರಿಗಣಿಸಲಾದ ಪಲ್ಸಾರ್ ಆವಿಷ್ಕಾರ ಖ್ಯಾತಿಯ ಜೋಸೆಲಿನ್ ಬೆಲ್ ಕೂಡ ನೊಬೆಲ್ ಪ್ರಶಸ್ತಿಯಿಂದ ವಂಚಿತಳಾದಳು. ವಿದಲನ ಸಂಶೋಧನೆಯಲ್ಲಿ ಮೀಟ್ನರ್ ಪಾತ್ರವನ್ನು ವಿಶ್ಲೇಷಿಸಬೇಕಾದಂತೆ ಅಥವಾ ಡಿಎನ್ಎ ಮಾದರಿಯ ಸಂದರ್ಭದಲ್ಲಿ ರೋಸಲಿಂಡ್ ಫ್ರಾಂಕ್ಲಿನ್ ನೀಡಿದ ಸುಳಿವು ಮಾದರಿ ಬಗ್ಗೆ ಬೆಳಕು ಚೆಲ್ಲಿದ್ದನ್ನು ಸಮರ್ಥಿಸಿಕೊಳ್ಳ ಬೇಕಾದಂತೆ, ಪಲ್ಸಾರ್ ಆವಿಷ್ಕಾರವನ್ನು ಜೋಸೆಲಿನ್ ನಡೆಸಿದ್ದಕ್ಕೆ ಯಾವುದೇ ಪುರಾವೆ ಬೇಕಾಗಿರಲಿಲ್ಲ. ಎಲ್ಲರೂ ಅದನ್ನು ಒಪ್ಪಿದ್ದರು. ಆಕೆ ಅದನ್ನು ಸಂಶೋಧನಾ ವಿದ್ಯಾರ್ಥಿಯಾಗಿ ಮಾಡಿದ್ದಳು. ಒಂದಲ್ಲ, ಮೊದಲ ನಾಲ್ಕು ಪಲ್ಸಾರ್‌ಗಳು. ನೊಬೆಲ್ ಪ್ರಶಸ್ತಿ ತನಗೆ ನೀಡದಿದ್ದುದರಿಂದ ಅನ್ಯಾಯವಾಗಲಿಲ್ಲ ಎಂದು ತನ್ನನ್ನು ತಾನೇ ಆಕೆ ಹೊರತುಪಡಿಸಿ ಕೊಂಡುದಂತೂ ಇನ್ನೂ ವಿಚಿತ್ರವಾಗಿತ್ತು!

'ಇತಿಹಾಸದ ಪುಟಗಳಲ್ಲಿ ಅಲೆದಾಟ'ದಲ್ಲಿ ನೇಮಿಚಂದ್ರ ಅವರು ವ್ಯಕ್ತಪಡಿಸಿದ ಹಾಗೆ ಕಳೆದುಕೊಂಡಂತೆ ಕಾಣಿಸುವ ಕೊಂಡಿಗಳನ್ನು ಹುಡುಕುವುದು ನಿಜಕ್ಕೂ ಕಷ್ಟದ ಕೆಲಸ. ಅವರು ಕೊಲ್ಕೊತ್ತದ ಕದಂಬಿನಿ ಗಂಗೂಲಿಯವರನ್ನು ಉಲ್ಲೇಖಿಸುವಾಗ ಮದ್ರಾಸಿನ ಮುತ್ತುಲಕ್ಷ್ಮಿ ರೆಡ್ಡಿಯವರ ನೆನಪಾಗುತ್ತದೆ. ಈ ಎಲ್ಲ ಬಿಡಿಕತೆಗಳನ್ನು ಸಮಗ್ರ ಕೃತಿಯನ್ನಾಗಿ ಹೆಣೆಯುವುದು ಎಷ್ಟು ದೊಡ್ಡ ಕೆಲಸ ಎಂದೂ ಅನಿಸುತ್ತದೆ.

**ಅಡ್ಯನಡ್ಕ ಕೃಷ್ಣ ಭಟ್**
'ಸಾರಸ', ೨೩೦೧, ೨ನೇ ಅಡ್ಡ ರಸ್ತೆ, ವಿಜಯನಗರ
೨ನೇ ಹಂತ, ಮೈಸೂರು - ೫೭೦ ೦೧೭

# ಅಯೋಧ್ಯೆ ತೀರ್ಪು:

## ಕಾಜಿ ನ್ಯಾಯ: ಹಾವೇರಿ ಪಂಚಾಯ್ತಿ

**ಕೋ. ಚೆನ್ನಬಸಪ್ಪ**

ಅಂತೂ ಅರವತ್ತು ವರ್ಷಗಳ ನಂತರ ಬಾಬ್ರಿ ಮಸೀದಿ ರಾಮಜನ್ಮ ಭೂಮಿ ವಿವಾದದ ತೀರ್ಪು ಹೊರಬಿತ್ತು. ಅಲಹಾಬಾದ್ ಉಚ್ಚ ನ್ಯಾಯಾಲಯದ ಲಕ್ನೋ ಪೀಠದ ಮೂವರು ನ್ಯಾಯಮೂರ್ತಿಗಳು ೮೧೮೯ ಪುಟಗಳ ಜಗತ್ತಿನಲ್ಲಿಯೇ ಅತ್ಯಂತ ದೀರ್ಘ ತೀರ್ಪನ್ನು ಬರೆದಿದ್ದಾರೆ. ಅದರಲ್ಲಿ ಏನಿದೆ ಎಂಬುದನ್ನು ಖಚಿತವಾಗಿ ತಿಳಿಯಬೇಕೆಂದರೆ ಆ ತೀರ್ಪನ್ನು ಆಮೂಲಾಗ್ರವಾಗಿ ಓದಬೇಕಾಗುತ್ತದೆ. ಓದಿದ್ದನ್ನು ಅರ್ಥಮಾಡಿಕೊಳ್ಳುವುದು ಓದುವುದಕ್ಕಿಂತ ಕಷ್ಟ. ಅದನ್ನು ಪೂರ್ತಿಯಾಗಿ ಓದಲು ೩-೪ ವರ್ಷಗಳೇ ಬೇಕಾಗಬಹುದು. ಆದರೆ ಅದೆಲ್ಲವನ್ನು ಓದಿ ವಿವರಗಳನ್ನು ತಿಳಿಯಬೇಕಾದ ಅಗತ್ಯ ಇಲ್ಲ. ಅದರಲ್ಲಿ ಏನಿದೆ ಎಂಬುದನ್ನು ಸ್ಥೂಲವಾಗಿ ತಿಳಿದರೆ ಸಾಕು.

ಈ ವಿವಾದ ಉಂಟಾದದ್ದು ಹೇಗೆ ಎಂಬುದು ಬಹುಮಟ್ಟಿಗೆ ಗೊತ್ತು. ೧೫೨೮ರಿಂದ ಅಯೋಧ್ಯೆಯಲ್ಲಿದ್ದ ಬಾಬ್ರಿ ಮಸೀದಿ ಎಂಬ ಕಟ್ಟಡವಿದ್ದ ಜಾಗ ರಾಮಚಂದ್ರ ಜನ್ಮಭೂಮಿಯೆಂದೂ, ಆ ಜಾಗದಲ್ಲಿ ಒಂದು ರಾಮಮಂದಿರ ನಿರ್ಮಾಣವಾಗಿತ್ತೆಂದೂ, ೧೫೨೮ರಲ್ಲಿ ಆ ರಾಮಮಂದಿರವನ್ನು ಮೊಘಲರ ದೊರೆ ಬಾಬರನ ಆಳ್ವಿಕೆಯಲ್ಲಿ ಧ್ವಂಸ ಮಾಡಿ ಅಲ್ಲಿಯೇ ಬಾಬ್ರಿ ಮಸೀದಿಯನ್ನು ಕಟ್ಟಿದರೆಂದೂ, ಅದರಿಂದ ಹಿಂದೂಗಳಿಗೆ ಶಾಶ್ವತ ಅಪಮಾನವಾಗಿದೆ ಎಂದೂ, ಹಿಂದೂಗಳು ಮುಸ್ಲಿಮರ ಆಳ್ವಿಕೆಗೆ ದಾಸರನ್ನಾಗಿ ಮಾಡಿದ ಸಂಕೇತವೆಂದೂ ಬ್ರಿಟಿಷರ ಆಳ್ವಿಕೆ ಪ್ರಾರಂಭವಾದಾಗ ಕೆಲವು ಹಿಂದುತ್ವದ ಉಗ್ರವಾದಿಗಳು ತಕರಾರು ಎತ್ತಿದರು. ಮಸೀದಿ ಧ್ವಂಸ ಮಾಡಿ ಹಿಂದೂಗಳೂ ಅಲ್ಲಿಯೇ ಮತ್ತೆ ರಾಮಮಂದಿರ ನಿರ್ಮಿಸಬೇಕೆಂದು ಹವಣಿಸಿದರು. ಬ್ರಿಟಿಷರು ಹಿಂದೂಗಳ ವಾದವನ್ನು ತಿರಸ್ಕರಿಸಿದ್ದರು. ಆದರೂ ಹಿಂದೂ ಉಗ್ರವಾದಿಗಳು ಮತ್ತೆ ಮತ್ತೆ ವಿವಾದವನ್ನು ಕೆದಕುತ್ತಲೆ ಬಂದರು. ಆದರೂ ಬಾಬ್ರಿ ಮಸೀದಿ ಕೆಡವಿ ರಾಮಮಂದಿರ ಕಟ್ಟುವುದಕ್ಕೆ ಅವಕಾಶ ಕೊಟ್ಟಿರಲಿಲ್ಲ.

೧೯೪೭ರಲ್ಲಿ ಬ್ರಿಟಿಷ್ ಆಡಳಿತ ಕೊನೆಗೊಂಡು ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ೧೯೪೮-೪೯ರಲ್ಲಿ ದೇಶದಲ್ಲಿ ಭಯಂಕರವಾದ ಹಿಂದೂ ಮುಸ್ಲಿಂ ದೊಂಬಿ ನಡೆಯಿತು. ಆ ದೊಂಬಿಯ ಕಾಲದಲ್ಲಿ ಬಾಬ್ರಿ ಮಸೀದಿ ಆಡಳಿತ ನಡೆಸುತ್ತಿದ್ದ ಸಜ್ಜದ ನಿಶಾನ್ ಮತ್ತು ಇತರ ಮುಸ್ಲಿಂ ಸಮುದಾಯದವರು ಅಯೋಧ್ಯೆಯನ್ನು ಬಿಟ್ಟು ಓಡಿಹೋದರು. ಆಗ ೧೯೪೯ನೇ ಡಿಸೆಂಬರ್ ೨೨-೨೩ರ ಮಧ್ಯರಾತ್ರಿ ಹಿಂದೂ ಉಗ್ರವಾದಿಗಳು ಅಯೋಧ್ಯೆಯಲ್ಲಿದ್ದ ೩ ಗುಮ್ಮಟಗಳ ಮಸೀದಿಯ ಮಧ್ಯದ ಗುಮ್ಮಟದ ಕೆಳಗೆ ರಾಮ,. ಲಕ್ಷ್ಮಣ, ಹನುಮಂತರ ಚಿಕ್ಕ ವಿಗ್ರಹಗಳನ್ನು ರಾತ್ರೋರಾತ್ರಿ ತಂದಿಟ್ಟರು. ಈ ವಿಚಾರದಲ್ಲಿ ಆಗ ಪ್ರಧಾನಿಯಾಗಿದ್ದ ಪಂಡಿತ್ ಜವಾಹರ್‌ಲಾಲ್ ನೆಹರು ತುಂಬಾ ವ್ಯಾಕುಲಗೊಂಡು ಹಿಂದೂಗಳ ಕ್ರಮ ಭಾರತದ ಜಾತ್ಯತೀತತೆ, ಸರ್ವಧರ್ಮ ಸಮನ್ವಯ ಸಮಾನತೆ ಮತ್ತು ಉದಾರ ಬಹುಮುಖೀ ಸಂಸ್ಕೃತಿಯ ಈ ದೇಶಕ್ಕೆ ಅಪಾಯ ಉಂಟಾದೀತೆಂದು ಬಗೆದರು. ಆಗ ಉತ್ತರ ಪ್ರದೇಶದ ಮುಖ್ಯಮಂತ್ರಿಯಾಗಿದ್ದ ಶ್ರೀ ಗೋವಿಂದವಲ್ಲಭ ಪಂತರಿಗೆ ನೆಹರು ಪತ್ರ ಬರೆದು ಹಿಂದೂಗಳು ಬಾಬ್ರಿ ಮಸೀದಿಯಲ್ಲಿ ದುರಾಕ್ರಮಣ ಮಾಡಿ (ದೌರ್ಜನ್ಯದಿಂದ) ಇಟ್ಟ ವಿಗ್ರಹಗಳನ್ನು ತೆಗೆಯಬೇಕೆಂದು ಆದೇಶ ನೀಡಿದರು. ಆದರೆ ಮುಖ್ಯಮಂತ್ರಿ ಗೋವಿಂದವಲ್ಲಭ ಪಂತರು ಪ್ರಧಾನಿಗಳ ಆಜ್ಞಾ ರೂಪದ ವಿನಂತಿಯನ್ನು ಪಾಲಿಸಲಿಲ್ಲ. ಈ ವಿಚಾರವಾಗಿ ನೆಹರು, ಸರ್ದಾರ ಪಟೇಲ, ಸಿ. ರಾಜಗೋಪಾಲಚಾರಿ – ಮುಂತಾದವರಿಗೆ ಬರೆದ ಪತ್ರಗಳು ಮತ್ತು ಉತ್ತರಗಳ ವಿವರಗಳನ್ನು ಎ. ಜಿ. ನುರಾಣಿ ಬರೆದ 'ಬಾಬ್ರಿ ಮಸ್ಜಿದ್' ಎಂಬ ಪುಸ್ತಕದಲ್ಲಿ ಕೊಟ್ಟಿದ್ದಾರೆ. ಅಕ್ರಮವಾಗಿ ತಂದಿಟ್ಟ ಆ ವಿಗ್ರಹಗಳನ್ನು ಪೂಜೆ ಮಾಡಬೇಕೆಂದು ಹಿಂದೂ ಉಗ್ರವಾದಿಗಳು, ಅದರಲ್ಲೂ ಅಯೋಧ್ಯೆಯಲ್ಲಿದ್ದ ಸನ್ಯಾಸಿಗಳು, ಸಂತರೆಂಬ ಗಾಂಜಾಬುರುಕ ನಿರುದ್ಯೋಗಿಗಳು ಮುಂತಾದವರು ಪ್ರಯತ್ನಿಸಿದಾಗ ಹಿಂದೂ ಮುಸ್ಲಿಂ ಕೋಮು ದೊಂಬಿ ಗಲಭೆಗಳು ಉಂಟಾದವು. ಈ ಕೋಮುಗಲಭೆಯಿಂದ ದೇಶಕ್ಕೆ ಅಪಾರ ಹಾನಿ ಉಂಟಾಗಬಹುದೆಂದು ಫೈಜಾಬಾದ್ ಜಿಲ್ಲಾ ಮ್ಯಾಜಿಸ್ಟ್ರೇಟ್ (ಡಿ.ಸಿ.) ಬಾಬ್ರಿ ಮಸೀದಿಯೊಳಗೆ ಯಾರೂ ಪ್ರವೇಶಿಸಬಾರದೆಂದು ನಿಷೇಧಾಜ್ಞೆಯನ್ನು ವಿಧಿಸಿದರು. ೧೯೪೯ರಿಂದ ಅಲ್ಲಿ ಹಿಂದೂ ಮುಸ್ಲಿಂ ಯಾರೂ ಪೂಜೆ, ಪ್ರಾರ್ಥನೆ ಮಾಡದಂತೆ ಆಗಿತ್ತು. ಆದರೂ ಹಿಂದುತ್ವ ಉಗ್ರವಾದಿಗಳು ಕ್ರಮೇಣ ವಿಶ್ವ ಹಿಂದೂ ಪರಿಷತ್, ಭಜರಂಗದಳ ಮುಂತಾದ ಹಿಂದೂ ಕೋಮುವಾದಿ ಸಂಘಟನೆಗಳು ಆಗಾಗ ರಾಮಜನ್ಮಭೂಮಿಯ ವಿವಾದವನ್ನು ಎತ್ತುತ್ತಿದ್ದವು. ಅದಕ್ಕೆ ಉತ್ತರ ಪ್ರದೇಶದಲ್ಲಿ ಆಗಲಿ ದೇಶದ ಇತರ ಕಡೆಗಳಲ್ಲಾಗಲಿ ಯಾವ ಗಣನೀಯ ಗಮನ ಹರಿಸಿರಲಿಲ್ಲ. ೧೯೭೭ರ ನಂತರ ಹಿಂದೂ ಮಹಾಸಭಾ ಮತ್ತು ಆರ್.ಎಸ್.ಎಸ್. ಬೆಂಬಲಿತ ಸಂಘ ಪರಿವಾರ ರಾಜಕೀಯದಲ್ಲಿ ಕಾಲಿರಿಸಿದ ಮೇಲೆ ಮತ್ತು ತರುವಾಯ ೮೦-೯೦ರ ದಶಕದಲ್ಲಿ ಕೆಲವು ರಾಜ್ಯಗಳಲ್ಲಿ ಬಿ.ಜೆ.ಪಿ. ಸರ್ಕಾರಗಳು ಅಸ್ತಿತ್ವಕ್ಕೆ ಬಂದಮೇಲೆ ಅದರಲ್ಲೂ ಸಂಸತ್ತಿನಲ್ಲಿ ಸಂಘ ಪರಿವಾರದ ಪ್ರತಿನಿಧಿಗಳು ಗಣನೀಯ ಪ್ರಮಾಣದಲ್ಲಿ ಪ್ರವೇಶ ಮಾಡಿದ ಮೇಲೆ ರಾಮಜನ್ಮಭೂಮಿ ವಿವಾದವು ವಿಧಾನಸಭೆಗಳಲ್ಲಿ ಮತ್ತು ಸಂಸತ್ತಿನಲ್ಲಿ ಚರ್ಚೆಗೆ ಗ್ರಾಸವಾಯಿತು. ಅದರಲ್ಲೂ ೧೯೮೦-೯೦ರ ಮಧ್ಯೆ ಉತ್ತರಪ್ರದೇಶ, ಮಧ್ಯಪ್ರದೇಶ ಮತ್ತು ರಾಜಸ್ಥಾನದಲ್ಲಿ ಬಿ.ಜೆ.ಪಿ. ಸರ್ಕಾರಗಳು ಅಸ್ತಿತ್ವಕ್ಕೆ ಬಂದಮೇಲೆ ರಾಮಜನ್ಮಭೂಮಿ ಘೋಷಣೆ ಪ್ರಬಲವಾಯಿತು. ಅದರ ಬೆಂಬಲದಿಂದಲೇ ಉತ್ತರಪ್ರದೇಶದಲ್ಲಿ



ಕಲ್ಯಾಣಸಿಂಗ್ ಸರ್ಕಾರ ಸ್ಥಾಪನೆಯಾಯಿತು. ತರುವಾಯ ಎಲ್. ಕೆ. ಅಡ್ವಾಣಿ ಸೋಮನಾಥಪುರದಿಂದ ರಾಮರಥ ಯಾತ್ರೆ ಕೈಗೊಂಡು ಧನುರ್‌ಧಾರಿಗಳಾಗಿ ಅಯೋಧ್ಯೆ ಕಡೆ ಯಾತ್ರೆ ಬೆಳೆಸಿದರು. ಆಗ ಬಾಬ್ರಿ ಮಸೀದಿಯನ್ನು ಕೆಡವಿ ಅಲ್ಲಿಯೇ ರಾಮಮಂದಿರವನ್ನು ಕಟ್ಟುತ್ತೇವೆ ಎಂಬ ಘೋಷಣೆಯನ್ನು ಎಲ್. ಕೆ. ಅಡ್ವಾಣಿ ಸಾರಿದರು. ಕರಸೇವಕರೆಂಬ ಅಗ್ನಿಭಕ್ಷಕರಿಗೆ ಬಾಬ್ರಿ ಮಸೀದಿ ಧ್ವಂಸ ಮಾಡಲು ಕುಮ್ಮಕ್ಕು, ಪ್ರೋತ್ಸಾಹ ಕೊಟ್ಟರು. ಈ ರಾಮರಥ ಯಾತ್ರೆಯ ಪರಿಣಾಮವಾಗಿ ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿ ಕರಸೇವಕರ ದಂಡು ಹಾಡುಹಗಲೇ ಉತ್ತರಪ್ರದೇಶದ ಮುಖ್ಯಮಂತ್ರಿ ಕಲ್ಯಾಣ ಸಿಂಗ್‌ರ ಬೆಂಬಲದಿಂದಲೇ ದಿನಾಂಕ ೬-೧೨-೧೯೯೨ರಂದು ಧ್ವಂಸವಾಗಿಹೋಯಿತು. ಇದೇ ದೇಶದಲ್ಲಿ ಭಯಂಕರವಾದ ಅಶಾಂತಿ, ಕೋಮುದ್ವೇಷ ಮುಂತಾದ ದುಷ್ಪರಿಣಾಮವನ್ನುಂಟುಮಾಡಿತು. ಆ ದೊಂಬಿಯಲ್ಲಿ ಅಂದಾಜು ೨೦೦೦ ಜನ ಸತ್ತರೆಂದು ಅನಧಿಕೃತ ಸುದ್ದಿ.

### ಕ್ರೀಡಾಕೂಟ..ಅವ್ಯವಹಾರ.. ಅಧಿಕಾರಿಗಳ ತಲೆದಂಡ..?!



ಅಂತೂ ಆಟಗಾರರಿಗೆ ಉದ್ದೀಪನಾ ಮದ್ದು ಪರೀಕ್ಷೆ... ಅಧಿಕಾರಿಗಳಿಗೆ ಭ್ರಷ್ಟಾಚಾರ ಮದ್ದು ಪರೀಕ್ಷೆ ಕಡ್ಡಾಯ ಅನ್ನೋ ಹಾಗಾಯ್ತು..?!!

೧೫೨೮ರಿಂದ ೧೯೪೯ರವರೆಗೆ ೪೨೧ ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದ, ಮುಸ್ಲಿಮರ ಸ್ವಾಧೀನಾನುಭವದಲ್ಲಿದ್ದ ಬಾಬ್ರಿ ಮಸ್ಜಿದ್ ಕಟ್ಟಡದಲ್ಲಿ ಹಿಂದೂ ಉಗ್ರವಾದಿಗಳು ಅಕ್ರಮ ಪ್ರವೇಶಮಾಡಿ, ದೌರ್ಜನ್ಯದಿಂದ ಆಕ್ರಮಿಸಿ ರಾಮ, ಸೀತೆ, ಆಂಜನೇಯ ವಿಗ್ರಹಗಳನ್ನು ರಾತ್ರೋರಾತ್ರಿ ಕಳ್ಳತನದಿಂದ ತಂದಿಟ್ಟ ಮೇಲೆ ಹಿಂದೂ-ಮುಸ್ಲಿಂ ಕೋಮುಗಲಭೆಯನ್ನು ತಡೆಯಲು ಆ ಮಸ್ಜಿದ್ ಮತ್ತು ಸುತ್ತಮುತ್ತಲ ಜಾಗವನ್ನು ಜಪ್ತಿಮಾಡಿ ಅಲ್ಲಿಗೆ ಹಿಂದೂ-ಮುಸ್ಲಿಮರಿಬ್ಬರೂ ಪ್ರವೇಶಿಸಬಾರದೆಂದು ನಿಷೇಧಾಜ್ಞೆ ವಿಧಿಸಿದರು. ಇದನ್ನು ಪ್ರಶ್ನಿಸಿ ಗೋಪಾಲಸಿಂಗ್ ವಿಶಾರದ ಎಂಬ ಒಬ್ಬಾತ - ತಾನು ಒಬ್ಬ ಧರ್ಮನಿಷ್ಠ ವ್ಯಕ್ತಿಯೆಂದೂ, ತಾನು ಲಾಗಾಯ್ತು ರಾಮಜನ್ಮ ಭೂಮಿಯಲ್ಲಿದ್ದ ವಿಗ್ರಹಗಳನ್ನು ಪೂಜಿಸುತ್ತಿದ್ದೇನೆಂದೂ, ಆ ವಿಗ್ರಹಗಳನ್ನು ಅಲ್ಲಿಂದ ತೆಗೆದುಹಾಕದಂತೆ ಮನಾಯಿ (ನಿಷೇಧ) ಆಜ್ಞೆಯನ್ನು ಕೊಡಬೇಕೆಂದು ಫೈಜಾಬಾದ್ ಜಿಲ್ಲಾ ನ್ಯಾಯಾಲಯದಲ್ಲಿ ದಾವಾ ದಾಖಲು ಮಾಡಿದ. ಎರಡನೆಯ ಇನ್ನೊಂದು ದಾವೆಯನ್ನೂ ಇದೇ ಪರಿಹಾರಕ್ಕೆ ದಾಖಲು ಮಾಡಿದರು. ಅದನ್ನು ತರುವಾಯ ಹಿಂದಕ್ಕೆ ತೆಗೆದುಕೊಳ್ಳಲಾಯಿತು. ೧೯೫೯ರಲ್ಲಿ 'ನಿರ್ಮೋಹಿ ಅಖಾಡ' ಎಂಬ ಆದುವರೆಗೆ ಇಲ್ಲದಿದ್ದ ಒಂದು ಸಂಸ್ಥೆ ಮೂರನೆಯ ದಾವಾ ದಾಖಲು ಮಾಡಿತು. ವಾದಿಯ ವಾದದ ಪ್ರಕಾರ ರಾಮಜನ್ಮಭೂಮಿಯಲ್ಲಿ ರಾಮಮಂದಿರವೆ ಇರಲಿಲ್ಲ, ಅದನ್ನು ಕೆಡವಲೆ ಇಲ್ಲ! ಅಲ್ಲಿ ಬಾಬರ್ ಮಸ್ಜಿದ್ ಕಟ್ಟಿಸಲಿಲ್ಲ!! ೧೯೪೯ಕ್ಕಿಂತ ಮೊದಲೆ ಅನಾದಿಕಾಲದಿಂದ (from time immemorial) ಆ ವಿಗ್ರಹಗಳು ಅಲ್ಲಿಯೆ ಇದ್ದವು !!! ತಾನೇ ಜನ್ಮಭೂಮಿಯ ಮಾಲಿಕನೆಂದೂ ಅದನ್ನು ತನ್ನದೆಂದು ಘೋಷಿಸಬೇಕೆಂದೂ ವಾದಿಸಿದ. ೧೯೬೧ರಲ್ಲಿ ಸೆಂಟ್ರಲ್ ಸುನ್ನಿ ವಕ್ಫ್ ಬೋರ್ಡ್ ಈ ವಿವಾದಕ್ಕೆ ಸಂಬಂಧಿಸಿದಂತೆ ನಾಲ್ಕನೆಯ ದಾವಾ ದಾಖಲು ಮಾಡಿತು. ಅದರ ವಾದವೇನೆಂದರೆ ೧೫೨೮ರಿಂದಲೂ ಬಾಬ್ರಿ ಮಸ್ಜಿದ್ ಪ್ರದೇಶ ತಮ್ಮ ಸ್ವಾಧೀನಾನುಭವದಲ್ಲಿಯೆ ಇದ್ದು ಅಲ್ಲಿ ಮುಸ್ಲಿಮರು ಪ್ರಾರ್ಥನೆ ಮಾಡುತ್ತಿದ್ದಾರೆಂದೂ, ಅಲ್ಲಿ ೧೯೪೯ರಲ್ಲಿ ತಂದಿಟ್ಟ ವಿಗ್ರಹಗಳನ್ನು ತೆರವುಗೊಳಿಸಬೇಕೆಂದೂ, ಅದನ್ನು ತಮ್ಮ ವಶಕ್ಕೇ ಕೊಡಿಸಬೇಕೆಂದು ವಾದ ಮಂಡಿಸಿದರು. ವಿಶ್ವಹಿಂದು ಪರಿಷತ್, ಭಜರಂಗ ದಳ, ಬಿಜೆಪಿ ಬೆಂಬಲದಿಂದ ೧೯೮೯ರಲ್ಲಿ ಕೊನೆಯ ಐದನೆಯ ದಾವಾ ದಾಖಲು ಮಾಡಿ, ಈ ವಿವಾದ ಹಿಂದೂಗಳ ಭಾವನೆಗಳಿಗೆ, ನಂಬುಗೆಗಳಿಗೆ ಸಂಬಂಧಿಸಿರುವುದರಿಂದ, ಅದನ್ನು ನ್ಯಾಯಾಲಯಗಳು ಪರಿಶೀಲಿಸುವ ಅಧಿಕಾರ ಇಲ್ಲವೆಂದೂ, ಈ ವಿವಾದಕ್ಕೆ ರಾಜಕೀಯ ಪರಿಹಾರ ಮಾರ್ಗವೇ ಸೂಕ್ತ ಎಂದು ಪ್ರತಿಪಾದಿಸಿದರು.

ಈ ಎಲ್ಲಾ ದಾವೆಗಳನ್ನು ಕ್ರೋಢೀಕರಿಸಿ ಅಲಹಾಬಾದ್ ಉಚ್ಚ ನ್ಯಾಯಾಲಯ, ಲಕ್ನೊ ಪೀಠದ ಮೂವರು ನ್ಯಾಯ ಮೂರ್ತಿಗಳ ವಿಶೇಷ ಪೀಠವನ್ನು ರಚಿಸಿತು. ಆ ಪೀಠ ಸುಮಾರು ಎರಡು ದಶಕಗಳ ಕಾಲ ವಿಚಾರಣೆ ನಡೆಸಿ ಕೊನೆಗೆ ೨೦-೦೯-೨೦೧೦ರಂದು ಆಖೈರ್ ತೀರ್ಪು ನೀಡಿತು.

ಉಚ್ಚ ನ್ಯಾಯಾಲಯ ೪ ವಿವಾದಾತ್ಮಕ ಅಂಶಗಳನ್ನು (issues) ರೂಪಿಸಿತ್ತು:

೧. ಶ್ರೀರಾಮಜನ್ಮಭೂಮಿ ಬಾಬ್ರಿ ಮಸೀದಿ ಇದ್ದ ಜಾಗವೇ ?

೨. ಒಂದು ವೇಳೆ ಅಲ್ಲಿ ಎಲ್ಲಿಯೋ ರಾಮಚಂದ್ರ ಜನಿಸಿದ್ದ ಎಂದಿಟ್ಟುಕೊಂಡರೂ ಅದೇ ಸ್ಥಳದಲ್ಲಿ ರಾಮಮಂದಿರ ಇತ್ತೆ?

೩. ಒಂದು ವೇಳೆ ರಾಮಮಂದಿರ ಅಲ್ಲಿತ್ತು, ಅದನ್ನು ಕೆಡವಿ ಮಸೀದಿ ಕಟ್ಟಿದ್ದರು ಎಂದಿಟ್ಟುಕೊಂಡರೂ ೧೫೨೮ರಿಂದ ಇಲ್ಲಿಯವರೆಗೆ ಮುಸ್ಲಿಮರ ಸ್ವಾಧೀನದಲ್ಲಿದ್ದ ಬಾಬ್ರಿ ಮಸೀದಿಯನ್ನು ತೆರವುಗೊಳಿಸಿ ಹಿಂದೂಗಳಿಗೆ ಕೊಡಬೇಕೆ ?

೪. ಈ ಸಮಸ್ಯೆಯನ್ನು ಪರಿಹರಿಸುವ ಬಗೆ ಹೇಗೆ ?

ಈಗ ಹೊರಬಿದ್ದಿರುವ, ಪತ್ರಿಕೆಗಳಲ್ಲಿ ಪ್ರಕಟವಾದ ಸರ್ಕಾರ ಮತ್ತು ಉಚ್ಚ ನ್ಯಾಯಾಲಯ ಪ್ರಕಟಿಸಿದ ಅಧಿಕೃತ ಸಾರಾಂಶದ ಆಧಾರದ ಮೇಲೆ ಪರಿಶೀಲಿಸುವುದಾದರೆ ಈಗ ನ್ಯಾಯಪೀಠ ಕೊಟ್ಟಿರುವ ತೀರ್ಪು, ಸಾಕ್ಷ್ಯಾಧಾರವನ್ನು ಅವಲಂಬಿಸಿದ, ಕಾನೂನಿಗೆ ಅನುಗುಣವಾದ ನ್ಯಾಯತೀರ್ಪೆ ? ಅಥವಾ ಜನರ ಕುರುಡು ನಂಬಿಕೆ ಮತ್ತು ಧಾರ್ಮಿಕ ಅಭಿಪ್ರಾಯಗಳಿಗೆ ಮನ್ನಣೆ ಕೊಡುವ ಧಾರ್ಮಿಕ ನಿರ್ಧಾರವೇ ? – ಇದೀಗ ಮುಖ್ಯ ಪ್ರಶ್ನೆ:

ರಾಮ ಎಲ್ಲಿ ಜನಿಸಿದ ಎಂಬ ವಿಚಾರದಲ್ಲಿ ಉತ್ತರಿಸಲಾಗದ ಸಮಸ್ಯೆ ಎದುರಾಗುತ್ತದೆ. ಈ ವಿಚಾರದಲ್ಲಿ ಐತಿಹಾಸಿಕ ದಾಖಲೆಗಳಲ್ಲಿ ರಾಮ ಎಲ್ಲಿ ಹುಟ್ಟಿದ್ದನೋ ಯಾವುದೂ ನಿಖರವಾಗಿಲ್ಲ. ಹಿಂದೂ ಸಂಘಟನೆಗಳೇ ರಾಮಜನ್ಮಭೂಮಿಯು ಇದೇ ಎಂದು ದಿಟಪಡಿಸಲು ಸಾಧ್ಯವಾಗಿಲ್ಲ, ನ್ಯಾಯಮೂರ್ತಿಗಳೂ ಈ ಮಾತನ್ನು ಒಪ್ಪುತ್ತಾರೆ. ಅವರು ಹೇಳುತ್ತಾರೆ : ''ರಾಮ ಅಲ್ಲಿಯೇ ಹುಟ್ಟಿದನೋ ಇನ್ನೆಲ್ಲಿಯೋ ಹುಟ್ಟಿದನೋ ಅದು ಈಗ ಅಪ್ರಸ್ತುತ; ಅವನು ಅಲ್ಲಿ ಹುಟ್ಟಿರಲಿ ಇಲ್ಲದಿರಲಿ ಅಲ್ಲಿಯೇ ಹುಟ್ಟಿದನೆಂದು ಭಾರತದ ಬಹುಜನ(?) ನಂಬಿದ್ದಾರೆ. ಅವರ ನಂಬಿಕೆ ಸಟೆಯೋ ದಿಟವೋ ಅದನ್ನೆಲ್ಲಾ ನ್ಯಾಯಾಲಯ ನಿರ್ಣಯಿಸಲಾರದು. ಬಹುಜನರ 'ನಂಬಿಕೆಯ' ಪ್ರಕಾರ ನ್ಯಾಯಾಲಯ ತೀರ್ಪು ಕೊಡಬೇಕು.'' ಈ ವಾದ ನ್ಯಾಯ ದೃಷ್ಟಿಯಿಂದ ಕೇವಲ ಬಾಲಿಶ; ನಗೆಪಾಟಲು. ಈ ತರ್ಕದ ಅವಿವೇಕವನ್ನು ಎತ್ತಿ ತೋರಿಸಲು ಒಂದು ಉದಾಹರಣೆ ಕೊಡಬಹುದು. ಪತಿ ತೀರಿದಾಗ ಪತ್ನಿ ಸಹಗಮನ ಮಾಡಿ ಪತಿಯ ಚಿತೆಯಲ್ಲಿ ಸತ್ತರೆ ಆಕೆಗೆ ಸ್ವರ್ಗ ಪ್ರಾಪ್ತಿಯಾಗುವುದೆಂದು ಹಿಂದಿನ ಕಾಲದಲ್ಲಿ (ಈಗಲೂ ಕೆಲವು ಕಡೆ ಕೆಲವರು) ನಂಬಿದ್ದರು. ಸ್ವರ್ಗ ಎಂದರೇನು, ಅದು ಎಲ್ಲಿದೆಯೋ ಅದನ್ನೆಲ್ಲಾ ಯಾರೂ ಪ್ರಶ್ನಿಸಕೂಡದು. ಆದರೆ ಬ್ರಿಟಿಷ್ ಸರ್ಕಾರ ಭಾರತೀಯರ ಈ ಮೂರ್ಖ ನಂಬಿಕೆಯನ್ನು ಅನಾಮತ್ತಾಗಿ ಧಿಕ್ಕರಿಸಿ ಸಹಗಮನ ಪದ್ಧತಿಯನ್ನು ನಿಷೇಧಿಸಿದರು. ಆದರೆ ಲಕ್ನೋ ಉಚ್ಚ ನ್ಯಾಯಾಲಯ ಜನರ ನಂಬಿಕೆಯನ್ನು ನಂಬಿ ರಾಮಚಂದ್ರ ಅಲ್ಲಿ ಎಲ್ಲಿಯೋ ಹುಟ್ಟಿದ್ದ ಎಂದು ತೀರ್ಮಾನಿಸಿದೆ. ಹಾಗೆಂದು ತೀರ್ಪು ಕೊಟ್ಟ ನ್ಯಾಯಮೂರ್ತಿಗಳಲ್ಲಿ ಒಬ್ಬರಾದ ಶ್ರೀ ಶರ್ಮ ಎಂಬಾತ ದಿನಾಂಕ ೩-೧೦-೨೦೧೦ರಂದು ಬಹಿರಂಗ ಹೇಳಿಕೆ ಕೊಟ್ಟು ತಮ್ಮ ತೀರ್ಪನ್ನು ಸಮರ್ಥಿಸಿಕೊಂಡಿದ್ದಾರೆ. (ದಿನಾಂಕ ೬-೧೦-೨೦೧೦ರ ಕನ್ನಡಪ್ರಭ ಪತ್ರಿಕೆ ನೋಡಿ.) ಉಚ್ಚ ನ್ಯಾಯಾಲಯದ ಈ ತೀರ್ಪನ್ನು ತಮಿಳುನಾಡು ಮುಖ್ಯಮಂತ್ರಿ ಕರುಣಾನಿಧಿ ನಯವಾದ ಮಾತಿನಲ್ಲಿ ಗೇಲಿಮಾಡಿದ್ದಾರೆ. ರಾಮ ಕೃತಯುಗದಲ್ಲಿ ಹುಟ್ಟಿದನಂತೆ. ಕೃತಯುಗ ೧೭ ಲಕ್ಷ ೨೮ ಸಾವಿರ ವರ್ಷಗಳ ಹಿಂದೆ ಇತ್ತಂತೆ!! ಆಗ ಹುಟ್ಟಿದನೆಂದು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ. ಆದರೆ ಕೇವಲ ಒಂದು ಸಾವಿರ ವರ್ಷಗಳ ಹಿಂದೆ ತಮಿಳು ನಾಡಿನಲ್ಲಿ ರಾಜ್ಯಭಾರ ಮಾಡಿದ ರಾಜರಾಜ ಚೋಳನ ಸ್ಮಾರಕಗಳು ತಮಿಳು ನಾಡಿನಲ್ಲಿ ಎಲ್ಲಿಯೂ ಸಿಗುತ್ತಿಲ್ಲ ಎಂದು ಭಾರತ ಪುರಾತತ್ವ ಇಲಾಖೆ ತೀರ್ಮಾನಿಸಿದೆ! ಎಂದ ಮೇಲೆ ೧೭ ಲಕ್ಷ ವರ್ಷಗಳ ಹಿಂದೆ ರಾಮಚಂದ್ರ ಅಲ್ಲಿಯೆ ಒಂದು ಕಡೆ ಹುಟ್ಟಿದ್ದ ಎಂದು ಉಚ್ಚ ನ್ಯಾಯಾಲಯ ತೀರ್ಪು ಕೊಡುತ್ತದೆ ಎಂದರೆ ಬುದ್ಧಿ ಸಮಯಿದ್ದ ಯಾರು ನಂಬುತ್ತಾರೆ? ಬರೀ ಊಹೆಯ, ಜನರ ಮೂಢನಂಬಿಕೆಯ ಆಧಾರದ ಮೇಲೆ ನ್ಯಾಯಮೂರ್ತಿಗಳು ತೀರ್ಪು ಕೊಡುತ್ತಾರೆಂದರೆ ಇದು ಕಾಜೀ ನ್ಯಾಯ ಎಂದು ಭಾವಿಸಿದರೆ ತಪ್ಪೇನು ?

ರಾಮಜನ್ಮಭೂಮಿಯಲ್ಲಿ ಒಂದು ರಾಮಮಂದಿರ ಇತ್ತು ಎಂದು ಉಚ್ಚ ನ್ಯಾಯಾಲಯ

ತೀರ್ಪು ಕೊಟ್ಟಿದೆ. ಅದಕ್ಕೆ ಅವರು ಕೊಡುವ ಕಾರಣ ಕೆಡವಿದ ಬಾಬ್ರಿ ಮಸೀದಿಯ ಸ್ಥಳದಲ್ಲಿ ಉತ್ಖನನ ಮಾಡಿದಾಗ ಪ್ರಾಣಿಗಳ ಕೆಲವು ಮೂಳೆಗಳು, ಮಣ್ಣಿನ ಮಡಕೆಗಳು ಗಾಜಿನ ಮಣಿಗಳು ಸಿಕ್ಕವಂತೆ !!! ಅವುಗಳ ಆಧಾರದ ಮೇಲೆ ಆ ಜಾಗದಲ್ಲಿ ರಾಮಮಂದಿರ ಇತ್ತು ಎಂಬುದಾಗಿ ಘನ ನ್ಯಾಯಮೂರ್ತಿಗಳು ತೀರ್ಪುಕೊಟ್ಟಿದ್ದಾರೆ ! ಇದು ತರ್ಕ ಸಮ್ಮತವೇ ಎಂಬುದನ್ನು ಸಾಮಾನ್ಯ ತಿಳಿವಳಿಕೆ ಇದ್ದ ಯಾರಾದರೂ ನಂಬಬಹುದೆ ?

ಒಂದು ವೇಳೆ ರಾಮ ಅಲ್ಲಿಯೇ ಹುಟ್ಟಿದ್ದ, ಹುಟ್ಟಿದ್ದ ಸ್ಥಳದಲ್ಲಿಯೇ ಒಂದು ಮಂದಿರವಿತ್ತು ಎಂದು ವಾದಕ್ಕಾಗಿ ಯಾವುದೋ ತರ್ಕದಿಂದ ಒಪ್ಪಿಕೊಂಡರೂ, ೧೫೨೮ರಿಂದ ೧೯೯೨ರವರೆಗೆ ಹತ್ತಿರ ಹತ್ತಿರ ೪೭೦ ವರ್ಷಗಳು ನಿಂತಿದ್ದ ಬಾಬ್ರಿ ಮಸೀದಿಯನ್ನು ಕೆಡವಿದ್ದು ಸರಿಯೇ ? ಕೆಡವಿದ ಕರಸೇವಕರು, ಅವರ ಬೆಂಬಲಿಗರು, ಹಿಂಬಾಲಕರು ತಾತ್ಕಾಲಿಕವಾಗಿ ರಾಮಲಲ್ಲ ವಿಗ್ರಹಗಳನ್ನು ಇಟ್ಟ ಸ್ಥಳವನ್ನು ಸಂಘ ಪರಿವಾರದವರಿಗೆ ಬಿಟ್ಟುಕೊಡಬೇಕೆಂಬುದು ನ್ಯಾಯ ಸಮ್ಮತವೆ ? ಈ ವಿಚಾರವಾಗಿ ಈ ಹಿಂದೆ ಹಿಂದೂಗಳು ನ್ಯಾಯಾಲಯಕ್ಕೆ ಹೋದಾಗ ಬ್ರಿಟಿಷರು ೪೦೦ ವರ್ಷಗಳ ಹಿಂದೆ ಆಗಿರಬಹುದಾದ ಅನ್ಯಾಯವನ್ನು ಈಗ ಸರಿಪಡಿಸಲು ಸಾಧ್ಯವಿಲ್ಲ, ವ್ಯಾವಹಾರಿಕವಲ್ಲ ಎಂದು ಆಗಿನ ಸರ್ವೋಚ್ಚ ನ್ಯಾಯಾಲಯವೆ ತೀರ್ಪು ಕೊಟ್ಟಿದೆ. ಅಂದಮೇಲೆ ಈಗಿನ ಘನತೆವೆತ್ತ ನ್ಯಾಯಮೂರ್ತಿಗಳು ದೌರ್ಜನ್ಯ ದಿಂದ ಮಸೀದಿಯನ್ನು ಕೆಡವಿ, ಅವಸರದಿಂದ ದೌರ್ಜನ್ಯದಿಂದ ಕದ್ದು ರಾತ್ರೋರಾತ್ರಿ ರಾಮಲಲ್ಲ (ಲಾಲ) ವಿಗ್ರಹಗಳನ್ನು ಅಲ್ಲಿ ಇಟ್ಟದ್ದು ಸರಿಯೆ ? ಆ ವಿಗ್ರಹಗಳನ್ನು ಕೆಡವಿದ ಮಸೀದಿಯ ಮಧ್ಯದ ಗುಮ್ಮಟದ ಕೆಳಗಡೆ ಸ್ಥಾಪಿಸಬೇಕೆಂಬುದೂ ಆ ಜಾಗವನ್ನು ಹಿಂದೂ ನಿರ್ಮೋಹಿ ಅಖಾಡ - ಸಂಘ ಪರಿವಾರಕ್ಕೆ ಕೊಡಬೇಕೆಂದು ತೀರ್ಪು ಕೊಡುವುದು ನ್ಯಾಯವೆ ? ಇದನ್ನು ಹಾವೇರಿ ಪಂಚಾಯ್ತಿ ಎಂದು ವರ್ಣಿಸಿದರೆ ತಪ್ಪೇನು ?



ಈಗ ಕೊಟ್ಟಿರುವ ತೀರ್ಪನ್ನು ಅವಲಂಬಿಸಿ ಈ ದೇಶದ ಇತರ ಅನೇಕ ಕಡೆ ಇರುವ ಮಸೀದಿಗಳನ್ನು ತೆರವುಗೊಳಿಸಿ ಸಂಘ ಪರಿವಾರದ ವಶಕ್ಕೆ ಕೊಡಬೇಕಾದೀತು !! ಸಂಘ ಪರಿವಾರ, ಕಾಶೀ ವಿಶ್ವನಾಥ ದೇವಸ್ಥಾನದ ಪಕ್ಕದಲ್ಲಿರುವ ಮಸೀದಿಯನ್ನು ಹಾಗೂ ಮಥುರ ಶ್ರೀಕೃಷ್ಣಲೀಲಾ ಪ್ರದೇಶವಾಗಿದ್ದ ಮಥುರದಲ್ಲಿರುವ ಮಸೀದಿಯನ್ನು ಸಂಘ ಪರಿವಾರದ ವಶಕ್ಕೆ ಕೊಡಬೇಕೆಂದು ದಾವಾ ದಾಖಲು ಮಾಡಬಹುದು. ಇಲ್ಲವೇ ಬಲಾತ್ಕಾರದಿಂದ ಆಕ್ರಮಿಸಬಹುದು. ಪುರಿ ಜಗನ್ನಾಥ ದೇವಾಲಯ ಹಿಂದೊಮ್ಮೆ ಬೌದ್ಧ ಚೈತ್ಯಾಲಯ ಆಗಿತ್ತು ಎಂದು ಇತಿಹಾಸ, ಪುರಾತತ್ವ ಇಲಾಖೆ ಖಚಿತವಾಗಿ ದಿಟಪಡಿಸಿವೆ. ಈಗ ಬೌದ್ಧರು ಪುರಿ ಜಗನ್ನಾಥ ದೇವಾಲಯವನ್ನು ತಮ್ಮ ವಶಕ್ಕೆ ಕೊಡಬೇಕೆಂದು ದಾವಾ ಹೂಡಿದರೆ ಅಯೋಧ್ಯೆ ತೀರ್ಪನ್ನು ಅನುಸರಿಸಿ ಬೌದ್ಧರಿಗೆ ಕೊಡಬೇಕಾಗುತ್ತದೆ. ಅಲ್ಲದೆ ಹಾಗೆಯೇ ಕರ್ನಾಟಕದಲ್ಲಿರುವ ಅನೇಕ ಶೈವ, ವೈಷ್ಣವ, ದೇವಸ್ಥಾನಗಳು ಹಿಂದೆ ಜೈನ ಬಸದಿ ಗಳಾಗಿದ್ದವೆಂದು, ಇನ್ನು ಕೆಲವು ಹಿಂದೆ ಶೂದ್ರರ, ದ್ರಾವಿಡ ಮೂಲನಿವಾಸಿಗಳ ಜನಪರ ದೇವ ದೇವಿಯರ ದೇವಸ್ಥಾನಗಳಾಗಿದ್ದವು ಎಂದು ಇತಿಹಾಸ ಪುರಾತತ್ವ ಇಲಾಖೆ ದಿಟಪಡಿಸಿದೆ. ಅಂದಮೇಲೆ ಈಗಿನ ಜೈನಸಂಘಗಳು ಬೌದ್ಧರು, ಶೈವ ಮತ್ತು ವೈಷ್ಣವ ದೇವಾಲಯಗಳನ್ನು ತಮ್ಮ ಸ್ವಾಧೀನಕ್ಕೆ ಕೊಡಿಸಬೇಕೆಂದು ದಾವಾ ಹೂಡಿದರೆ ಸಂಘ ಪರಿವಾರದ ವೈಷ್ಣವರು ಶೈವರು ಒಪ್ಪುತ್ತಾರೆಯೆ ? ಅಯೋಧ್ಯೆ ತೀರ್ಪನ್ನು ಸ್ವಾಗತಿಸುವ ಅವರು ಜೈನರ ಮತ್ತು ಬೌದ್ಧರ ವಾದನವನ್ನು ತಿರಸ್ಕರಿಸಲು ಸಾಧ್ಯವೆ ? ಬಾಬಾಬುಡನ್ ಗಿರಿಯ ಪೂಜಾ ಮಂದಿರ ದತ್ತಪೀಠವೆಂದು ತೀರ್ಪು ಕೊಡಲಾದೀತೆ ? ಧರ್ಮಸ್ಥಳದ ಶ್ರೀ ಮಂಜುನಾಥ ದೇವಸ್ಥಾನ ಶೈವ ದೇವಾಲಯ. ಇಂದಿಗೂ ಶಿವ (ಈಶ್ವರ)ನ ಪೂಜೆಯೆ ನಡೆಯುತ್ತಿದೆ. ಅದು ನೂರಾರು ವರ್ಷಗಳಿಂದ ಜೈನ ಧರ್ಮಾಧಿಕಾರಿಗಳ ವಶದಲ್ಲಿದೆ. ವೈಷ್ಣವರು ಅರ್ಚಕರು. ಅದನ್ನು ಕರ್ನಾಟಕದ ಶೈವ ಸಂಪ್ರದಾಯದ ಶೃಂಗೇರಿ ಅಥವಾ ಇನ್ನಾವುದೋ ವೀರಶೈವ ಸಭೆಯ ವಶಕ್ಕೆ ಕೊಡಬೇಕೆಂದು ಸಾಧಿಸಬಹುದಲ್ಲವೆ ?

ಈ ತೀರ್ಪಿನಿಂದ ಇನ್ನೊಂದು ಪ್ರಬಲವಾದ ಸಮಸ್ಯೆ ಉದ್ಭವಿಸುತ್ತದೆ. ಮುಂದೆ ಕಾಲಾನುಕಾಲಕ್ಕೆ ಮುಸ್ಲಿಮರು, ಬೌದ್ಧರು, ಸಿಕ್ಖರು, ಜೈನರು, ಲಿಂಗಾಯಿತರು, ಕ್ರಿಶ್ಚಿಯನ್ನರು ಪ್ರಬಲವಾಗಿ ಈಗ ಸಂಘ ಪರಿವಾರದ ಸ್ವಾಧೀನದಲ್ಲಿರುವ ಗುಡಿಗಳ ಜಾಗವನ್ನು ತಮ್ಮ ಸ್ವಾಧೀನಕ್ಕೆ ಕೊಡಬೇಕೆಂದು 'ರಥಯಾತ್ರೆ'ಯನ್ನು, 'ಜಿನಯಾತ್ರೆ', 'ಬೌದ್ಧಯಾತ್ರೆ'ಯನ್ನು ನಡೆಸಿದರೆ ಪರಿಸ್ಥಿತಿ ಏನಾಗಬಹುದು ? ಆಗ ಈ ದೇಶದ ಗತಿ ಏನಾಗಬಹುದು ? ಆದ್ದರಿಂದ ಈ ತೀರ್ಪು ಸಮಸ್ಯೆಯನ್ನು ಪರಿಹರಿಸುವುದಕ್ಕಿಂತ ಹೆಚ್ಚಾಗಿ ಸಮಸ್ಯೆಯನ್ನು ಉಲ್ಬಣಗೊಳಿಸಿದಂತಾಗುತ್ತದೆ.

ಈ ತೀರ್ಪಿನಲ್ಲಿ ಮೇಲ್ನೋಟಕ್ಕೆ ಎದ್ದುಕಾಣುವ ತರ್ಕಹೀನ ಭಾಗವೆಂದರೆ ನಿರ್ಮೋಹಿ ಅಖಾಡ ಕೇಳದಿದ್ದ ಪರಿಹಾರವನ್ನು – ಹಾಗೆ ಹೇಳಬೇಕೆಂದರೆ ನ್ಯಾಯಾಲಯದ ಮುಂದಿದ್ದ ಯಾವ ದಾವೆಯಲ್ಲೂ ಪ್ರಾರ್ಥನೆ (Prayer) ಭೂಮಿಯನ್ನು ಪಾಲು ಭಾಗ ಮಾಡಬೇಕೆಂದು ಕೇಳದಿದ್ದ ಪರಿಹಾರವನ್ನು ನ್ಯಾಯಾಲಯ ದಯಪಾಲಿಸಿರುವುದು. ನಿರ್ಮೋಹಿ ಅಖಾಡದ ದಾವೆಯಲ್ಲಿ ವಿವಾದಿತ ಸ್ಥಳದಲ್ಲಿ ರಾಮ ಹುಟ್ಟಿರಲಿಲ್ಲ! ಅಲ್ಲಿ ರಾಮಮಂದಿರವೂ ಇರಲಿಲ್ಲ!! ಅದನ್ನು ಕೆಡವಿಯೂ ಇರಲಿಲ್ಲ!!! ಕೆಡವಿದ ಮೇಲೆ ಆ ಸ್ಥಳದಲ್ಲಿ ಬಾಬ್ರಿ ಮಸೀದಿ ಕಟ್ಟಲಿಲ್ಲ! ಆದರೂ ನ್ಯಾಯಾಲಯ ನಿರ್ಮೋಹಿ ಅಖಾಡಕ್ಕೆ ಮಧ್ಯ ಗುಮ್ಮಟದ ಕೆಳಗಿನ ಜಾಗವನ್ನು ಕೊಡಬೇಕೆಂದು ''ಉದಾರ'' ದಾನ ಮಾಡಿದೆ. ಹಾಗಾದರೆ ಅಲ್ಲಿ ರಾಮಸೀತಾ ವಿಗ್ರಹಗಳು ೧೯೪೯ರ ಡಿಸೆಂಬರ್‌ನ ೨೨-೨೩ರ ಮಧ್ಯರಾತ್ರಿ ಹೇಗೆ ಬಂದವು ? ಇದಕ್ಕೆ ಎಂಟು ಸಾವಿರ ಪುಟಗಳ ಈ ತೀರ್ಪಿನಲ್ಲಿ ಹೇಗೆ ಹೇಳಿದ್ದಾರೊ ಆ ನ್ಯಾಯಮೂರ್ತಿಗಳಿಗೇ ಗೊತ್ತು.

ಈ ತೀರ್ಪಿನಲ್ಲಿ ಕಾಣುವ ಇನ್ನೊಂದು ತರ್ಕಹೀನತೆ ಎಂದರೆ ೪೨೧ ವರ್ಷಗಳ ದೀರ್ಘಕಾಲ ಅಸ್ತಿತ್ವದಲ್ಲಿದ್ದ ಮಸೀದಿಯನ್ನು ಕರಸೇವಕರು ಧ್ವಂಸ ಮಾಡಿದ್ದು ಸಮರ್ಥನೀಯವೆ ? ಎಲ್. ಕೆ. ಅಡ್ವಾನಿ ಈಗ ಹೇಳುವ ಮಾತನ್ನು – ಅಲ್ಲಿ ರಾಮ ಹುಟ್ಟಿದ್ದನೊ, ಇಲ್ಲವೊ, ಅಲ್ಲಿ ಪೂಜೆ ಪ್ರಾರ್ಥನೆ ನಡೆಯುತ್ತಿತ್ತೊ ಇಲ್ಲವೊ ಅದೆಲ್ಲ ನ್ಯಾಯಾಲಯದಲ್ಲಿ ನಿರ್ಧಾರವಾಗುವ ಮಾತಲ್ಲ!! ಹಿಂದೂಗಳು ಹಾಗೆ ನಂಬಿದ್ದಾರೆ. ಆದ್ದರಿಂದ ಅದನ್ನು ಎತ್ತಿ ಹಿಡಿಯಲೇ ಬೇಕು, ಇದನ್ನೆ ಈ ತೀರ್ಪು ಹೇಳಿರುವುದು. ಅಂದರೆ – ಈ 'ತೀರ್ಪು' ಎಂಬುದು ನ್ಯಾಯಾಲಯ ಶಾಸನಬದ್ಧವಾಗಿ ಕೊಟ್ಟ ತೀರ್ಪಲ್ಲ!!

ಹಾಗಾದರೆ ೪೨೧ ವರ್ಷಗಳ ಕಾಲ ಗಳಿತವಾಗಿದ್ದರೂ ಕಾಲಮಿತಿ ಮೀರಿದ ಈ ದಾವೆಯಲ್ಲಿ (Time barred suit) ಪರಿಹಾರ ಕೊಡಲು ಸಾಧ್ಯವೆ ? ಅದಕ್ಕೆ ಈ ತೀರ್ಪಿನಲ್ಲಿ ಒಂದು ಸಮಜಾಯಿಷಿ ಕಾಣಿಸಿದ್ದಾರೆ. ಅದೇನೆಂದರೆ ಈ ವಿವಾದಿತ ಜಾಗ ದೇವರ ಜಾಗ. ದೇವತೆ (Diety) ಶಾಸನಾನುಸಾರ ಒಬ್ಬ ವ್ಯಕ್ತಿ (Juridical person). ಆ ದೇವತೆ ನಿರಂತರ ಅಲ್ಪವಯಿ (eternal minor). ಅವನ(ಳ) ರಕ್ಷಣೆ ಮಾಡುವ ಒಬ್ಬ ಪೋಷಕ (guardian) ಬೇಕು. ಕಾಲಮಿತಿ ಶಾಸನ (Law of limitation) ಅಂಥ ದೇವತೆ (Diety)ಗೆ ಅನ್ವಯಿಸುವುದಿಲ್ಲ! ಆದ್ದರಿಂದ ೪೭೦ ವರ್ಷಗಳಾಗಲಿ ೪೦೦೦ ವರ್ಷಗಳು ಗಳಿತವಾದರೂ ಸರಿ ಆ (ಅಲ್ಪವಯಿ) ದೇವತೆಯ ಹಕ್ಕನ್ನು ಎತ್ತಿಹಿಡಿಯಬೇಕು ಎಂಬುದು ತರ್ಕ !! ಇದೇ ತರ್ಕವನ್ನು ದೇಶದ ಸಮಸ್ತ ದೇವಸ್ಥಾನಗಳಿಗೂ ಅನ್ವಯಿಸಿದರೆ ಏನಾಗಬಹುದು !

ಒಟ್ಟಿನ ಮೇಲೆ ಈ ತೀರ್ಪು ಉಚ್ಚ ನ್ಯಾಯಾಲಯದ ಉನ್ನತ ಪೀಠದಿಂದ ಕೊಡಬಹುದಾದ ತೀರ್ಪು ಅಲ್ಲವೆಂದು ಕಾಣುತ್ತದೆ. ಬೀಸುವ ದೊಣ್ಣೆಯಿಂದ ತಪ್ಪಿಕೊಳ್ಳುವ ಉಪಾಯವೆಂದು ಹೇಳಬಹುದು. ಆದ್ದರಿಂದ ಈ ತೀರ್ಪು ಸರ್ವಥಾ ನ್ಯಾಯಸಮ್ಮತವಲ್ಲ. ಸರ್ವೋಚ್ಚ ನ್ಯಾಯಾಲಯ ಈ ತೀರ್ಪನ್ನು ರದ್ದುಪಡಿಸುವುದೆಂದೂ, ಸಂವಿಧಾನವನ್ನು ಎತ್ತಿಹಿಡಿಯುವುದೆಂದು ನಂಬಬಹುದು. ಇಲ್ಲದಿದ್ದರೆ... ಊಹಿಸಲಿಕ್ಕಾಗದ ದುಃಖ, ದೌರ್ಜನ್ಯ, ಅರಾಜಕತೆ, 'ರಾಕ್ಷಸೀ ಜಂಗಲ್ ರಾಜ್' ಆದೀತು ! ಜನ ಎಚ್ಚೆತ್ತುಕೊಳ್ಳಬೇಕು. ಅಲ್ಪಸಂಖ್ಯಾತರು ಹಿಂದುಳಿದವರು, ದಲಿತರು, ಶೂದ್ರರು ಕೋಮುವಾದಿಗಳಾದವರನ್ನು ಒಗ್ಗಟ್ಟಿನಿಂದ ಎದುರಿಸಬೇಕು.

**ಕೋ. ಚೆನ್ನಬಸಪ್ಪ**
ನಂ. ೧೨೭, ಪಶ್ಚಿಮ ಕಾರ್ಡ್ ರಸ್ತೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

# ಅಭಿವೃದ್ಧಿ ಮಾದರಿ ಮತ್ತು ಆಧುನಿಕತೆ

ವಿ. ಚಂದ್ರಶೇಖರ ನಂಗಲಿ

**ಅ**ಭಿವೃದ್ಧಿ ಎಂಬುದು ಒಂದು ಆಧುನಿಕ ಪರಿಕಲ್ಪನೆಯೇ ? ಅಭಿವೃದ್ಧಿ ಮತ್ತು ಆಧುನಿಕತೆ ಎಂಬ ಪರಿಭಾಷೆಗಳನ್ನು ಕಾಲ ಸಂಬಂಧಿಯಾಗಿ ಮಾತ್ರವಲ್ಲದೆ, ಮನೋಸಂಬಂಧಿಯಾಗಿಯೂ ಪರಿಭಾವಿಸಬೇಕು. ಮನುಕುಲವು ಕಾಲಾನುಕ್ರಮವಾಗಿ ಮಾಡಿದ ಆವಿಷ್ಕಾರಗಳು ಮತ್ತು ಸಾಧನೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು 'ಅಭಿವೃದ್ಧಿ: ಆಧುನಿಕತೆಯ ಅನುಸಂಧಾನ' ನಡೆಸುವುದು ತುಂಬ ಸೀಮಿತವಾಗುತ್ತದೆ. ಶಿಲಾಯುಗ > ಲೋಹಯುಗ > ಪ್ರಾಚೀನ ಯುಗ > ಮಧ್ಯಕಾಲೀನ ಯುಗ > ನವೀನ ಯುಗ ಇವೆಲ್ಲವುಗಳನ್ನು ಒಳಗೊಳ್ಳುತ್ತಾ, ಮೀರುತ್ತಾ ಸದಾ ಯುಗಯಾತ್ರಿಯಾಗಿರುವ ಮಾನವ ಮನಸ್ಸಿನ ಚಲನಶೀಲತೆಯನ್ನೇ – ಅಭಿವೃದ್ಧಿ ಮತ್ತು ಆಧುನಿಕತೆಯ ಅನುಸಂಧಾನವೆಂದು ಕರೆಯಬಹುದು.

'ಅಭಿವೃದ್ಧಿ ಮಾದರಿ ಮತ್ತು ಆಧುನಿಕತೆ'ಗೆ ನಿದರ್ಶನವಾಗಿ ಕುಪ್ಪಳಿಯ ಕವಿಮನೆ - ಕವಿಶೈಲ - ಕುವೆಂಪು ಭವನ - ಕುವೆಂಪು ಜೈವಿಕ ಮೀಸಲು ಅರಣ್ಯದ ಇಡೀ ಪರಿಸರ ವ್ಯವಸ್ಥೆಯನ್ನು ಉದಾಹರಿಸಬಹುದು. ಕವಿಶೈಲದ ಮೇಲೆ ಕುವೆಂಪು ಸ್ಮಾರಕ ಮತ್ತು ಕೆಳಗೆ ತೇಜಸ್ವಿ ಸ್ಮಾರಕಗಳಿರುವುದು ನಿಮಗೆಲ್ಲ ಗೊತ್ತು. ಇದನ್ನು ವಿನ್ಯಾಸಗೊಳಿಸಿರುವ ಕಲಾವಿದ ಕೆ. ಟಿ. ಶಿವಪ್ರಸಾದ್ ಅವರು ಇಂಗ್ಲೆಂಡಿನಲ್ಲಿರುವ 'ಸ್ಟೋನ್ ಹೆಂಜೆಸ್' ಎಂಬ ಆದಿಮಾನವರ ಕಾಲದ ಶಿಲಾಯುಗದ ಭವ್ಯ ಸ್ಮಾರಕದ ಸ್ಫೂರ್ತಿಯಿಂದ ಕುಪ್ಪಳಿಯ ಸ್ಮಾರಕಗಳನ್ನು ಪ್ರತಿಷ್ಠಾಪನೆ ಮಾಡಿದ್ದಾರೆ. ಮಲೆನಾಡಿನ ದೇಸಿ ವಾಸ್ತುಶಿಲ್ಪವನ್ನು ಆಧರಿಸಿ, ಆಧುನಿಕ ಸೌಲಭ್ಯಗಳೊಂದಿಗೆ ಕುವೆಂಪು ಭವನವನ್ನು ರೂಪಿಸಿದ ಶ್ರೇಯಸ್ಸು ಕಡಿದಾಳ್ ಪ್ರಕಾಶ್ ಅವರಿಗೆ ಸಲ್ಲುತ್ತದೆ. ಕುವೆಂಪು - ತೇಜಸ್ವಿ - ಕೆ. ಟಿ. ಶಿವಪ್ರಸಾದ್ - ಕಡಿದಾಳ್ ಪ್ರಕಾಶ್ ಈ ನಾಲ್ವರನ್ನೊಳಗೊಂಡಿರುವ ಕುಪ್ಪಳಿಯ 'ಚತುರ್ಮುಖ ಸೌಂದರ್ಯ' ಈಗಾಗಲೇ ಎಲ್ಲರ ಮನಗೆದ್ದಿದೆ. ಇನ್ನು ಐವತ್ತು ವರ್ಷಗಳ ನಂತರ ಕುಪ್ಪಳಿಯ ಇಡೀ ಪರಿಸರ ವ್ಯವಸ್ಥೆ ಅರಣ್ಯ ಇಲಾಖೆ ಮತ್ತು ಹಂಪಿಯ ಕನ್ನಡ ವಿಶ್ವವಿದ್ಯಾಲಯಗಳೂ ಸೇರಿದಂತೆ ಕನ್ನಡಿಗರ ಮನೆಮಾತಾಗುವ ವಿಶ್ವಾಸ ನನಗಿದೆ. ಇದೆಲ್ಲ ಸೇರಿ, ಅಭಿವೃದ್ಧಿ ಮಾದರಿ ಮತ್ತು ಆಧುನಿಕತೆಯ ನಿರ್ವಹಣೆಗೊಂದು ಉತ್ತಮ ಉದಾಹರಣೆಯಾಗಿದೆ.

ಕುವೆಂಪು ಸ್ಮಾರಕ ಮತ್ತು ತೇಜಸ್ವಿ ಸ್ಮಾರಕಗಳು ಕನ್ನಡ ಸಂಸ್ಕೃತಿಯ ಸೌಂದರ್ಯ ಸನ್ನಿಧಿಯಾಗಿದೆ. ಕುವೆಂಪು ಸ್ಮಾರಕ ಕನ್ನಡ ನವೋದಯದ ಸ್ಮಾರಕವಾಗಿ ಪರಿಣಮಿಸಿದೆ. ನವೋದಯದ ಹರಿಕಾರರೆಲ್ಲ ಮಹಾನ್ ವ್ಯಕ್ತಿತ್ವವುಳ್ಳ ಅದ್ವಿತೀಯ ಪ್ರತಿಭಾವಂತರು. ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ, ಪುತಿನ, ಬಿ.ಎಂ.ಶ್ರೀ., ಡಿ.ಎಲ್.ಎನ್., ತೀ.ನಂ.ಶ್ರೀ., ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರಿ ಮುಂತಾದವರು ಕವಿಶೈಲದ ಮೇಲೆ ಚದುರಿದಂತೆ ಕಂಡುಬರುತ್ತಾರೆ. ಇದು ಕನ್ನಡ ನವೋದಯದ ಬಹುತ್ವ ಮತ್ತು ವಿದಳನ ಶಕ್ತಿಯ ಭವ್ಯ ಸ್ಮಾರಕವೆನಿಸುತ್ತದೆ. ಇದರಂತೆಯೇ ಕವಿಶೈಲದ ಕೆಳಗಿರುವ ತೇಜಸ್ವಿ ಸ್ಮಾರಕವನ್ನು ನೋಡುತ್ತಿದ್ದರೆ, ನವ್ಯ ಮತ್ತು ನವ್ಯೋತ್ತರ ಸಂವೇದನೆಗಳ ಪ್ರತೀಕವೆನ್ನಬಹುದಾದ ಅಡಿಗ, ಅನಂತಮೂರ್ತಿ, ಲಂಕೇಶ್, ತೇಜಸ್ವಿ, ನಂಜುಂಡಸ್ವಾಮಿ, ಕೆ. ರಾಮದಾಸ್ ಮುಂತಾದವರು ಒಗ್ಗೂಡಿದಂತೆ ಕಂಡುಬರುತ್ತಾರೆ. ಇದು ಸಂದಳನಶಕ್ತಿಯ ವಿಶಿಷ್ಟ ಸ್ಮಾರಕವೆನಿಸುತ್ತದೆ. ಕಲಾಕೃತಿ ಒಬ್ಬೊಬ್ಬರ ಕಣ್ಣಿಗೆ ಒಂದೊಂದು ರೀತಿಯಲ್ಲಿ ಕಾಣುವುದು ಸಹಜ ತಾನೆ ? ಈ ವಿಷಯಾಂತರ ವಿವೇಚನೆಯನ್ನು ಇಲ್ಲಿಗೆ ಕೈಬಿಟ್ಟು ಮರಳಿ ಆಧುನಿಕತೆಯ ಅನುಸಂಧಾನಕ್ಕೆ ಬರುವ ಅಗತ್ಯವಿದೆ.

**'ಆಧುನಿಕತೆ' ಎಂದರೇನು ? ಇದರ ಅನುಸಂಧಾನ ಹೇಗೆ ?**

ನಾನು ಏಕಕಾಲಕ್ಕೆ ಆದಿಮಾನವನೂ ಹೌದು; ಆಧುನಿಕ ಮಾನವನೂ ಹೌದು. ಆದಿಮಾನವನ ಕಾಲದ ರುಚಿ ಅಭಿರುಚಿಗಳು, ನಡೆ ನುಡಿಗಳ ಸಂಸ್ಕಾರ ನಮ್ಮೊಳಗೆ ಇಲ್ಲವೆಂದು ಹೇಳಲಾಗದು. ಧರ್ಮ-ಅರ್ಥ-ಕಾಮ-ಮೋಕ್ಷಗಳಿಗೆ ಸಂಬಂಧಪಟ್ಟಂತೆ ಆದಿಮಾನವರು ಮತ್ತು ಆಧುನಿಕ ಮಾನವರ ನಡುವೆ ಜನ್ಯ-ಜನಕ ಸಂಬಂಧವಿದೆ. ನಾನು ಈಗಾಗಲೇ ಪೂರ್ಣಗೊಂಡಿರುವ ಸಿದ್ಧವಸ್ತು ಅಲ್ಲ! ನಾವೆಲ್ಲರೂ ಕ್ಷಣಕ್ಷಣಕ್ಕೂ ಆಧುನಿಕರಾಗುತ್ತಿರುವುದು ಜೈವಿಕ ಸತ್ಯ. ಬಿಸಿ ಆಹಾರ ಸೇವಿಸಿದಾಗ ಸುಟ್ಟುಹೋಗುವ ಅಂಗಾಂಶಗಳು ಮತ್ತೆ ಆಧುನಿಕವಾಗುವುದು ಅನುಭವವೇದ್ಯ. ಕತ್ತರಿಸಿದ ಕೂದಲು, ಉಗುರು ಕೂಡ ಆಧುನಿಕವಾಗುತ್ತಲೇ ಇರುತ್ತದೆ. ಆಧುನಿಕತೆ ನಮ್ಮಿಂದ ಹೊರಗಿರುವ ಸರಕು ಸಾಮಗ್ರಿ ಅಲ್ಲ. ಬತ್ತದ ತೆನೆಗಳ ತೋರಣವನ್ನು ಮಾರುಕಟ್ಟೆಯಲ್ಲಿ ಸಿಗುವ ಪ್ಲಾಸ್ಟಿಕ್ ಎಲೆಗಳ ತೋರಣಕ್ಕೆ ಹೋಲಿಸಿದರೆ ನನ್ನ ಮಾತು ಸ್ಪಷ್ಟವಾಗುತ್ತದೆ. ಆಧುನಿಕತೆ ಎಂದರೆ ಸೃಜನಶೀಲವಾದುದು ಎಂದೇ ಅರ್ಥ. ಸೃಜನಶೀಲತೆಯಿಂದ ದೂರ ಸಿಡಿದ ಯಾಂತ್ರಿಕತೆ, ಏಕರೂಪತೆ (ಮಾನೋ ಕಲ್ಚರ್), ಜಡತೆಯನ್ನು ಒಳಗೊಂಡಿರುವ 'ಹುಸಿ ಆಧುನಿಕತೆ'ಯು ಡಂಬಾಚಾರ ಮತ್ತು ತೋರಿಕೆಯದಾಗಿರುತ್ತದೆ. ಆಧುನಿಕತೆಯೆಂದರೆ ಬಾಚಿಕೊಳ್ಳುವ ಅಥವಾ ಕೊಳ್ಳುಬಾಕತನದ ವಸ್ತುವಿಚಾರವಲ್ಲ. ಪ್ರಸಾರವಾಗುತ್ತಿರುವ ನೂರಾರು ಚಾನೆಲ್‌ಗಳಲ್ಲಿ ನಮ್ಮತನವನ್ನು ಕಳೆದುಕೊಳ್ಳದಂತೆ, ಆಯ್ಕೆಮಾಡಿಕೊಳ್ಳುವುದು ಅಥವಾ ವಿಮರ್ಶಾ ವಿವೇಕವನ್ನು ತೋರುವುದು ಕೂಡ ಆಧುನಿಕತೆಯಾಗುತ್ತದೆ.

ಅಭಿವೃದ್ಧಿಯ ಮಾದರಿ ಯಾವುದು, ಎಂಬ ಪ್ರಶ್ನೆಗೆ, ಉತ್ತರಿಸುವುದು ತುಂಬ ಕಷ್ಟ. ಇದು ಒಬ್ಬ ವ್ಯಕ್ತಿ ಅಥವಾ ಒಂದು ತಲೆಮಾರು ಉತ್ತರಿಸುವ ವಿಚಾರವಲ್ಲ. ನಾವೆಲ್ಲ ಅಲ್‌ಗೋರ್ ನಿರೂಪಣೆಯ 'AN INCONVENIENT TRUTH' – ಒಂದು ನಿಷ್ಠುರ ಸತ್ಯ – ಎಂಬ (ಕನ್ನಡಕ್ಕೆ: ನಾಗೇಶ ಹೆಗಡೆ) ಸಾಕ್ಷ್ಯಚಿತ್ರವನ್ನು ನೋಡಿದ್ದೇವೆ. ಹೆಚ್ಚುತ್ತಿರುವ ಭೂಮಿಯ ತಾಪಮಾನವನ್ನು ಕುರಿತ ಈ ಚಿತ್ರ ತುಂಬ ಪರಿಣಾಮಕಾರಿಯಾಗಿ ನಮ್ಮನ್ನು ತಟ್ಟಿ ತಲ್ಲಣಗೊಳಿಸುತ್ತದೆ. ಈ ಬಗೆಯ ಅಭಿವೃದ್ಧಿ ನಮಗೆ ಬೇಕೆ, ಎಂಬ ಪ್ರಶ್ನೆ ಹುಟ್ಟಿಸಿ, ಮರುಚಿಂತನೆಗೆ ಹಚ್ಚುವುದರಲ್ಲಿ ಯಶಸ್ವಿಯಾಗಿದೆ. ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಇನ್ನಷ್ಟು ವಿಚಾರಗಳನ್ನು ಹಂಚಿಕೊಳ್ಳುತ್ತಿದ್ದೇನೆ. ನಾನು ಕೋಲಾರ ಜಿಲ್ಲೆಯವನು; ಇದರ ವೈಶಿಷ್ಟ್ಯಗಳು ಹೀಗಿವೆ: ಪ್ರಸ್ತುತ, ಕೋಲಾರ ಜಿಲ್ಲೆಯಲ್ಲಿ ಯಾವೊಂದು ಜೀವನದಿಗಳೂ ಇಲ್ಲ. ಭೂಪಟದಲ್ಲಿ ಹತ್ತಕ್ಕೂ ಮೇಲ್ಪಟ್ಟ ನದಿಗಳ ಹೆಸರಿದೆ ! ಇವೆಲ್ಲ ಇಂದು ಡೊ ಡೋ ಹಕ್ಕಿಯ ಹಾದಿ ಹಿಡಿದು ಕಣ್ಮರೆಯಾಗಿವೆ ಅಥವಾ ವಂಶನಾಶಗೊಂಡಿವೆ. ಈ ನದಿಗಳ ಪಾತ್ರದಲ್ಲಿ ನಮ್ಮ ಪೂರ್ವಿಕರು ಕೆರೆಗಳ ಸರಪಳಿಯನ್ನೇ ನಿರ್ಮಿಸಿದ್ದಾರೆ. ಕರ್ನಾಟಕದಲ್ಲಿ ಕೆರೆಗಳು ಅತಿ ಹೆಚ್ಚಾಗಿರುವ ಜಿಲ್ಲೆ ಈಗಲೂ ಕೋಲಾರವೇ ಆಗಿದೆ. ಇದರ ಅಭಿವೃದ್ಧಿ ಹೇಗಾಯ್ತು ಎಂಬುದನ್ನು ಮುಂದೆ ಕೇಳಿ :

೧. ಕರ್ನಾಟಕದಲ್ಲಿ ಕರೆಂಟು ಮೊದಲು ಬಂದ ಜಿಲ್ಲೆ ಯಾವುದು ?
೨. ಕರ್ನಾಟಕದಲ್ಲಿ ಕಾಡುಗಳು ಮೊದಲು ನಾಶವಾದ ಜಿಲ್ಲೆ ಯಾವುದು ?
೩. ಕರ್ನಾಟಕದಲ್ಲಿ ಬೋರ್‌ವೆಲ್‌ಗಳು ಅತಿ ಹೆಚ್ಚಾಗಿರುವ ಜಿಲ್ಲೆ ಯಾವುದು ?
೪. ಕರ್ನಾಟಕದಲ್ಲಿ ನೆಡುತೋಪುಗಳು ಅತಿ ಹೆಚ್ಚಾಗಿರುವ ಜಿಲ್ಲೆ ಯಾವುದು ?

೫. ಕರ್ನಾಟಕದಲ್ಲಿ ಭವಿಷ್ಯದ ಮರುಭೂಮಿಯಾಗುವ ಮೊದಲ ಜಿಲ್ಲೆ ಯಾವುದು ?

ಮೇಲಿನ ಐದೂ ಪ್ರಶ್ನೆಗಳಿಗೆ ಒಂದೇ ಉತ್ತರ: ಕೋಲಾರ. ಇದಕ್ಕೆ ಕೊಂಚ ವಿವರಣೆಯ ಅಗತ್ಯವಿದೆ. ಕೆ.ಜಿ.ಎಫ್. ಕಾರಣದಿಂದ ಕರ್ನಾಟಕದಲ್ಲಿ ಕರೆಂಟು ಮೊದಲು ಬಂದ ಜಿಲ್ಲೆ ನಮ್ಮದು. ನಮ್ಮ ತಂದೆ ಮತ್ತು ಚಿಕ್ಕಪ್ಪ ಅವರ ಬಾಲ್ಯಕಾಲದಲ್ಲಿ ನಮ್ಮೂರು ನಂಗಲಿಗೆ ಕಾಡುಪ್ರಾಣಿಗಳಾದ ಜಿಂಕೆ, ಕಡವೆ, ಕರಡಿಗಳು ಆಗಾಗ ಬರುತ್ತಿದ್ದವು ಎಂದು ಹೇಳುತ್ತಿದ್ದರು. ತೀರ ಇತ್ತೀಚೆಗೆ ೨೦೦೧-೦೨ರಲ್ಲಿ ನಮ್ಮ ಗದ್ದೆಯ ಹೊಳೆಬದಿಯಲ್ಲಿ ನಾನು ಮತ್ತು ನನ್ನ ತಮ್ಮ ಒಂದು 'ಕಾಡುಪಾಪ'ವನ್ನು (Slender loris) ನೋಡಿದ್ದೆವು. ನಮ್ಮೂರು ನಂಗಲಿಗೆ ಹೊಂದಿ ಕೊಂಡಂತೆ, ಪಲಮನೇರ್ ಮತ್ತು ವಿ. ಕೋಟೆ ಪ್ರದೇಶದಲ್ಲಿ ದಟ್ಟ ಕುರುಚಲು ಕಾಡು 'ಕೌಂಡಿನ್ಯ ಮೀಸಲು ಅರಣ್ಯ' ಈಗಲೂ ಇದೆ. ಕಳೆದ ಇಪ್ಪತ್ತು ವರ್ಷಗಳಿಂದ ಯಾನಾದಿಗರು ಅಥವಾ ಅಡವಿ ಪೂಜಾರ್ಲು ಎಂಬ ಗಿರಿಜನ ಬಂಧುಗಳ ಮಾರ್ಗದರ್ಶನದಲ್ಲಿ ಈ ಕಾಡಿನಲ್ಲಿ ಅಲೆದಾಡುತ್ತಿರುವ ನಾವು ಆನೆಯಿಂದ ಹಿಡಿದು ಮೊಲ ಮತ್ತು ಬರ್ಕವರೆಗೆ ಜೀವಜಾಲದ ಪರಿಚಯವನ್ನೂ ಮಾಡಿಕೊಂಡಿದ್ದೇವೆ. ಕರೆಂಟು ಕುರಿತ ಕೈವಾರದ ತಾತಯ್ಯನವರು ಕಾಲಜ್ಞಾನದ ಮಾತನ್ನೂ ಆಡಿದ್ದಾರೆ: ''ಎಲೆಯಿಲ್ಲದ ಬಳ್ಳಿ ಲೋಕವೆಲ್ಲ ಹಬ್ಬಿ ಇರುಳು ಹಗಲಾಗುವುದು'' ಎಂದರೆ ಕರೆಂಟಿನ ಮಾಯಾಲೋಕವೇ. ಇದರ ಸ್ಪರ್ಶಕ್ಕೆ ಮೊದಲು ಸಿಕ್ಕಿದ ಕೋಲಾರದಲ್ಲಿ ಕಾಡುಗಳು ಕೂಡ ಮಾಯವಾದವು. ಮಳೆ ಕಡಿಮೆಯಾಗಿ ಕೆರೆಗಳು ತುಂಬದೇ ಹೋದಾಗ ನೀರಿಗಾಗಿ ಬೋರ್‌ವೆಲ್ ಸಂಸ್ಕೃತಿ ಶುರುವಾಯಿತು. ನನ್ನ ಹೈಸ್ಕೂಲು ದಿನಗಳಲ್ಲಿ ಎರಡು-ಮೂರು ವರ್ಷಕ್ಕೊಮ್ಮೆ ತಪ್ಪದೆ ತುಂಬುತ್ತಿದ್ದ ನಮ್ಮೂರು ನಂಗಲಿಯ ಕೆರೆ ಈಗ ಏಳು ವರ್ಷಗಳಿಂದ ತುಂಬಿಲ್ಲ. ಅಲ್‌ಗೋರ್ ನಿರೂಪಿಸಿದಂತೆ ಇಪ್ಪತ್ತೊಂದನೆ ಶತಮಾನದ ಮೊದಲ ದಶಕದಲ್ಲಿ ಜಾಗತಿಕ ತಾಪಮಾನ ಹೆಚ್ಚಾಗಿದ್ದಕ್ಕೂ ನಮ್ಮೂರು ನಂಗಲಿ ಕೆರೆ ತುಂಬದೆ ಇರುವುದಕ್ಕೂ ನೇರವಾದ ಸಂಬಂಧ ಇದೆಯೆನಿಸುತ್ತಿದೆ. 'ಕೆರೆ ತುಂಬಿದರೆ ನಂಗಲಿ, ಇಲ್ಲದಿದ್ದರೆ ಎಂಜಲು ಬಾಳು' ಎಂಬ ಗಾದೆಮಾತು ನಿಜವಾಗಿದ್ದು, ಇಂದು ನಮ್ಮೂರಿನ ಜನ ಪರದಾಡುತ್ತಿದ್ದಾರೆ. ವಸ್ತುವಿಷಯಗಳನ್ನು 'ಸೂಕ್ಷ್ಮ' (= ಕೋಲಾರ ಜಿಲ್ಲೆ) ಮತ್ತು 'ಸಮಗ್ರ' (ಜಾಗತಿಕ ತಾಪಮಾನ) ಎರಡೂ ನೆಲೆಯಲ್ಲಿ ಒಟ್ಟಿಗೆ ಗ್ರಹಿಸುವ ಅಗತ್ಯವಿದೆ.



ರಾಜ್ಯಕೀಯದಲ್ಲಿ ಜನತೆ... ಮೂಕ ಪ್ರೇಕ್ಷಕರು?

ಕೋಲಾರದಲ್ಲಿರುವಷ್ಟು ನೆಡುತೋಪುಗಳು ಮತ್ತು ಏಕರೂಪಾತ್ಮಕ ಕೃಷಿ (= ಮಾನೋಕಲ್ಚರ್) ನಮ್ಮ ರಾಜ್ಯದ ಮತ್ತಾವ ಜಿಲ್ಲೆಯಲ್ಲೂ ಇಲ್ಲವೆನಿಸುತ್ತದೆ. ನೀಲಗಿರಿ ತೋಪುಗಳು ಮತ್ತು ಮಾವಿನ ನೆಡುತೋಪುಗಳು ಕೋಲಾರ ಜಿಲ್ಲೆಯಾದ್ಯಂತ ವಿಪುಲವಾಗಿವೆ. ಬಹುಶಃ ಬೋರ್‌ವೆಲ್ ಮೊದಲಿಗೆ ಬಂದ ಕೀರ್ತಿಯೂ ಕೋಲಾರಕ್ಕೆ ಸಲ್ಲಬಹುದು. ಅತಿ ಹೆಚ್ಚು ಕೆರೆಗಳು ಮತ್ತು ಅತಿ ಹೆಚ್ಚು ಬೋರ್‌ವೆಲ್‌ಗಳು ಎಂಬ ವೈದೃಶ್ಯ ನಮ್ಮ ಜಿಲ್ಲೆಯಲ್ಲಿದೆ. ಪರಿಸ್ಥಿತಿಯು ಹೀಗೆ ಮುಂದುವರಿದರೆ ಭೂಪಟದಲ್ಲಿ ಮಾತ್ರ ಉಲ್ಲೇಖವಾಗಿರುವ ಕೋಲಾರದ ನದಿಗಳಂತೆಯೇ ಅಂಕಿ-ಅಂಶಗಳಲ್ಲಿ ಮಾತ್ರ ಉಳಿಯುವ ಜಲವಿಲ್ಲದ ಕೆರೆಗಳ ಸಂಖ್ಯೆ ನಮ್ಮಲ್ಲಿರುತ್ತದೆ. ಕೋಲಾರದಲ್ಲಿ ಕುಡಿಯುವ ನೀರಿಗಾಗಿ ಸಾಕಷ್ಟು ಶ್ರಮಿಸುತ್ತಾ, ಫ್ಲುರೋಸಿಸ್ ಎಂಬ ಮಹಾಮಾರಿಯ ವಿರುದ್ಧ ಜನಜಾಗ್ರತಿ ಮೂಡಿಸಿದ ಡ್ಯಾನಿಡಾ ಎಂಬ ಸಂಸ್ಥೆಯ ವರದಿಯ ಪ್ರಕಾರ ಮುಂಬರುವ ವರ್ಷಗಳಲ್ಲಿ ನೀರು ಲಭ್ಯವಾಗದ ಕಪ್ಪು ಪ್ರದೇಶಗಳಲ್ಲಿ ಕೋಲಾರ ಜಿಲ್ಲೆಯೂ ಒಂದಾಗಿದೆ. ಇದರಿಂದಾಗಿ, ಭವಿಷ್ಯದಲ್ಲಿ ಮರುಭೂಮಿಯಾಗುವ ಎಲ್ಲ ಲಕ್ಷಣಗಳೂ ಕೋಲಾರ ಜಿಲ್ಲೆಯಲ್ಲಿ ಕಂಡುಬರುತ್ತಿವೆ. ಇದುವರೆಗೆ, ಕೋಲಾರ ಜಿಲ್ಲೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ನಿರೂಪಿಸಿದ ಪ್ರಗತಿ ಮೀಮಾಂಸೆ ಅಥವಾ ಅಭಿವೃದ್ಧಿಯ ಮಾದರಿಗೆ ಉತ್ತರ ನೀಡುವ ವ್ಯಕ್ತಿ ಅಥವಾ ತಲೆಮಾರು ಯಾರು ಎಂಬ ಪ್ರಶ್ನೆಗೆ ನಿರುತ್ತರವೇ ಗತಿಮತಿ.

ಶ್ರೀ ಡಿ. ಎಸ್. ನಾಗಭೂಷಣ ಅವರು 'ಗಾಂಧೀಜಿ ಮತ್ತು ಆಧುನಿಕ ನಾಗರಿಕತೆ' – ಎಂಬ ವಿಷಯ ಕುರಿತು ಮಾತನಾಡುತ್ತಾ 'ಹಿಂದ್ ಸ್ವರಾಜ್' ಪುಸ್ತಕದ ವಿಚಾರಗಳನ್ನು ಅದು ಎದುರಿಸಿದ ಪ್ರತಿರೋಧಗಳೊಂದಿಗೆ ವಿಸ್ತಾರವಾಗಿ ಪರಿಚಯಿಸಿದ್ದಾರೆ. ನಾನೀಗ ಗಾಂಧೀಜಿಯ 'ಹಿಂದ್‌ಸ್ವರಾಜ್' ಲಕ್ಷ್ಯದಲ್ಲಿಟ್ಟು ಕೊಂಡು, ಮೂರು ಅಭಿಪ್ರಾಯಗಳನ್ನು ಇಲ್ಲಿ ವ್ಯಕ್ತಪಡಿಸುತ್ತಿದ್ದೇನೆ :

೧. ಶಿಕ್ಷಿತರಾಗುವುದು ಎಂದರೆ ಕನ್ನಡದಿಂದ ದೂರ ಸರಿಯುವುದು

೨. ನಾಗರಿಕರಾಗುವುದು ಎಂದರೆ ನಿಸರ್ಗದಿಂದ ದೂರ ಸರಿಯುವುದು

೩. ಸೈಬರಿಕ (ನೆಟಿಜನ್)ರಾಗುವುದು ಎಂದರೆ ಸಮುದಾಯಗಳಿಂದ ದೂರ ಸರಿಯುವುದು (ಹೆಚ್ಚಿನ ವಿವರಗಳಿಗೆ : ಕಾಡು ಮತ್ತು ತೋಪು, ವಿ. ಚಂದ್ರಶೇಖರ ನಂಗಲಿ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೦)

'ಮೆಕಾಲೆಯ ಮಕ್ಕಳು' ಎಂಬ ಡಿ. ಆರ್. ನಾಗರಾಜ ಅವರ ಲೇಖನ ಓದಿಕೊಂಡವರಿಗೆ ಹಾಗೂ ಹೆಚ್ಚುತ್ತಿರುವ ಇಂಗ್ಲಿಷ್ ವ್ಯಾಮೋಹದ ಶಿಕ್ಷಣ ಪದ್ಧತಿಯನ್ನು ಅನುಭವಿಸು ತ್ತಿರುವವರಿಗೆ ಮೇಲಿನ ಮೊದಲ ಅಭಿಪ್ರಾಯವನ್ನು ವಿವರಿಸುವ ಅಗತ್ಯವಿಲ್ಲ. ಟಿ. ಪಿ. ಕೈಲಾಸಂ ಅವರ 'ಟೊಳ್ಳುಗಟ್ಟಿ' ನಾಟಕವನ್ನು ಗಮನಿಸಿದಲ್ಲಿ ಶಿಕ್ಷಿತರಾಗುವುದೆಂದರೆ ಕನ್ನಡದಿಂದ ದೂರ ಸರಿಯುವುದರ ಜೊತೆಗೆ ಟೊಳ್ಳುಗಳಾಗುವುದು ಎಂದೇ ಅರ್ಥ. ನಾಗರಿಕ (ಸಿಟಿಜನ್)ರಾಗುವುದೆಂದರೆ ಗ್ರಾಮ್ಯ ಮತ್ತು ವನ್ಯಧರ್ಮ ಸಂಸ್ಕಾರಗಳನ್ನು ಕಳೆದುಕೊಂಡು ಯಾವುದು ಸಹಜವೋ ಅಂತಹ ನಿಸರ್ಗದಿಂದ ದೂರ ಸರಿಯುತ್ತಾ ಪಾಟುಗಿಡಗಳಾಗುವುದು ಎಂದೇ ಅರ್ಥ. ಪರಿಸರದಿಂದ ಪ್ರತ್ಯೇಕಗೊಂಡ ವ್ಯಕ್ತಿತ್ವವನ್ನು ಪಾಟು ಗಿಡಗಳು ಬಹು ಸಮರ್ಥವಾಗಿ ಬಿಂಬಿಸುತ್ತವೆ. ಸೈಬರಿಕರೆಂದರೆ, ಉಪಗ್ರಹಚಾಲಿತ ತಂತ್ರಜ್ಞಾನದ ಬಳಕೆಯಿಂದ ಜಾಗತೀಕರಣಗೊಳ್ಳುತ್ತಾ ಸ್ಥಳೀಯ ಭೂಗೋಳವನ್ನು ಸಂಪೂರ್ಣವಾಗಿ ಕಳೆದುಕೊಂಡು ಗ್ಲೋಬಲ್ ಸಿಟಿಜನ್‌ಗಳಾಗಿ ಮಾರ್ಪಟ್ಟು ಆಮೆಚಿಪ್ಪುಗಳಾಗಿ ಬದಲಾಗುವುದು ಎಂದರ್ಥ. ಸದಾ ಚಿಪ್ಪುಗಳಲ್ಲಿದ್ದು ಬೇಕೆನಿಸಿದಾಗ ಆಮೆಯಂತೆ ಹೊರಗೆ ಕಾಣಿಸಿಕೊಂಡು, ಉದ್ದೇಶ ಸಾಧನೆಯ ನಂತರ ಮರಳಿ ಒಳಕ್ಕೆ ಸೇರಿಕೊಳ್ಳುವುದು ಇಲ್ಲಿನ ವೈಶಿಷ್ಟ್ಯ. ಇಂಥ ಆಮೆಚಿಪ್ಪು ವ್ಯಕ್ತಿತ್ವಗಳಿಗೆ, ಸಮುದಾಯಗಳೊಂದಿಗೆ ಯಾವುದೇ ಬಗೆಯ ಸಂಬಂಧ ಇರುವುದಿಲ್ಲ. ಹೀಗೆ ಟೊಳ್ಳುಗಳೂ, ಪಾಟುಗಿಡಗಳೂ ಮತ್ತು ಆಮೆಚಿಪ್ಪುಗಳೂ ಆಗುವುದನ್ನು ಪ್ರಗತಿ ಮೀಮಾಂಸೆ ಅಥವಾ ಅಭಿವೃದ್ಧಿಯ ಮಾದರಿ ಎನ್ನಲಾದೀತೆ ?

ನನ್ನ ಮಾತುಗಳಿಂದ ಉತ್ತೇಜಿತಗೊಂಡು ಶಿಕ್ಷಿತರಾಗುವುದಕ್ಕೆ, ನಾಗರಿಕರಾಗುವುದಕ್ಕೆ ಮತ್ತು ಸೈಬರಿಕರಾಗುವುದಕ್ಕೆ ನಾನು ಬದ್ಧವಿರೋಧಿಯೆಂಬ ಸುಲಭ ಸಮೀಕರಣಕ್ಕೆ ಯಾರೂ ಬರಕೂಡದೆಂದು ವಿನಂತಿಸಿಕೊಳ್ಳುತ್ತೇನೆ. ಗಾಂಧೀಜಿಯವರ 'ಹಿಂದ್ ಸ್ವರಾಜ್' ಕೃತಿಯನ್ನು ಇದಿಷ್ಟು ಹಿನ್ನೆಲೆಯಲ್ಲಿ ಮರುಚಿಂತನೆಯ ಮೂಲಕ ಅರ್ಥಮಾಡಿ ಕೊಳ್ಳುವುದು ಒಳ್ಳೆಯದು. ಆಧುನಿಕ ನಾಗರಿಕತೆಯನ್ನು ಯಾರು ಆಹ್ವಾನ ಮತ್ತು ವಿಸರ್ಜನದ ಸ್ವವಿಮರ್ಶೆಯ ಮೂಲಕ ಸ್ವೀಕರಿಸುವುದಿಲ್ಲವೋ ಅವರಿಗೆ ಗಾಂಧೀಜಿ ಅರ್ಥವಾಗುವುದಿಲ್ಲ.

**ಆಧುನಿಕತೆ ಹೇಗೆ ಅಗತ್ಯವಾಗಿತ್ತು ?**

ಈ ಪ್ರಶ್ನೆಯನ್ನು 'ವಸಾಹತುಶಾಹಿ' ನೆಲೆಯಲ್ಲಿ ವಿವೇಚಿಸಬೇಕಾಗಿದೆ. ವಸಾಹತುಶಾಹಿಯನ್ನು ಏಕಪಕ್ಷೀಯವಾದ ಗ್ರಹಿಕೆಯಿಂದ 'ಬ್ರಿಟಿಷ್ ಪ್ರಭುತ್ವ' ಎಂಬಂತೆ ನೋಡಬಾರದು. ನಮ್ಮೊಳಗೆ ಇರುವ ವಸಾಹತುಶಾಹಿ ನೆಲೆಗಳನ್ನು ಮನಗಾಣುವುದರ ಮೂಲಕ ಬಹುತ್ವದ ಗ್ರಹಿಕೆಯನ್ನು ಹಿಡಿಯಬೇಕು. ವಸಾಹತುಶಾಹಿಯ ಮುಪ್ಪುರಿ ಬಂಧವನ್ನು ಕೆಳಗೆ ನಿರೂಪಿಸಲಾಗಿದೆ :

೧. ಜನ್ಮಾಧಾರಿತ ವಸಾಹತುಶಾಹಿ > ಜಾತಿಪದ್ಧತಿ, ಅಸ್ಪೃಶ್ಯತೆ

೨. ಲಿಂಗಾಧಾರಿತ ವಸಾಹತುಶಾಹಿ > ಸತಿಪದ್ಧತಿ, ಪುಟ್ಟವಿಧವೆ, ಗೃಹಬಂಧನ, ಪುರುಷ ಪ್ರಧಾನತೆ

೩. ದಾಸ್ಯಾಧಾರಿತ ವಸಾಹತುಶಾಹಿ > ಬ್ರಿಟಿಷರ ದಾಸ್ಯಕ್ಕೆ ಒಳಗಾದದ್ದು

# ಮುಂಜಾವಿಗು ಧಗೆ !



**ಈ**ಗ ಮುಂಜಾವಿಗು ಧಗೆ
ಮಂಜೂ ಇಲ್ಲ, ನಂಜ ಹೊಗೆ
ದಿಕ್ಕೆಟ್ಟಿದೆ ಹೂ ನಗೆ !

ಹಕ್ಕಿಪಕ್ಕಿಗಳಾದಿ
ಗಂಟಲು ಬಿದ್ದು ಹೋಗಿದೆ
ನನಗೋ
ನನ್ನ ದನಿಯೇ ಅಪರಿಚಿತ
ಧೂಳು ಹಿಡಿದಿದೆ
ಬೆಳಗಿಗು ಅಲರ್ಜಿ ಬಡಿದುಕೊಂಡಿದೆ

ದೇವರ ಗುಡಿಯ ಘಂಟೆನಾದ
ರಣಕಹಳೆ ಊದಿದಂತೆ
ಮುಲ್ಲಾನ ಅಲ್ಲಾಹು... ಕೂಗು
ಅಖಾಡಕ್ಕೆ ಕರೆದಂತೆ
ಮೂಡಲದ ಕೆಂಚು
ಭಯಾನಕ ಸಂಚಿನಂತೆ.

ಎಲ್ಲೆಲ್ಲು ಬಿಸುಗಾಳಿ... ಬಿಸಿ ಅಲೆ... !
ಗ್ರಾಮದೇವಿಯ ಜಾತ್ರೆಯಲ್ಲಿ
ರಾತ್ರಿ ನೀಡಿದ ಬಲಿ
ನನ್ನದೇ ಆಗಿರಬಹುದೇ ?

ಶಂಕೆ ಸುರುವಾಗಿದೆ
ಅದರ ಬಿಂಬ ಗಟಾರದಲ್ಲಿ
ಇಟುಕುತ್ತಿದೆ
ನಲ್ಲಿಯಲ್ಲಿನ ನೀರು
ಬಣ್ಣ ಗೆಟ್ಟಿದೆ
ನೆತ್ತರಿರಬಹುದೇ ?
ಗುಮಾನಿ ಹುಟ್ಟಿಸಿದೆ.

ಒಲೆ ಉರಿಯಲ್ಲು ಹಗೆ
ತುಂಬಿಕೊಂಡಿದೆ.
ಅಕ್ಕಿ ಬೇಯಬೇಕು ಹೇಗೆ ?
ರಾಜಕಾರಣಕ್ಕು ನಸುಕು
ಬಲಿಯಾಗಿದೆ;
ಸೂರ್ಯ ಹೊಳೆಯಬೇಕು ಹೇಗೆ ?
ಇದೋ
ಕಾವ್ಯಕ್ಕು ಝಳ !

ತಂಪು ಇಲ್ಲದ ಮೇಲೆ
ಕವಿತೆ ಹುಟ್ಟಿತೇ ?
ಹುಟ್ಟಿದರೂ
ಉಗಿಯಾಡದಿದ್ದೀತೇ ?

**ವಿಜಯಗೌಡ ಪಾಟೀಲ**
ನ್ಯಾಯವಾದಿ
ಚಿಕ್ಕಾಂಶಿ, ಹೊಸೂರು - ೫೮೧ ೧೦೪, ಹಾನಗಲ್ಲ, ಹಾವೇರಿ ಜಿಲ್ಲೆ

'ವಸಾಹತುಶಾಹಿ'ಯಲ್ಲಿ ಮೇಲಿನ ಮುಪ್ಪುರಿಬಂಧವನ್ನು ಮಾತ್ರ ಗ್ರಹಿಸಿದರೆ ಸೀಮಿತವಾಗುತ್ತದೆ. ಬ್ರಿಟಿಷರು (= ಬಿಳಿಚರ್ಮ) ಭಾರತ ಬಿಟ್ಟು ತೊಲಗಿದರೂ ಬ್ರಿಟಿಷರ ಅನುಸರಣೆ (= ಬಿಳಿಬುದ್ಧಿ) ಭಾರತ ಬಿಟ್ಟು ತೊಲಗಲಿಲ್ಲ. ಈ ದಾಸ್ಯಪ್ರವೃತ್ತಿ ಇಂದಿಗೂ ಬೇರೆ ಬೇರೆ ರೂಪಗಳಲ್ಲಿ ಮುಂದುವರೆಯುತ್ತಲೇ ಬಂದಿದೆ :

ಶಿಕ್ಷಣಕ್ಷೇತ್ರದಲ್ಲಿ ವಸಾಹತುಶಾಹಿ > ಮೆಕಾಲೆಯ ಮಕ್ಕಳು

ಕೃಷಿಕ್ಷೇತ್ರದಲ್ಲಿ ವಸಾಹತುಶಾಹಿ > ಭಾರತದಲ್ಲಿ ಮೊದಲನೇ ಹಸಿರುಕ್ರಾಂತಿ : ಅರವತ್ತರ ದಶಕ

ಕೈಗಾರಿಕಾ ಕ್ಷೇತ್ರದಲ್ಲಿ ವಸಾಹತುಶಾಹಿ > ಇಂಡಸ್ಟ್ರಿಯಲೈಸ್ ಆರ್ ಪೆರಿಷ್ ಎಂಬ ಘೋಷಣೆ

ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನಿಷೇಧಿತಗೊಂಡಿರುವ ವಸ್ತುಗಳ ಉತ್ಪಾದನೆ ಮತ್ತು ವಿತರಣೆ ನಮ್ಮ ದೇಶದಲ್ಲಿ.

ಮಾರುಕಟ್ಟೆ ಕ್ಷೇತ್ರದಲ್ಲಿ ವಸಾಹತುಶಾಹಿ > ಗ್ಲೋಬಲೈಸ್ ಆರ್ ಪೆರಿಷ್ ಎಂಬ ಘೋಷಣೆ

ರಾಷ್ಟ್ರನೀತಿಯಾಗಿರುವ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣದ ಒಪ್ಪಂದ ವ್ಯವಹಾರಗಳು

ವಸಾಹತುಶಾಹಿಯನ್ನು ಏಕಪಕ್ಷೀಯವಾಗಿ ನೋಡದೆ, ಬಹುರೂಪಿಯಾಗಿ ಗುರುತಿಸುವ ಸಲುವಾಗಿ ಮೇಲಿನ ಎಲ್ಲ ಬಗೆಯ ನಿರೂಪಣೆಗಳನ್ನು ಒಟ್ಟಿಗೆ ಕೊಡಲಾಗಿದೆ.

ಇವುಗಳ ಪೈಕಿ,

(೧) ಜನ್ಮಾಧಾರಿತ ವಸಾಹತುಶಾಹಿ (೨) ಲಿಂಗಾಧಾರಿತ ವಸಾಹತುಶಾಹಿ (೩) ದಾಸ್ಯಾಧಾರಿತ ವಸಾಹತುಶಾಹಿಯ ಮುಪ್ಪುರಿ ಬಂಧವನ್ನು ಎದುರಿಸಲು ಆಧುನಿಕತೆಯು ಬೆನ್ನೆಲುಬಾಗಿ ಬಂದಿದೆ.

ಇಂಗ್ಲಿಷ್ ಶಿಕ್ಷಣ ಲಭ್ಯವಾಗದಿದ್ದರೆ ನಮ್ಮೂರಿನ ಕೊಟ್ಟಿಗೆಯಲ್ಲಿ ಸೆಗಣಿ ಎತ್ತಿಕೊಂಡು ಇರಬೇಕಾಗಿತ್ತು ಎಂಬರ್ಥದಲ್ಲಿ ಕುವೆಂಪು ಹೇಳಿರುವ ಮಾತುಗಳು ಆಧುನಿಕತೆ ಹೇಗೆ ಅಗತ್ಯವಾಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಆದರೆ, ಸ್ವಾತಂತ್ರ್ಯದ ನಂತರ, ಪಶ್ಚಿಮದ ಪ್ರಭಾವಕ್ಕೆ ತೆರೆದುಕೊಂಡ ಬಗೆಯಲ್ಲಿ ಕುರುಡು ದೃಷ್ಟಿಯ ಆಹ್ವಾನವಿತ್ತೇ ಹೊರತು ಸ್ವಂತಿಕೆಯ ಹುಡುಕಾಟವಿರಲಿಲ್ಲ.

**ಆಧುನಿಕತೆಯಿಂದ ನಮ್ಮ ಕೃಷಿ ಜೀವನದ ಮೇಲಾದ ಪರಿಣಾಮಗಳು**

ಕೃಷಿಪದ್ಧತಿಯ ಮೂರು ಮುಖ್ಯ ಸ್ತರಗಳೆಂದರೆ : (೧) ಬೀಜ (೨) ಗೊಬ್ಬರ (೩) ಔಷಧ. ಈ ಮೂರು ಕ್ಷೇತ್ರಗಳಲ್ಲಿ ಭಾರತೀಯ ರೈತರು ೧೯೫೦-೬೦ರವರೆಗೆ ಸಂಪೂರ್ಣವಾಗಿ ಸ್ವಾವಲಂಬಿಗಳಾಗಿದ್ದರು. ೧೯೬೦ರ ದಶಕದಲ್ಲಿ ಆರಂಭವಾದ ಮೊದಲನೇ ಹಸಿರುಕ್ರಾಂತಿಯ ಪರಿಣಾಮವಾಗಿ (= ನಾರ್ಮನ್ ಬೋರ್‌ಲಾಗ್) ಕೇವಲ ಐವತ್ತು ವರ್ಷಗಳಲ್ಲಿ ಬೀಜ-ಗೊಬ್ಬರ-ಔಷಧಗಳಿಗಾಗಿ ನಮ್ಮ ರೈತರು ಅಂಗಲಾಚುವ ಸ್ಥಿತಿಗೆ ಬಂದುಬಿಟ್ಟರು. ಕಂಪೆನಿ ಬೀಜಗಳು, ಕಂಪೆನಿ ಗೊಬ್ಬರಗಳು, ಕಂಪೆನಿ ಔಷಧಗಳಿಗೆ ದಾಸಾನುದಾಸರಾದ ರೈತರು ಸಂಪೂರ್ಣವಾಗಿ ಪರಾವಲಂಬಿಗಳಾಗಿ ಮಾರ್ಪಟ್ಟರು. ಕೃಷಿಭೂಮಿಯು ತನ್ನ ಪುನರುತ್ಪಾದನಾ ಶಕ್ತಿಯನ್ನು ಸಂಪೂರ್ಣವಾಗಿ ಕಳೆದುಕೊಂಡಿತು. ಈಗ ಮತ್ತೆ ಹಳೆಗಂಡನ ಪಾದವೇ ಗತಿ ಎಂಬಂತೆ, ಪಾರಂಪರಿಕ ಕೃಷಿಪದ್ಧತಿಯತ್ತ ಕಣ್ಣು ಹಾಯಿಸುತ್ತಾ ಸಾವಯವ ಬೇಸಾಯವೆಂಬ ಮಂತ್ರವನ್ನು ಎಲ್ಲೆಡೆ ಪಠಿಸಲಾಗುತ್ತಿದೆ. ನಮ್ಮ ಜೀವನಶೈಲಿಯನ್ನು ಸಮಗ್ರವಾಗಿ ಬದಲಾಯಿಸಿಕೊಳ್ಳದೆ, ಕೇವಲ ಬೇಸಾಯದಲ್ಲಿ ಮಾತ್ರ ಬದಲಾವಣೆ ತರುತ್ತೇವೆ ಎನ್ನುವುದು ಫಲಪ್ರದವಾಗಲಾರದು. ಕೃಷಿ ಎನ್ನುವುದು ದುಡ್ಡು ಮಾಡುವ ದಂಧೆಯಲ್ಲ, ಅದೊಂದು ಕಾಯಕ. ಅಧ್ಯಾತ್ಮ-ಸ್ವಂತಿಕೆ-ಸ್ವಾವಲಂಬನೆ-ಸರಳ ಜೀವನಶೈಲಿಗಳನ್ನು ಒಳಗೊಂಡ ತಪಸ್ಸು ಎಂಬಂತೆ ಕೃಷಿಯನ್ನು ನೋಡುವ ಅಗತ್ಯವಿದೆ. ವಿದ್ಯಾವಂತರು ಸುಲಭವಾಗಿ ದುಡ್ಡುಮಾಡುವ ವಾಮಮಾರ್ಗವನ್ನು ಅನುಸರಿಸದೆ, ಕೃಷಿಯನ್ನು ದುಬಾರಿಯಾದ ಕರ್ಮಬಂಧನದಿಂದ ಮುಕ್ತಗೊಳಿಸಬೇಕಾಗಿದೆ. ಹೆಚ್ಚು ಬಂಡವಾಳ ಹಾಕದೆ, ಪರಿಸರಸ್ನೇಹಿಯಾದ ಮಾರ್ಗೋಪಾಯಗಳಿಂದ ನಷ್ಟವಿಲ್ಲದಂತೆ ಹೇಗೆ ಬದುಕಬಹುದೆಂಬುದನ್ನು 'ನೆಲಮುಟ್ಟುವ ಪ್ರೀತಿ'ಯಿಂದ ಸಾಧನೆ ಮಾಡ ಬೇಕಾಗಿದೆ.

**ಅಭಿವೃದ್ಧಿ ಮತ್ತು ಆಧುನಿಕತೆಯಲ್ಲಿ ಜೈವಿಕ ಪರಿಸರದ ಪ್ರಶ್ನೆ**

ನಮ್ಮ ದೇಶದ ಅಭಿವೃದ್ಧಿ ಮತ್ತು ಆಧುನಿಕತೆಯ

ಮಹಾಯಾನದಲ್ಲಿ ಕೈಗಾರಿಕೀಕರಣದ ಅಲೆ ಮತ್ತು ಜಾಗತೀಕರಣದ ಅಲೆ ಬಹುಮುಖ್ಯವಾದುವು. ಕೈಗಾರಿಕೀಕರಣದ ಅಲೆಗೆ ಚಾಲಕಶಕ್ತಿಯಾಗಿ ಒದಗಿದ್ದು ಸ್ವಯಂಚಾಲಿತ ಯಂತ್ರಜ್ಞಾನ. ಭಾರತೀಯರ ಬದುಕಿನ ಎಲ್ಲ ಕ್ಷೇತ್ರಗಳಲ್ಲಿ ಸ್ವಯಂಚಾಲಿತ ಯಂತ್ರಗಳ ಆಧಿಪತ್ಯವನ್ನು ಸ್ಪಷ್ಟವಾಗಿ ಮನಗಾಣಬಹುದು. ನಂತರ, ತೊಂಬತ್ತರ ದಶಕದಲ್ಲಿ ಸಂಭವಿಸಿದ ಜಾಗತೀಕರಣದ ಅಲೆಗೆ ಚಾಲಕಶಕ್ತಿಯಾಗಿ ಒದಗಿದ್ದು ಉಪಗ್ರಹಚಾಲಿತ ತಂತ್ರಜ್ಞಾನ. ದೂರಸಂವಹನ ಮತ್ತು ಮಾಹಿತಿ ತಂತ್ರಜ್ಞಾನಗಳ ಆಧಿಪತ್ಯ ಇನ್ನಿಲ್ಲದಂತೆ ಭಾರತೀಯರ ಬದುಕನ್ನು ಆಕ್ರಮಿಸಿಕೊಂಡಿತು. ಕೈಗಾರಿಕೀಕರಣ ಮತ್ತು ಜಾಗತೀಕರಣ ಇವೆರಡೂ ಅಲೆಗಳಲ್ಲಿ ತೀವ್ರವಾದ ಆಘಾತಕ್ಕೆ ಒಳಗಾದದ್ದು ಜೈವಿಕ ಪರಿಸರ ಅಥವಾ ಇಕಾಲಜಿ. ಯಂತ್ರಗಳ ಮೇಲೆ ಸವಾರಿ ಮಾಡುವುದನ್ನು ಕಲಿತ ಮನುಷ್ಯ ತನ್ನನ್ನು ತಾನೇ ಮರೆತುಬಿಟ್ಟ. ಇದೀಗ ಯಂತ್ರಗಳೇ ಮನುಷ್ಯರ ಮೇಲೆ ಸವಾರಿ ಮಾಡುತ್ತಾ ಜೀವನವನ್ನು ಯಾಂತ್ರಿಕತೆಯತ್ತ ದೂಡಿತು. ಮನುಷ್ಯರು ಜೀವನದ ಎಲ್ಲ ಕ್ಷೇತ್ರಗಳಲ್ಲಿ ಯಂತ್ರಗಳಂತೆ ತೊಡಗುತ್ತಾ ಇಕಾಲಜಿಯನ್ನೇ ಮರೆತುಬಿಟ್ಟರು. ಯಂತ್ರಗಳ ಆಧಿಪತ್ಯದಿಂದ ಮನುಷ್ಯ ಪರಿಸರದ ಜೊತೆಗೆ ಸಸ್ಯಪರಿಸರ, ಪ್ರಾಣಿಪರಿಸರಗಳ ಮಾರಣ ಹೋಮವಾಗುತ್ತಾ ಬಂದಿದೆ. ಇದನ್ನು ಲೋಹಿಯಾ ಅವರ ಮಾತುಗಳಲ್ಲಿ ಕೇಳಿರಿ :

''... ಆಧುನಿಕ ಮಾನವ ಕ್ರಾಂತಿಕಾರಕ ಯಂತ್ರ ವಿಜ್ಞಾನದ ಮೂಲಕ ಒಂದು ವಿಶಿಷ್ಟ ಮನಃಸ್ಥಿತಿಯನ್ನು ಮುಟ್ಟಿದ್ದಾನೆ. ಅಂಥ ಮನಃಸ್ಥಿತಿಯಲ್ಲಿ ತನ್ನ ಸಹಜೀವಿಗಳೊಡನೆ ಆತ್ಮೀಯವೂ ಪ್ರತ್ಯಕ್ಷವೂ ಆದ ಸಂಬಂಧವನ್ನು ಅನುಭವಿಸುವ ಶಕ್ತಿ ಅವನಲ್ಲಿ ಉಳಿದಿಲ್ಲ...''

('ಆಧುನಿಕ ನಾಗರಿಕತೆಯ ಅರ್ಥ' – ಎಂಬ ಲೇಖನದಿಂದ.)

ಪರಿಸ್ಥಿತಿ ಇಷ್ಟು ಹದಗೆಟ್ಟಿದ್ದಾಗ, 'ಉಗುರುಸುತ್ತಿನ ಮೇಲೆ ಒನಕೆ ಏಟು' ಎಂಬಂತೆ ಕೈಗಾರಿಕೀಕರಣದ ಕೀವು ನೋವಿನ ಮೇಲೆ ಜಾಗತೀಕರಣದ ಹೊಡೆತ ಬಲವಾಗಿ ಅಪ್ಪಳಿಸಿತು. ಇಕಾಲಜಿ ಅಥವಾ ಜೈವಿಕ ಪರಿಸರದಲ್ಲಿ ವಂಶನಾಶದ ಅಧ್ಯಾಯ ಆರಂಭವಾಯ್ತು. ಮನುಷ್ಯ ಮತ್ತು ಸಹಜೀವಿಗಳ ಸಂಬಂಧವು ಸೋದರ ಸ್ನೇಹವಾಗುವುದಕ್ಕೆ ಬದಲು, ಕುರುಡು ನೋಟವಾಗಿ ಮಾರ್ಪಟ್ಟಿತು. ಜೈವಿಕ ಪರಿಸರಗಳ ಮೂಲೋತ್ಪಾಟನೆ ನಿರಾತಂಕವಾಗಿ ಸಾಗುತ್ತಾ ಬಂದಿದೆ. ನಿರಂತರವಾಗಿ ಭಗ್ನಗೊಳ್ಳುತ್ತಿರುವ 'ಇಕಾಲಜಿ'ಯನ್ನು ಗಮನಿಸಿದಲ್ಲಿ ಆಧುನಿಕ ನಾಗರಿಕತೆಯೆಂಬ ''ಧೃತರಾಷ್ಟ್ರನಪ್ಪುಗೆಗೆ ಭಗ್ನ ಬಲಭೀಮ, ಎಲ್ಲೂ ಕೃಷ್ಣನ ಕಾಪು ಕಾಣಲಿಲ್ಲ...'' ಎಂಬುದು ಅರಿವಾಗುತ್ತದೆ. ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರ ಮರಣೋತ್ತರ ಪ್ರಕಟಣೆಯಾದ 'ವಿಮರ್ಶೆಯ ವಿಮರ್ಶೆ' (ಪುಸ್ತಕ ಪ್ರಕಾಶನ - ಮೈಸೂರು, ೨೦೦೯) ಕೃತಿಯಲ್ಲಿ ಇಕಾಲಜಿಯನ್ನು ಮರೆತು ಮುನ್ನಡೆಯುತ್ತಿರುವ ಮಾನವ ಸಮಾಜದ ಪ್ರಗತಿಯು ಆಳದಲ್ಲಿ ದುರ್ಗತಿಯಾಗಿದೆ ಎಂಬುದನ್ನು ಮತ್ತೆ ಮತ್ತೆ ಪ್ರಸ್ತಾಪಿಸಿರುವುದನ್ನಿಲ್ಲಿ ಸ್ಮರಿಸಬಹುದು. ಸೃಷ್ಟಿಯ ಕನಿಷ್ಠ ಜೀವಿಗಳನ್ನು ತೊತ್ತಳಂದುಳಿಯುವ ಮಾನವ ಸಮಾಜ ಕಡೆಗೆ ತನ್ನ ಭವಿಷ್ಯವನ್ನೇ ಸಮಾಧಿ ಮಾಡಿಕೊಂಡಿರುತ್ತದೆ. ಮನುಷ್ಯರ ವಾಸಸ್ಥಳದ ಸುರಕ್ಷತೆಗಾಗಿ ನಿಸರ್ಗ ತೋರಿಸುತ್ತಿರುವ ಹಸಿರು ದೀಪವೇ ಕನಿಷ್ಠ ಜೀವಿಗಳು. ಮಿಂಚುಹುಳದ ಮಿಣುಕುದೀಪಗಳ ಸರಮಾಲೆ, ಕಪ್ಪೆಗಳ ಸಮೂಹಗಾನ, ಕ್ರಿಮಿಕೀಟಗಳ ವಾದ್ಯಗೋಷ್ಠಿ, ರಾಗ ರಸಪಾನದಲ್ಲಿ ಮುಳುಗಿರುವ ಚಿಟ್ಟೆಗಳ ವರ್ಣವೈವಿಧ್ಯ ಮುಂತಾದವುಗಳಿಲ್ಲದ ವಾಸಸ್ಥಳಗಳು ಮನುಷ್ಯರ ಪಾಲಿಗೆ ಅಪಾಯ ಸೂಚಕ ಕೆಂಪುದೀಪಗಳೆಂದು ತಿಳಿಯಬೇಕು. ಮಹಾನಗರಗಳಲ್ಲಿ ಎಷ್ಟೇ ವೈಭವ ವಿಲಾಸಗಳಿದ್ದರೂ ಮನುಷ್ಯರಿಗೆ ಕನಿಷ್ಠಜೀವಿಗಳೊಡನೆ ಒಗೆತನಕ್ಕೆ ಬದಲು ಹಗೆತನವಿರುವುದು ಮುಂದೊದಗಲಿರುವ ದುರಂತದ ಮುಂಗಾಣ್ಕೆಯೇ ಆಗಿದೆ.

ಆಧುನಿಕತೆಯ ವೇಗಕ್ಕೂ ಇಕಾಲಜಿಯ ನಿಧಾನ ಗತಿಗೂ ತಾಳೆಯಾಗುವುದಿಲ್ಲ. ನಗರದ ದ್ರುತಪದ ಸಂಚಾರ (ಕುವೆಂಪು), ಅವಸರದ ಹೆಜ್ಜೆಯ ಮೇಲೆ ಸರಿವ ಸಾವಿರ ಕೊರಳು (ಜಿ.ಎಸ್.ಎಸ್.) ಎಂಬ ಕವಿವಾಣಿಯಲ್ಲಿ ಆಧುನಿಕತೆಯ ರಭಸಮತಿ ಮತ್ತು ವೇಗವನ್ನು ಮನಗಾಣಬಹುದು. ಈ ವೇಗದೊಡನೆ ಸ್ಪರ್ಧಿಸಲು ಸಾಧ್ಯವಿಲ್ಲದ ಇಕಾಲಜಿಯ ನಿಧಾನಗತಿಯು ಆತುರವೈರಿಯಂತೆ. ಅವರಸವೂ ಸಾವಧಾನದ ಬೆನ್ನೇರಿದೆ (ಕುವೆಂಪು) ಎಂಬಂಥ ಧ್ಯಾನದ ನಿಧಾನ ಇಕಾಲಜಿಯಲ್ಲಿದೆ. ಆದ್ದರಿಂದಲೇ ನಮ್ಮ ಸುತ್ತಮುತ್ತ, ಇಡೀ ಭೂಮಂಡಲದ ನೆಲ-ಜಲ-ವಾಯುಮಾರ್ಗದಲ್ಲಿ ಇಕಾಲಜಿಕಲ್ ದುರಂತಗಳು ಸಂಭವಿಸುತ್ತಲೇ ಇವೆ. ನೆಲದಲ್ಲಿ ವನ್ಯಜೀವಿಗಳು, ಜಲದಲ್ಲಿ ಜಲಚರಗಳು, ವಾಯುಮಾರ್ಗದಲ್ಲಿ ಪಕ್ಷಿಗಳು ಆಧುನಿಕತೆಯ ವೇಗಕ್ಕೆ ಬಲಿಪಶುಗಳಾಗುತ್ತಲೇ ಇವೆ. ಮನುಷ್ಯ ಜೈವಿಕ ಪರಿಸರದೊಂದಿಗೆ ಸ್ಥಾಪಿಸಿಕೊಳ್ಳಬೇಕಾದ ನಿಧಾನ ಗತಿಯನ್ನೇ ಅಕಿರೋ ಕುರೋಸಾವ 'ಡ್ರೀಮ್ಸ್' ಎಂಬ ಚಿತ್ರಸಂಯೋಜನೆಯ 'ವಾಟರ್‌ಮಿಲ್ ವಿಲೇಜ್'ನಲ್ಲಿ ಮನಮುಟ್ಟುವಂತೆ ನಿರೂಪಿಸಿದ್ದಾರೆ.



... ಅದು ಮನೆಯ ಲಟ್ಟಣಿಗೆ ತೀರ್ಪೋ... ಕೋರ್ಟ್ ತೀರ್ಪೋ...?!

**ಅಭಿವೃದ್ಧಿಯನ್ನು ಪುನರ್‌ರೂಪಿಸಬಹುದಾದ ಪುನರ್ ರೂಪಿಸ ಬೇಕಾದ ಸಾಧ್ಯತೆಗಳು ಮತ್ತು ಬಗೆಗಳು :**

ಇದುವರೆಗಿನ ವಿಚಾರ ನಿರೂಪಣೆಯನ್ನು ಗಮನಿಸಿ, ಎರಡು ಬಗೆಯ ಅಭಿವೃದ್ಧಿಯ ಮಾರ್ಗಗಳನ್ನು ಗುರುತಿಸ ಬಹುದು :

೧. ಮನುಷ್ಯ ನಿರ್ಮಿತ ಬಂಡವಾಳವಾದವನ್ನು ಓಲೈಸುವ ಅಭಿವೃದ್ಧಿ.

೨. ಜೀವಕೇಂದ್ರಿತ ಸಮಾಜವಾದವನ್ನು ಒಳಗೊಳ್ಳುವ ಅಭಿವೃದ್ಧಿ.

ಇದನ್ನು ಸ್ಪಷ್ಟಪಡಿಸಲು ನಮ್ಮ ಕರ್ನಾಟಕದ ರಾಜ್ಯ ಮತ್ತು ರಾಷ್ಟ್ರೀಯ ಹೆದ್ದಾರಿ ನಿರ್ಮಾಣದ ಕಾಮಗಾರಿಯನ್ನು ಪರಿಶೀಲಿಸಬಹುದು.

ಭಾರತ ಹಳ್ಳಿಗಳ ದೇಶ. ''ಒಬ್ಬನು ನಡೆಯುವ ಮೇಕೆದಾರಿಯೇ ನಾಳೆ ತೇರೆಳೆವ ಹೆದ್ದಾರಿ'' ಎಂಬಂತೆ, ಇಂದು ನಾವು ನೋಡುತ್ತಿರುವ ರಾಜ್ಯ ಹೆದ್ದಾರಿಗಳು ಒಂದು ಕಾಲಕ್ಕೆ ಎತ್ತಿನ ಗಾಡಿಯ ದಾರಿಗಳಾಗಿದ್ದವು. ಮನುಷ್ಯರು ಮತ್ತು ಜಾನುವಾರುಗಳ ಚಲನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ರೂಪಿತವಾದ ಈ ಹೆದ್ದಾರಿಗಳು ಸಹಜವಾಗಿಯೇ ಅಂಕುಡೊಂಕುಗಳಿಂದ ತಿರುವು ಮುರುವುಗಳಿಂದ ಕೂಡಿದ್ದವು. ಬಹು ಹಿಂದಿನ ಕಾಲದಿಂದಲೂ ಇಂಥ ರಸ್ತೆಗಳ ಇಕ್ಕೆಲಗಳಲ್ಲಿ ವೈವಿಧ್ಯಮಯವಾದ ದೇಸೀ ಮರಗಳನ್ನು ನೆರಳಿಗಾಗಿ ಮತ್ತು ಪಕ್ಷಿಪ್ರಾಣಿಗಳ ಬಳಕೆಗಾಗಿಯೇ ಮೀಸಲಾಗಿಟ್ಟು ಬೆಳೆಸಿದ್ದರು. ಇಬ್ಬರು-ಮೂವರು ಮನುಷ್ಯರ ಸರಪಳಿ ರೂಪದ ಬಾಹುಬಂಧನಕ್ಕೆ ನಿಲುಕಲಾರದಷ್ಟು ಸುತ್ತಳತೆಯ ಬುಡವನ್ನು ಹೊಂದಿರುವ ಇಂಥ ಮರಗಳನ್ನು ಹೆದ್ದಾರಿ ನಿರ್ಮಾಣದ ಹೆಸರಿನಲ್ಲಿ ಕತ್ತರಿಸುತ್ತಾ, ಅಕ್ಷರಶಃ ರಸ್ತೆಯುದ್ದಕ್ಕೂ ಇಕ್ಕೆಲಗಳಲ್ಲಿ 'ಸ್ಮಶಾನ ಕುರುಕ್ಷೇತ್ರ'ವನ್ನು ಹೋಲುವಂತೆ ವೃಕ್ಷ ಹೆಣದ ರಾಶಿಯನ್ನೇ ಒಟ್ಟಲಾಗಿದೆ. ಸುಮಾರು ಇನ್ನೂರು-ಮುನ್ನೂರು ವರ್ಷಗಳಷ್ಟು ದೀರ್ಘಕಾಲದಲ್ಲಿ ತಲೆಯೆತ್ತಿ ಹೆಮ್ಮೆಯಿಂದ ಬೀಗುತ್ತಿದ್ದ ಬೃಹದ್ರೂಪದ ಮರಗಳನ್ನು ಕೆಲವೇ ಕ್ಷಣಗಳಲ್ಲ ಉರುಳಿಸಲಾಗಿದೆ. ಇದಿಷ್ಟೂ ಮಾಡಿರುವುದು ಹೆದ್ದಾರಿ ನಿರ್ಮಾಣ ಅಥವಾ ರಸ್ತೆಯ ಅಗಲೀಕರಣದ ಅಂಗವಾಗಿ. ಸುವಿಶಾಲವಾದ ಬಯಲುಪ್ರದೇಶವಿದ್ದರೂ, ಮನುಷ್ಯರು ಮತ್ತು ಜಾನುವಾರುಗಳ ಚಲನೆಗೆ ಅನುಗುಣವಾಗಿ ರೂಪಿತವಾಗಿದ್ದ ಈ ಅಂಕುಡೊಂಕು ಮತ್ತು ತಿರುವು ಮುರುವುಗಳ ರಸ್ತೆಯನ್ನು ಇದೀಗ ದಿಗಂತದೂರದ ನೇರ ರಸ್ತೆಗಳನ್ನಾಗಿ ಕಾರ್ಪೊರೇಟ್ ಶೈಲಿಗೆ ತಕ್ಕಂತೆ ಪುನರ್‌ರೂಪಿಸಲಾಗುತ್ತಿದೆ. ಏಕೆಂದರೆ, ಬಿಟ್ಟ ಬಾಣದಂತೆ ಅತ್ಯಂತ ವೇಗವಾಗಿ ಸಾಗುವ ಯಂತ್ರಗಳನ್ನು ದೃಷ್ಟಿಯಲ್ಲಿಟ್ಟುಕೊಂಡೇ ಇಂಥ ಸರಳ ರೇಖಾತ್ಮಕ ರಸ್ತೆಗಳನ್ನು ನಿರ್ಮಾಣ ಮಾಡಲಾಗುತ್ತಿದೆ.

ಅಂಕುಡೊಂಕು ರಸ್ತೆಗಳಲ್ಲಿ ವಾಹನ ಚಾಲನೆ ಮಾಡುವುದಕ್ಕೂ ದಿಗಂತದೂರದ ನೇರ ರಸ್ತೆಗಳಲ್ಲಿ ವಾಹನ ಚಾಲನೆ ಮಾಡುವುದಕ್ಕೂ ಗಮನಾರ್ಹ ವ್ಯತ್ಯಾಸವೊಂದಿದೆ. ಅಂಕುಡೊಂಕಾದ, ತಿರುವು ಮುರುವುಗಳ ರಸ್ತೆಯಲ್ಲಿ ವಾಹನ ಚಾಲನೆ ಮಾಡುವವರು ಸದಾ ಜಾಗ್ರತರಾಗಿರಬೇಕಾಗುತ್ತದೆ.

ಒಂದರ್ಥದಲ್ಲಿ ರಸ್ತೆಯೇ ಚಾಲಕರನ್ನು ಎಚ್ಚರದಲ್ಲಿಟ್ಟಿರುತ್ತದೆ. ಆದರೆ, ದಿಗಂತದೂರದ ನೇರ ರಸ್ತೆಗಳಲ್ಲಿ ವಾಹನ ಚಾಲನೆ ಮಾಡುವಾಗ ಚಾಲಕರಿಗೆ ಹೆಚ್ಚು ಕೆಲಸವಿರುವುದಿಲ್ಲ. ಒಂದು ನಿಗದಿತ ವೇಗದಲ್ಲಿ ಬಿಟ್ಟ ಬಾಣದಂತೆ ನೇರವಾಗಿ ಸಾಗುತ್ತಿರುವಾಗ ಒಂದು ಬಗೆಯ ಏಕತಾನತೆ ಏರ್ಪಟ್ಟು ಚಾಲಕರಿಗೆ ತೂಕಡಿಕೆ ಉಂಟಾಗುವ ಸಾಧ್ಯತೆಯಿರುತ್ತದೆ. ಒಂದೇ ಒಂದು ಸಣ್ಣ ತೂಕಡಿಕೆ ವಾಹನವನ್ನು ಡಿವೈಡರ್‌ಗೊ ಅಥವಾ ಫುಟ್‌ಪಾತಿಗೋ ಹತ್ತಿಸಲು ಕಾರಣವಾಗಿ, ಅಪಘಾತವಾಗುವ ಸಂಭವ ಹೆಚ್ಚು. ಇದೆಲ್ಲ ಗಮನಿಸಿದರೆ, ಅಂಕುಡೊಂಕಾದ ರಸ್ತೆಗಳನ್ನು ಇಕ್ಕೆಲದ ಬೃಹದ್ರೂಪದ ವೃಕ್ಷಗಳ ಸಹಿತ ಸಾಮಾನ್ಯ ಜನರ ಬಳಕೆಗೆ ಮೀಸಲಿಟ್ಟು, ಉಪಗ್ರಹ ಚಿತ್ರಗಳನ್ನು ಬಳಸಿಕೊಂಡು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅತಿ ಸಮೀಪ ಯಾವುದೆಂದು ಪತ್ತೆಮಾಡಿ, ಅಲ್ಲಿ ಹೊಸದಾಗಿ ದಿಗಂತದೂರದ ನೇರ ರಸ್ತೆಗಳನ್ನು ನಿರ್ಮಾಣ ಮಾಡಬಹುದಾಗಿತ್ತು. ನೂರಾರು ವರ್ಷಗಳಿಂದ ರಸ್ತೆಬದಿಯ ಮರಗಳನ್ನೇ ಆಶ್ರಯಿಸಿಕೊಂಡು ಬದುಕುತ್ತಿರುವ ಕನಿಷ್ಠ ಜೀವಿಗಳು ನಿರಾಶ್ರಿತವಾಗುವುದನ್ನು ತಪ್ಪಿಸಬಹುದಿತ್ತು. ಎಲ್ಲಕ್ಕಿಂತ ಮಿಗಿಲಾಗಿ, ಕಾರ್ಪೋರೇಟ್ ಶೈಲಿಯ ರಸ್ತೆಗಳಿಗೆ ಪರ್ಯಾಯವಾಗಿ ಹಳೆಯ ಸಾಲುಮರದ ಅಂಕುಡೊಂಕು ರಸ್ತೆಗಳು ಇರುತ್ತಿದ್ದವು. ನಮ್ಮ ದೇಶದ ಜನಸಂಖ್ಯಾಸ್ಫೋಟ ಮತ್ತು ವಾಹನ ದಟ್ಟಣೆಯನ್ನು ಗಮನಿಸಿದರೆ, ಹಳೆಯ ರಸ್ತೆಗಳನ್ನು ಹಾಗೆ ಉಳಿಸಿಕೊಂಡು ಸದೃಢಗೊಳಿಸುತ್ತಲೇ ಹೊಚ್ಚ ಹೊಸದಾದ ಇಪ್ಪತ್ತೊಂದನೇ ಶತಮಾನದ ರಸ್ತೆಗಳನ್ನು ಹೇಗೆ ಬೇಕೋ ಹಾಗೆ ನಿರ್ಮಾಣ ಮಾಡಬಹುದಿತ್ತಲ್ಲವೇ ? ಈ ವಿಚಾರ ನನ್ನಂಥ ಅಧ್ಯಾಪಕನಿಗೆ ಹೊಳೆಯುವಾಗ, ನಮ್ಮ ರಾಜಕೀಯ ಧುರೀಣರಿಗೆ, ಯೋಜನಾತಜ್ಞರಾದ ಇಂಜಿನಿಯರ್‌ಗಳಿಗೆ ಹೊಳೆಯುವುದಿಲ್ಲವೆ ? ಒಂದು ರಾಷ್ಟ್ರ ಮನುಷ್ಯನಿರ್ಮಿತ ಬಂಡವಾಳವಾದವನ್ನು ಓಲೈಸುವುದನ್ನೇ ತನ್ನ ರಾಷ್ಟ್ರೀಯ ನೀತಿಯನ್ನಾಗಿಟ್ಟುಕೊಂಡಾಗ, ಜೀವಕೇಂದ್ರಿತ ಸಮಾಜವಾದವನ್ನು ಒಳಗೊಳ್ಳುವ ಪ್ರಶ್ನೆಗೆ ಅವಕಾಶ ತಾನೆ ಎಲ್ಲಿದೆ ?

ಹೆದ್ದಾರಿ ಪ್ರಯಾಣದಲ್ಲಿ ತೂಕಡಿಕೆ ಎನ್ನುವಾಗ ನನಗೆ 'ಲಾರೆನ್ಸ್ ಆಫ್ ಅರೇಬಿಯಾ' ಸಿನೆಮಾ ನೆನಪಾಗುತ್ತದೆ. ಇದರಲ್ಲಿ ದೀರ್ಘಾವಧಿಯ ಮರುಭೂಮಿಯ ಪ್ರಯಾಣ ದೃಶ್ಯಗಳಿವೆ. ಒಂಟೆಗಳ ಮೇಲೆ ಕುಳಿತು ಸುತ್ತಮುತ್ತ ಅಷ್ಟ ದಿಕ್ಕುಗಳ ಕೊನೆಯವರೆಗೆ ಎತ್ತ ನೋಡಿದರೂ ಮರಳ ಸಾಗರವನ್ನೇ ನೋಡುತ್ತಾ ಚಲಿಸುತ್ತಿರುವಾಗ ತೂಕಡಿಕೆ ಹೇಗೆ ಬರುತ್ತದೆ ಎಂಬುದನ್ನು ತೋರಿಸಲಾಗಿದೆ. ಒಂಟೆಗಳ ಕಾರವಾನ್ ಸಾಗುತ್ತಿರುವಾಗ ಗುಂಪಿನಲ್ಲಿ ಸವಾರನಿಲ್ಲದ ಒಂಟೆಯೊಂದು ಕಾಣುತ್ತದೆ. ಈ ಬಗ್ಗೆ ವಿಚಾರಿಸಿದಾಗ ಆತನು ತೂಕಡಿಸಿ ಮಾರ್ಗಮಧ್ಯೆ ಎಲ್ಲೋ ಬಿದ್ದುಹೋಗಿರಬೇಕೆಂದು ತಿಳಿಯುತ್ತದೆ. ಸವಾರನಿರಲಿ ಅಥವಾ ಚಾಲಕನಿರಲಿ! ಇವರಿಗೆ ಕೆಲಸವಿಲ್ಲದಿದ್ದರೆ ಪ್ರಯಾಣದ ಏಕತಾನತೆಯಿಂದ ತೂಕಡಿಕೆ ಬರುವುದು ಅತ್ಯಂತ ಸಹಜ. ಇಂಥದೇ ಅಪಾಯವನ್ನು ದಿಗಂತದೂರದ ನೇರ ರಸ್ತೆಗಳಲ್ಲಿಯೂ ನಿರೀಕ್ಷಿಸುವುದು ಉತ್ಪ್ರೇಕ್ಷೆಯೆನಿಸುವುದಿಲ್ಲ. ಈ ಬಗ್ಗೆ ಯೋಜನಾತಜ್ಞರಾದ ಇಂಜಿನಿಯರ್‌ಗಳು, ರಾಜಕೀಯ ಧುರೀಣರೂ ಗಂಭೀರವಾಗಿ ಚಿಂತಿಸಬೇಕು.

ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಅಭಿವೃದ್ಧಿ ಭಿನ್ನಕ್ಷೇತ್ರಗಳ ಚಟುವಟಿಕೆಗಳಾಗ ಬಾರದು. ಏಕೆಂದರೆ ಆರ್ಥಿಕ ಅಭಿವೃದ್ಧಿಯೇ ಬೇರೆ ಸಾಮಾಜಿಕ ಅಭಿವೃದ್ಧಿಯೇ ಬೇರೆ ಎಂಬ ಮನೋಭಾವದಿಂದ ಆರ್ಥಿಕತೆ ಮತ್ತು ಸಾಮಾಜಿಕತೆಗಳ ನಡುವೆ ಅಗಾಧವಾದ ಕಂದರ ಏರ್ಪಡುತ್ತದೆ. ಈ ಬಗ್ಗೆ ಗಾಂಧೀಜಿ ಸ್ಪಷ್ಟವಾದ ಎಚ್ಚರಿಕೆ ನೀಡಿದ್ದಾರೆ :

''...ಆರ್ಥಿಕ ಚಟುವಟಿಕೆಗಳು ಮತ್ತು ಸಾಮಾಜಿಕ ಸ್ಥಿತಿಗತಿಗಳು ಅವಿನಾಭಾವವಾಗಿರುವ ನೆಲೆಯಲ್ಲಿಯೇ ನಾವು ಇಡೀ ಅರ್ಥವ್ಯವಸ್ಥೆಯನ್ನು ನೋಡಬೇಕು




ಮತ್ತು ಗ್ರಾಮೀಣ ಭಾರತವನ್ನು ಬಲಗೊಳಿಸುವಲ್ಲಿಯೇ ಈ ದೇಶದ ಶಕ್ತಿ ಅಡಗಿದೆ ಎಂಬುದನ್ನು ಅರಿತುಕೊಳ್ಳಬೇಕು...''

ಅರಣ್ಯಭಾರತ - ಗ್ರಾಮೀಣಭಾರತ - ನಗರ ಭಾರತಗಳೆಂಬ ಮುಪ್ಪುರಿಬಂಧದಲ್ಲಿ ಮೊದಲನೆಯದು ಸಡಿಲಾಗುತ್ತಾ ಬಹುಮಟ್ಟಿಗೆ ಕಣ್ಮರೆಯಾಗಿದೆ. ಗ್ರಾಮೀಣ ಭಾರತ ಸಣಕಲಾಗುತ್ತಾ ಕೃಶವಾಗಿ, ರೋಗಬಾಧೆಯಿಂದ ನರಳುತ್ತಿದೆ. ಗಗನಚುಂಬಿ ಕಟ್ಟಡಗಳು ಮತ್ತು ಕೊಳಚೆ ಪ್ರದೇಶಗಳು ಎಂಬ ವೈರುಧ್ಯಗಳನ್ನೊಳಗೊಂಡಿರುವ ನಗರಭಾರತ ಪರಿಸರಮಾರಿಯಾಗಿ ಬೆಳೆದು ನಿಸರ್ಗದಿಂದ ಬಹುದೂರ ಬಂದುಬಿಟ್ಟಿದೆ. ನಗರಜೀವನ ಎಷ್ಟೇ ಆಕರ್ಷಣೆಯಿಂದ ಕೂಡಿದ್ದರೂ ಭೂಗತ ಜಗತ್ತು ಮತ್ತು ಅಪರಾಧಗಳ ಜನ್ಮಭೂಮಿಯಾಗಿ ಮಾರ್ಪಟ್ಟು ಸಾಮಾನ್ಯಜನತೆ ನರಕಯಾತನೆ ಅನುಭವಿಸುತ್ತಿದ್ದಾರೆ. ಈ ದಿಸೆಯಲ್ಲಿ ಅಮರ್ತ್ಯ ಸೇನ್ ವ್ಯಕ್ತಪಡಿಸಿರುವ ಆತಂಕ ಗಮನಾರ್ಹ :

''ಜಗತ್ತಿನ ಸೂಪರ್‌ಪವರ್ ಆಗಲು ಹೊರಟಿರುವ ಭಾರತವು ಆಡಳಿತಾತ್ಮಕ ಕಾರಣದಿಂದ ಆಂತರಿಕವಾಗಿ ದುರ್ಬಲಗೊಳ್ಳುತ್ತಿದೆ. ೬೦ರ ದಶಕದಲ್ಲಿ ಗ್ರಾಮೀಣ ಭಾರತದ ಬಗ್ಗೆ ನಾನು ಯಾವ ಸಮಸ್ಯೆಗಳನ್ನು ಕುರಿತು ಬರೆದಿದ್ದೆನೋ, ಆ ಸಮಸ್ಯೆಗಳೇ ವಿಭಿನ್ನರೂಪಗಳಲ್ಲಿ ಇವತ್ತಿಗೂ ಜೀವಂತ ಇವೆ. ಬಡವ- ಶ್ರೀಮಂತರ ಅಂತರವಂತೂ ಹೆಚ್ಚುತ್ತಾ ನಡೆದಿದೆ. ಇದಕ್ಕೆ ಜಾಗತೀಕರಣವೊಂದೇ ಕಾರಣ ಎನ್ನುವುದು ಸರಿಯಲ್ಲ...''

ಒಂದು ದೇಶದ ಆರ್ಥಿಕ ಅಭಿವೃದ್ಧಿಯು (೧) ಉಳ್ಳವರನ್ನು ಲಕ್ಷ್ಯದಲ್ಲಿಟ್ಟುಕೊಂಡದ್ದು ಮತ್ತು (೨) ಎಲ್ಲರನ್ನು ಒಳಗೊಳ್ಳುವಂತಹುದ್ದು ಎಂದು ಎರಡು ಬಗೆಯಾಗಿ ಮಾರ್ಪಟ್ಟಾಗ ಅದು ಶ್ರೀಸಾಮಾನ್ಯರಿಗೆ ಎರಡು ಬಗೆಯುವುದನ್ನೇ ಮಾಡುತ್ತಿರುತ್ತದೆ. ಅಭಿವೃದ್ಧಿಯ ಮಹಾಯಾನದಲ್ಲಿ ಸಾಗುತ್ತಿರುವ ನಮ್ಮ ದೇಶದಲ್ಲಿ ಇಂದು ಕುಬೇರರು ಮತ್ತು ಕುಚೇಲರು ಎರಡು ದಡಗಳಾಗಿಬಿಟ್ಟಿದ್ದಾರೆ. ಫೋಬ್ಸ್ ಎಂಬ ಸಂಸ್ಥೆಯ ಅಂಕಿ-ಅಂಶಗಳ ಪ್ರಕಾರ ಜಗತ್ತಿನ ನೂರುಮಂದಿ ಕುಬೇರರಲ್ಲಿ ಭಾರತೀಯರ ಹೆಸರುಗಳೂ ಇವೆ. ಅಂದಮಾತ್ರಕ್ಕೆ, ಭಾರತವು ಪ್ರಕಾಶಿಸುತ್ತಿದೆ, ಸದೃಢಗೊಳ್ಳುತ್ತಿದೆ ಎಂದು ಹೇಳಲಾಗುವುದಿಲ್ಲ. ಯಾವುದೇ ನಿರ್ದಿಷ್ಟ ಆದಾಯವಿಲ್ಲದೆ, ಅನಿಶ್ಚಿತ ಭವಿಷ್ಯದಲ್ಲಿ ತೊಳಲುತ್ತಾ ಬದುಕುವುದಕ್ಕಾಗಿ ಹೋರಾಟ ನಡೆಸುತ್ತಿರುವ ಜನರ ಬದುಕನ್ನೇ ಆಧರಿಸಿ 'ಮಾಯಾಲೋಕ' ಎಂಬ ಕೊಲಾಜ್ ಶೈಲಿಯ ಕಾದಂಬರಿಯನ್ನು ಬರೆದಿರುವ ಪೂರ್ಣಚಂದ್ರ ತೇಜಸ್ವಿ ಈ ದೃಷ್ಟಿಯಿಂದ ಬಹುಮುಖ್ಯರಾಗುತ್ತಾರೆ. ಈ ಕೃತಿಯಲ್ಲಿ ತಿಂಗಳಿಗೊಮ್ಮೆ ಸಂಬಳ ಪಡೆಯುವ ಒಂದಿಬ್ಬರು ವ್ಯಕ್ತಿಗಳ ಪ್ರಸ್ತಾಪವಿದೆಯಾದರೂ ಇವರುಗಳು ಮಹಾಭ್ರಷ್ಟರೂ ಲಂಚಕೋರರೂ ಆಗಿರುತ್ತಾರೆ. ಒಂದು ದೇಶ ತನ್ನಲ್ಲಿರುವ ಕುಚೇಲರನ್ನು ಅಪ್ಪಿಕೊಂಡು ಆದರಿಸಿ ಆತಿಥ್ಯ ನೀಡುವ ಶ್ರೀಕೃಷ್ಣನಂತೆ ವರ್ತಿಸಬೇಕು. ಆದರೆ... ಇದಕ್ಕೆ ವಿರುದ್ಧವಾಗಿ ಸಿಂಹಾಸನದಲ್ಲಿ ಕುಳಿತ ದ್ರುಪದನಂತೆ ಬೀಗುತ್ತಾ, ಬಡವನೂ ಗೆಳೆಯನೂ ಆದ ದ್ರೋಣನನ್ನು ನಿರಾಕರಿಸಿ ನೂಕುವ ಕೃತ್ಯ ಎಲ್ಲೆಡೆ ನಡೆಯುತ್ತಿದೆ.

ಹಿಂದಿನ ಕಾಲದಲ್ಲಿ 'ಧರ್ಮ'ವು ಸಮಾಜದ ಮೇಲೆ ಹೊಂದಿದ್ದ ಬಿಗಿಹಿಡಿತವನ್ನೇ, ಇಂದಿನ ಕಾಲದಲ್ಲಿ 'ವಿಜ್ಞಾನ'ವು ಹೊಂದಿದೆ. ವಿಜ್ಞಾನದ ಬಿಗಿಹಿಡಿತದಿಂದ ಯಾರಿಗೂ ಬಿಡುಗಡೆ ಇಲ್ಲ. ಅಣುನಕ್ಷೆಯನ್ನು ಹರಡಿಕೊಂಡ ಭೌತವಿಜ್ಞಾನ ಮತ್ತು ತಳಿನಕ್ಷೆಯನ್ನು ಹರಡಿಕೊಂಡ ಜೀವವಿಜ್ಞಾನ ಇವೆರಡೂ ನಮ್ಮ ದೇಶದಲ್ಲಿ 'ಪತಿತ ಪಾವನ'ವಾಗದೆ, ನಿಸರ್ಗ ಸಹಜವಾದ 'ಪಾವನತೆ'ಯನ್ನು 'ಪತಿತ'ಗೊಳಿಸುತ್ತಾ ಬರುತ್ತಿವೆ. ಇನ್ನು ಮುಂದೆ ನಮ್ಮ ದೇಶ ಮತ್ತು ನಾವು ಪತಿತಪಾವನ ರಾಜಾರಾಮ ಆಗುತ್ತೇವೆಯೋ ಅಥವಾ ಪಾವನ ಪತಿತ ರಾವಣರಾಗುತ್ತೇವೆಯೋ ಎಂಬ ಪ್ರಶ್ನೆ ನನ್ನನ್ನು ಕಾಡುತ್ತಿದೆ.

(ಶಿವಮೊಗ್ಗ ಜಿಲ್ಲೆಯ ಸಾಗರದ ಲೋಹಿಯಾ ಜನ್ಮಶತಾಬ್ದಿ ಪ್ರತಿಷ್ಠಾನವು ಕುಪ್ಪಳಿಯಲ್ಲಿ ಹಮ್ಮಿಕೊಂಡಿದ್ದ 'ಆಧುನಿಕತೆಯೊಂದಿಗೆ ಅನುಸಂಧಾನ' ಎಂಬ ಸಮಾಜವಾದಿ ಅಧ್ಯಯನ ಶಿಬಿರದಲ್ಲಿ ಎರಡನೇ ದಿನದ ಮೊದಲ ಗೋಷ್ಠಿಯಲ್ಲಿ ಮಾಡಿದ ಭಾಷಣವನ್ನು ಆಧರಿಸಿದ ಲೇಖನವಿದು.
ಶಿಬಿರದ ನಿರ್ದೇಶಕರು : ಡಿ. ಎಸ್. ನಾಗಭೂಷಣ)

ವಿ. ಚಂದ್ರಶೇಖರ ನಂಗಲಿ
೧೬ - ಶ್ರೀಗೌರಿ, ೪ನೇ ಕ್ರಾಸ್, ಕನಕನಗರ
ಹೊಸಕೋಟೆ - ೫೬೨ ೧೧೪ (ಬೆಂಗಳೂರು ಗ್ರಾಮಾಂತರ)



ದು. ಸರಸ್ವತಿ

# ರೇವತಿಯವರ ಕೃತಿ 'ನನ್ನ ಬಗೆಗಿನ ಸತ್ಯ'

ಹಿಜ್ರಾ ಸಾಮಾಜಿಕ ಕಾರ್ಯಕರ್ತೆ ರೇವತಿಯವರ ಪುಸ್ತಕ 'Truth about me - a Hijra Life Story' ಯನ್ನು ಪೆಂಗ್ವಿನ್ ಇಂಡಿಯಾದವರು ಪ್ರಕಟಿಸಿದ್ದಾರೆ. ಆ ಪುಸ್ತಕವನ್ನು ನಾನೇ ಬಿಡುಗಡೆ ಮಾಡಿ ಮಾತನಾಡಬೇಕೆಂಬುದು ರೇವತಿಯ ಪ್ರೀತಿಯ ಒತ್ತಾಯವಾಗಿತ್ತು. ಅದಕ್ಕೊಂದು ಕಾರಣವೂ ಇತ್ತು. ಈ ಪುಸ್ತಕ ಮೂಲದಲ್ಲಿ ತಮಿಳಿನದು. ತಮಿಳಿನಲ್ಲಿ ಬರೆದ ಮೇಲೆ ಮೊದಲು ಆಕೆ ಓದಿದ್ದು ನನಗೆ ಹಾಗೂ ಗೆಳತಿ ಶಕ್ಕುನ್‌ಗೆ. ನಡುನಡುವೆ ತಮಿಳುಗನ್ನಡದಲ್ಲಿ ಆಕೆ ವಿವರಣೆ ನೀಡುತ್ತಾ ಓದಿದ ಅನುಭವ ಹೇಗಿತ್ತೆಂದರೆ, ಆಕೆಯ ಜೀವನ ಕಣ್ಣಮುಂದೆ ಹಾದು ಹೋದಂತಾಗಿತ್ತು. ಪುಸ್ತಕ ಕುರಿತು ಬಿಡುಗಡೆಯ ದಿನ ಆಡಿದ ಮಾತಿನ ಬರಹ ರೂಪವಿದು. ಇದು ಪುಸ್ತಕ ಕುರಿತು ನನ್ನ ಅನಿಸಿಕೆಯೇ ಹೊರತು ವಿಮರ್ಶೆಯಲ್ಲ.

ಮಹಿಳಾ ಚಳವಳಿಯ ಭಾಗವಾಗಿರುವ ನನಗೆ, ರೇವತಿಯ ಪುಸ್ತಕ ಮುಖ್ಯವೆನಿಸುತ್ತದೆ. ತನ್ನನ್ನು ತಾನು ಹೆಣ್ಣೆಂದು ತೀವ್ರವಾಗಿ ಭಾವಿಸುತ್ತಿದ್ದ ಅಣ್ಣಾದೊರೈ, ರೇವತಿ ಎಂಬ ಹೆಣ್ಣಾಗಿ ಪರಿವರ್ತಿತವಾಗಿ ಆ ಕಾರಣಕ್ಕಾಗಿ ಅನುಭವಿಸಿದ ಅವಮಾನ, ಹಿಂಸೆ, ನಡೆಸಿದ ಹೋರಾಟದ ಕತೆ ಇದು.

ಗಂಡಾಗಿ ಹುಟ್ಟಿದ ಅಣ್ಣಾದೊರೈಗೆ ಪುಟ್ಟ ವಯಸ್ಸಿನಿಂದಲೂ ಹೆಣ್ಣು ಮಕ್ಕಳಂತೆ ವರ್ತಿಸಲು, ಅವರಂತೆ ಉಡುಪು ಧರಿಸಲು, ಕೆಲಸ ಮಾಡಲು ಆಸೆ. ತಾನು ಬೆಳೆದಂತೆ ಈ ಆಸೆಯು ಗಟ್ಟಿಯಾಗುತ್ತಾ ಗೊಂದಲ ಉಂಟಾಗುತ್ತದೆ. ತಾನು ಹೆಣ್ಣೇ ಎಂಬ ಭಾವ ಗಟ್ಟಿಯಾಗಿ, ಹಾಗೆಯೇ ನಡೆದುಕೊಳ್ಳತೊಡಗಿದಾಗ ಮನೆಯವರಿಂದ ಹೊರಗಿನವರಿಂದ ಆದ ಕಷ್ಟ ಅನೇಕ. ಅದರಿಂದ ತಪ್ಪಿಸಿಕೊಳ್ಳಲು ಮನೆ ಬಿಟ್ಟುಹೋಗಿ ಹಿಜ್ರಾಗಳ ಸಮುದಾಯ ಸೇರಿ ಅಲ್ಲಿನ ಸಂಪ್ರದಾಯದಂತೆ ಆಪರೇಶನ್ ಮೂಲಕ ಶಿಶ್ನವನ್ನೇ ತೆಗೆಸಿಕೊಂಡು ಸಂಪೂರ್ಣ ಹೆಣ್ಣಾಗುತ್ತಾಳೆ. ಹೊಟ್ಟೆಪಾಡಿಗೆಂದು ದೆಹಲಿ ಹಾಗೂ ಮುಂಬೈನಲ್ಲಿ ಆ ಸಮುದಾಯದವರು ಮಾಡುವ ಭಿಕ್ಷಾಟನೆ, ವೇಶ್ಯಾವಾಟಿಕೆ ವೃತ್ತಿಯನ್ನೇ ಮಾಡುತ್ತಾ, ದಾರುಣಮಯ ಬದುಕಿಗೂ ಮುಖಾಮುಖಿಯಾಗುತ್ತಾಳೆ. ಅದರ ನಡುವೆ ಕುಟುಂಬಕ್ಕೆ ಹಿಂತಿರುಗಲು ಪದೇ ಪದೇ ಪ್ರಯತ್ನಿಸುತ್ತಾಳೆ. ಅದು ಸಫಲವಾಗದೆ ಬದುಕನ್ನು ಅರಸುತ್ತ ಬೆಂಗಳೂರಿಗೆ ಬಂದು ಮತ್ತೆ ವೇಶ್ಯಾವೃತ್ತಿಗೆ ಹಿಂದಿರುಗುತ್ತಾಳೆ. ತನಗೆ ಚೇಲಾ (ಶಿಷ್ಯೆ) ಆಗಿ ಬರುವ ಫೆಮಿಲಾಳ ಮೂಲಕ ಲೈಂಗಿಕ ಅಲ್ಪಸಂಖ್ಯಾತರ ಮಾನವ ಹಕ್ಕುಗಳಿಗಾಗಿ ಹೋರಾಡುವ ಸ್ವಯಂ ಸೇವಾ ಸಂಸ್ಥೆಯ ಕೆಲಸಕ್ಕೆ ಸೇರುತ್ತಾಳೆ. ಅಲ್ಲಿಂದ ಆಕೆಯ ಬದುಕು ಬೇರೆಯ ತಿರುವನ್ನು ಪಡೆದುಕೊಳ್ಳುವುದೇ ಆತ್ಮಕತೆಯಾಗಿದೆ.

ತನ್ನ ಬದುಕನ್ನು ಬಿಚ್ಚಿಡುವ ಪ್ರಕ್ರಿಯೆಯಲ್ಲಿ ರೇವತಿ ಕಟು ವಾಸ್ತವಗಳೊಂದಿಗೆ ನಮ್ಮನ್ನು ಮುಖಾಮುಖಿಯಾಗಿಸುತ್ತಾಳೆ. ಜೊತೆಯಲ್ಲಿ ಬಹು ಮುಖ್ಯ ಪ್ರಶ್ನೆಗಳನ್ನು ಎತ್ತುತ್ತಾಳೆ.

ನೈತಿಕತೆ ಮತ್ತು ಲಿಂಗ ಪರಿವರ್ತನೆ ಕುರಿತ ಪ್ರಶ್ನೆಗಳು, ಸಲಿಂಗ ಕಾಮ, ಪ್ರಾಣಿ, ಸಸ್ಯ ಮತ್ತು ಮನುಷ್ಯರಲ್ಲಿರುವ ಅಂತರಲಿಂಗೀಯ ಗುಣ, ಹೆಣ್ಣೊಳಗಿನ ಗಂಡುತನ, ಗಂಡೊಳಗಿನ ಹೆಣ್ಣುತನ ಇತ್ಯಾದಿ ಎಲ್ಲವೂ ಎಷ್ಟೋ ಕಾಲದಿಂದಲೂ ಇವೆ. ಅವು ವೈಜ್ಞಾನಿಕವಾಗಿಯೂ ಸಾಬೀತಾಗಿವೆ. ಹೀಗಿರುವಾಗ ನಿರ್ದಿಷ್ಟ ಗುಣಗಳನ್ನು ಆರೋಪಿಸಿ ಗಂಡು ಹೆಣ್ಣೆಂದು ವಿಭಜಿಸುವುದೇ ಅಸಹಜ. ಇಂತಹ ಅಸಹಜ ವಿಭಜನೆಯ ಆಧಾರದ ಮೇಲೆ ಒಂದು ಸಮುದಾಯದ (ಲೈಂಗಿಕ ಅಲ್ಪ ಸಂಖ್ಯಾತರು) ಲೈಂಗಿಕತೆಯನ್ನೇ ಅನೈತಿಕವೆನ್ನುವುದು ಸರಿಯೆ? ಕೇವಲ ಮನುಷ್ಯರಾಗಿ ಬದುಕುವ ಅವಕಾಶಗಳ ಬಾಗಿಲುಗಳನ್ನೇ ಮುಚ್ಚಿ ಹಾಕಿ ಅವರು ಹುಡುಕಿಕೊಂಡ ಬದುಕನ್ನೇ ಅಪರಾಧೀಕರಣಗೊಳಿಸುವುದು ನೈತಿಕವೇ? ನೈತಿಕತೆ ಎಂಬುದು ಲೈಂಗಿಕತೆಗಷ್ಟೇ ಸೀಮಿತವೇ?

ಅಸಹಜತೆಯ ಹೆಸರಿನಲ್ಲಿ ಲೈಂಗಿಕ ಅಲ್ಪಸಂಖ್ಯಾತರ ಮೇಲೆ ನಡೆಸುವ ಹಿಂಸೆ, ದೌರ್ಜನ್ಯದ ಹಿಂದೆ ಕೆಲಸ ಮಾಡುವುದು ಸಮಾಜದ ಅಧಿಕಾರ ರಚನೆ, ಖಾಸಗಿ ಆಸ್ತಿ ಹಾಗೂ ಸಂತತಿಯ ಮುಂದುವರಿಕೆ. ಮಕ್ಕಳನ್ನು ಬಯಸುವುದು, ಸಾಕುವುದು ನಮ್ಮ ಆಸ್ತಿಗೆ ವಾರಸುದಾರರಾಗಲು, ನಮ್ಮ ಅಪೂರ್ಣ ಮಹತ್ವಾಕಾಂಕ್ಷೆಗಳನ್ನು ಮುಂದುವರಿಸಲು. ಹಾಗಾಗಿಯೇ ಮಕ್ಕಳೂ ಸಹ ನಮ್ಮ ಖಾಸಗಿ ಆಸ್ತಿಯೇ ಹೊರತು ಈ ಭೂಮಿಯ ನಾಳೆಗಳಲ್ಲ. ನಮ್ಮ ಮಕ್ಕಳು ನಮ್ಮ ಮಕ್ಕಳಲ್ಲ, ನಮ್ಮ ನಾಳಿನ ಪ್ರೇಮದ ಪುತ್ರ ಪುತ್ರಿಯರು, ಅವರು ಬಾಣದಂತೆ ಮುಂದೆ ಸಾಗಲು ಬಾಗಿ ಬಿಲ್ಲಾಗೋಣ ಎಂಬ ಖಲೀಲ್ ಗಿಬ್ರಾನ್‌ನ ಸಾಲುಗಳು ಇಲ್ಲಿ ನೆನಪಾಗುತ್ತದೆ.

ಮತ್ತೊಂದು ಪ್ರಶ್ನೆ ಲಿಂಗ ಪರಿಕಲ್ಪನೆಯದು. ಹೆಣ್ಣೆಂದರೆ ಹೀಗೆ, ಗಂಡೆಂದರೆ ಹೀಗೆ ಎಂದು ಗೆರೆ ಎಳೆದಂತೆ ಹೇಳಲು ಸಾಧ್ಯವೇ? ಸಣ್ಣ ಹುಡುಗನಿದ್ದಾಗ ಏನು ಹೆಣ್ಣಿನಂತೆ ನಡೆಯುತ್ತೀಯಾ, ವರ್ತಿಸುತ್ತೀಯಾ ಎನ್ನುತ್ತಿದ್ದವರು, ಸಂಪೂರ್ಣ ಹೆಣ್ಣಿನಂತೆ ಆದಾಗ ಏನು ದನಿ ಗಂಡಸಿನಂತಿದೆ? ನೀನು ನಿಜವಾಗಿಯೂ ಹೆಣ್ಣಾ? ನಿನಗಿರುವುದು ನಿಜವಾದ ಮೊಲೆಗಳೇ? ಎಂದು ರೇವತಿಯನ್ನು ತಮಾಷೆ ಮಾಡುವುದು, ಅವಮಾನ

> ಲಿಂಗ ತಾರತಮ್ಯಕ್ಕೆ ಕಾರಣವಾಗಿರುವ ಪಿತೃ ಪ್ರಧಾನತೆ, ಪಿತೃ ಪ್ರಧಾನತೆಯನ್ನು ಎತ್ತಿ ಹಿಡಿವ ಮದುವೆ, ಕುಟುಂಬ ವ್ಯವಸ್ಥೆಯನ್ನು ಮಹಿಳಾ ಚಳವಳಿ ಪ್ರಶ್ನಿಸಿಕೊಂಡೇ ಬಂದಿದೆ. ಈ ಹಿನ್ನೆಲೆಯಲ್ಲಿ ಮದುವೆ, ಕುಟುಂಬ ಕುರಿತ ರೇವತಿಯ ವಿಷಯಗಳು ಪಿತೃ ಪ್ರಧಾನ ಸಮಾಜ ಅಪೇಕ್ಷಿಸುವ ಹೆಣ್ಣಿನ ಪಾತ್ರಕ್ಕೆ ಪೂರಕವಾಗಿಯೇ ಇವೆ ಎನಿಸಿಬಿಡುತ್ತದೆ. ಆದರೆ ಆ ಚೌಕಟ್ಟಿನೊಳಗಡೆಯೇ ಸ್ಥೈರ್ಯ, ಆತ್ಮವಿಶ್ವಾಸವನ್ನು ಬಿಟ್ಟುಕೊಡದೆ ತನ್ನನ್ನು ತಾನು ಪ್ರಬಲವಾಗಿ ಸಮರ್ಥಿಸಿಕೊಳ್ಳುವ ಹಲವು ಪ್ರಸಂಗಗಳನ್ನು ಒಡಹುಟ್ಟಿದವರೊಂದಿಗೆ ಹಾಗೂ ವೈವಾಹಿಕ ಬದುಕಿನಲ್ಲಿ ಕಾಣಬಹುದು.




ಲೇಖಕರು : ಎ. ರೇವತಿ
ಪ್ರಕಾಶಕರು : ಪೆಂಗ್ವಿನ್ (ಇಂಡಿಯ)
ಹೊಸ ದಿಲ್ಲಿ
ಪುಟ : 304 ಬೆಲೆ : ರೂ. 299

ಮಾಡುವುದು ಸಮಾಜದ ದ್ವಂದ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಇದರ ಎದುರು ತನ್ನನ್ನು ತಾನು ಸಂಪೂರ್ಣ ಹೆಣ್ಣೆಂದು ಉತ್ಕಟವಾಗಿ ಭಾವಿಸುವ ಭಾವನೆ ಮುಖ್ಯವಾಗುವುದಿಲ್ಲ. ದೇಹ ಮನಸ್ಸಿನ ತುಡಿತಗಳನ್ನು ಹತ್ತಿಕ್ಕಲೂ ಆಗದೆ ತನ್ನವರನ್ನು ಒಪ್ಪಿಸಲೂ ಆಗದೆ ಆಕೆ ಪಡುವ ಪಾಡು ಮನ ಕಲಕುತ್ತದೆ. ಒಡಹುಟ್ಟಿದವರೇ ಹಿಯಾಳಿಸಿ, ಹೊಡೆದು, ಆತ್ಮಹತ್ಯೆಗೆ ಪ್ರಯತ್ನಿಸಿದಾಗಲೂ ತಣ್ಣಗೆ ಸುಮ್ಮನಿರುವುದು ವಿರುದ್ಧಲಿಂಗಿ ಲೈಂಗಿಕತೆಯ ಪ್ರಾಬಲ್ಯವನ್ನು ಸೂಚಿಸುತ್ತದೆ.

ಗಂಡಿನ ದೇಹದೊಳಗೆ ಬಂಧಿಯಾಗಿರುವ ಹೆಣ್ಣು ಮತ್ತೆ ಪುರುಷರ ಉಡುಪು ತೊಟ್ಟಾಗ, ಹಿಂದೆ ಬಿಟ್ಟು ಬಂದುದೇ ನನ್ನ ನಿಜವಾದ ಸ್ವರೂಪ, ಈಗ ತೊಟ್ಟಿರುವುದೇ ವೇಷ ಎಂಬ ಮಾತುಗಳು ಹಾಗೂ ಹೆಣ್ಣೆಂದು ಭಾವಿಸುವ ಸಲುವಾಗಿಯೇ ಪುರುಷತ್ವದ ಅಸ್ತಿತ್ವವೇ ಎನಿಸಿಕೊಂಡಿರುವ ಶಿಶ್ನವನ್ನೇ ತೆಗೆಸಿ ಕೊಳ್ಳುವುದು, ಇವೆಲ್ಲವೂ ಆಳವಾದ ಪ್ರಶ್ನೆಗಳನ್ನು ಎತ್ತುತ್ತವೆ.

ಏನು ಹೆಣ್ಣೆಂದರೆ ? ಮೊಲೆ, ಯೋನಿ, ಗರ್ಭವೇ ? ಗಂಡೆಂದರೆ ಮೀಸೆ, ದಾಡಿ, ಶಿಶ್ನವೇ ? ಇದರಾಚೆಗಿನದು ಏನು ? ಇದ್ದರೆ ಅದು ಒಂದಂತೂ ಅಲ್ಲ, ಎಷ್ಟೆಷ್ಟೋ ತೆರನ ಜೀವಿಗಳೋ ಅಷ್ಟಷ್ಟು ತೆರನಿರಬೇಕು.

ಗಂಡು ಮತ್ತು ಹೆಣ್ಣು ಎಂಬ ವಿಭಜನೆಯನ್ನು ಎಷ್ಟು ಕಠೋರವಾಗಿ, ಅಮಾನವೀಯವಾಗಿ ನಿರ್ಧರಿಸಲಾಗಿದೆ ಎಂದರೆ ಅಲ್ಲಿ ಪರಸ್ಪರರಲ್ಲಿ ಇರುವ ವಿರುದ್ಧ ಲಿಂಗೀಯತೆ ಹಾಗೂ ಭಾವನೆಗಳನ್ನು ಹೊಸಕಿಹಾಕಲಾಗಿದೆ. ಬಯಕೆಗಳು ಜೈವಿಕತೆಗಷ್ಟೇ ಸೀಮಿತವಲ್ಲ. ಮನುಷ್ಯರ ಭಾವನಾತ್ಮಕ ಲೋಕ, ಸಾಮಾನ್ಯ ಲೋಕದ ತರ್ಕಕ್ಕೆ ನಿಲುಕದು. ಈ ಹಿನ್ನೆಲೆಯಲ್ಲಿ ಓದಿದಾಗ ರೇವತಿಯ ಬದುಕು ಕೇವಲ ಮನುಷ್ಯ ಬದುಕೇ ಹೊರತು ಅಸಹಜ ಬದುಕಲ್ಲ.

ಲಿಂಗ ತಾರತಮ್ಯಕ್ಕೆ ಕಾರಣವಾಗಿರುವ ಪಿತೃ ಪ್ರಧಾನತೆ, ಪಿತೃ ಪ್ರಧಾನತೆಯನ್ನು ಎತ್ತಿ ಹಿಡಿವ ಮದುವೆ, ಕುಟುಂಬ ವ್ಯವಸ್ಥೆಯನ್ನು ಮಹಿಳಾ ಚಳವಳಿ ಪ್ರಶ್ನಿಸಿಕೊಂಡೇ ಬಂದಿದೆ. ಈ ಹಿನ್ನೆಲೆಯಲ್ಲಿ ಮದುವೆ, ಕುಟುಂಬ ಕುರಿತ ರೇವತಿಯ ವಿಷಯಗಳು ಪಿತೃಪ್ರಧಾನ ಸಮಾಜ ಅಪೇಕ್ಷಿಸುವ ಹೆಣ್ಣಿನ ಪಾತ್ರಕ್ಕೆ ಪೂರಕವಾಗಿಯೇ ಇವೆ ಎನಿಸಿಬಿಡುತ್ತದೆ. ಆದರೆ ಆ ಚೌಕಟ್ಟಿನೊಳಗಡೆಯೇ ಸ್ಥೈರ್ಯ, ಆತ್ಮವಿಶ್ವಾಸವನ್ನು ಬಿಟ್ಟುಕೊಡದೆ ತನ್ನನ್ನು ತಾನು ಪ್ರಬಲವಾಗಿ ಸಮರ್ಥಿಸಿಕೊಳ್ಳುವ ಹಲವು ಪ್ರಸಂಗಗಳನ್ನು ಒಡಹುಟ್ಟಿದವರೊಂದಿಗೆ ಹಾಗೂ ವೈವಾಹಿಕ ಬದುಕಿನಲ್ಲಿ ಕಾಣಬಹುದು. ಉದಾಹರಣೆಗೆ, ಆಸ್ತಿಗೆ ಸಂಬಂಧಪಟ್ಟಂತೆ ಮನೆಯವರೊಂದಿಗೆ ನಡೆಸುವ ಹೋರಾಟದಲ್ಲಿ, ವೈವಾಹಿಕ ಜೀವನದಲ್ಲಿ ಉಂಟಾದ ಮನಸ್ತಾಪಗಳ ಕುರಿತು ನಡೆಸುವ ಮಾತುಕತೆಯಲ್ಲಿ ಅಂತಹ ಸಮರ್ಥನೆಯನ್ನು ಕಾಣಬಹುದು. ಅವಳ ಕತೆಯ ಭಾಗವಾಗಿಯೇ, ಅವಳ ಸಮುದಾಯ, ಕುಟುಂಬ, ಹಳ್ಳಿ, ಅಲ್ಲಿನ ಆಚರಣೆಗಳು, ಉತ್ಸವಗಳು ದಾಖಲಾಗಿರುವುದು, ತನ್ನನ್ನು ಪರಕೀಯಳೆಂದು ಭಾವಿಸದೆ ಸಮಷ್ಟಿಯ ಭಾಗವಾಗಿ ಪರಿಗಣಿಸಿರುವುದರ ಪ್ರತೀಕವಾಗಿದೆ. ಸಮಾಜವೇ ಪರಕೀಯಗೊಳಿಸಿದರೂ ಆ ರೀತಿ ಭಾವಿಸದಿರುವುದು ಗಮನಾರ್ಹ ಅಂಶವಾಗಿದೆ.

ಮುಖ್ಯವಾಹಿನಿಯಿಂದ ಪರಕೀಯಗೊಂಡಂತಹ ಸಮುದಾಯವು ತನ್ನ ಉಳಿವಿಗೆ, ಭದ್ರತೆಗೆ ಸಾಂಸ್ಥೀಕರಣ ಗೊಂಡಾಗ ಅದರ ಸಹಜ ಭಾಗವೆಂಬಂತೆ ಅಲ್ಲಿಯೂ ಅಧಿಕಾರ, ಶ್ರೇಣೀಕರಣ ನಿರ್ಮಾಣಗೊಳ್ಳುವುದು ಗಮನಿಸಬೇಕಾದ ಅಂಶ. ಹಿಜ್ರಾ ಸಮುದಾಯದಲ್ಲಿರುವ ಗುರು, ಚೇಲಾ, ಗುರುಬಾಯಿ ಇತ್ಯಾದಿ ಸಂಬಂಧಗಳು, ಅವರು ನಿರ್ವಹಿಸಬೇಕಾದ ನೀತಿ, ನಿಯಮ, ಜವಾಬ್ದಾರಿ, ಆಚರಣೆಗಳು, ದಂಡ, ಉಡುಗೊರೆ ಇತ್ಯಾದಿಯನ್ನು ನೋಡುವಾಗ ಈ ಅಂಶ ಮುಖ್ಯವಾಗುತ್ತದೆ. ಈ ಚೌಕಟ್ಟಿನಲ್ಲೇ, ಭದ್ರತೆ ಹಾಗೂ ಸಹ ಬಾಂಧವರ ಸಹೃದಯತೆಯನ್ನು ರೇವತಿ ಅನುಭವಿಸುವುದೂ ಸಹ ಸತ್ಯ.

ಈ ಪುಸ್ತಕದಲ್ಲಿನ ಬಹು ದೊಡ್ಡ ಕೊರತೆ ಎಂದರೆ ಕಾರ್ಯಕರ್ತೆಯಾಗಿ ಆಕೆ ರೂಪುಗೊಂಡ ಪ್ರಕ್ರಿಯೆ ಸಮರ್ಥವಾಗಿ ದಾಖಲಾಗದೇ ಇರುವುದು. ಸ್ವಯಂ ಸೇವಾ ಸಂಸ್ಥೆಯೊಂದರಲ್ಲಿ ಪೇಪರ್‌ನಲ್ಲಿ ಬರುವ ವರದಿಗಳನ್ನು ಮೌನವಾಗಿ ಕತ್ತರಿಸಿ ದಾಖಲಿಸುತ್ತಿದ್ದ ರೇವತಿ ನಿಧಾನವಾಗಿ ಬೆಳೆಯುತ್ತಾ ತನ್ನ ಸಮುದಾಯದವರ ಮಾನವ ಹಕ್ಕುಗಳಿಗಾಗಿ ಹೋರಾಟ ಮಾಡುವುದಷ್ಟೇ ಅಲ್ಲದೆ ಇತರ ಜನಪರ ಸಂಘಟನೆಗಳೊಂದಿಗೂ ತನ್ನ ಬೆಂಬಲವನ್ನು ವಿಸ್ತರಿಸಿಕೊಂಡಂತಹ ಪ್ರಮುಖ ಘಟ್ಟ ಸಮರ್ಥವಾಗಿ ದಾಖಲಾಗಿಲ್ಲ. ಮೂಲದಲ್ಲಿ ವಿವರವಾಗಿದ್ದ ಆ ಭಾಗವನ್ನು ಇಂಗ್ಲಿಷ್‌ನಲ್ಲಿ ಎಡಿಟ್ ಮಾಡಲಾಗಿದೆ.

ನಮ್ಮ ನಡುವೆಯೇ ಇದ್ದ, ಆ ಬಗ್ಗೆ ನಾವು ಅಜ್ಞಾನಿಗಳಾಗಿದ್ದ ಲೋಕವನ್ನು ಕುರಿತು ತನ್ನ ಆತ್ಮಕತೆಯ ಮೂಲಕ ರೇವತಿ ಅರಿವು ಮೂಡಿಸಿದ್ದಾಳೆ. ಅದಕ್ಕಾಗಿ ರೇವತಿಗೆ ವಂದನೆಗಳು. ಹಾಗೆಯೇ ಎಲ್ಲ ಐಡೆಂಟಿಟಿ ಪಾಲಿಟಿಕ್ಸ್‌ನ ಹೋರಾಟಗಳೂ ಮಾನವ ಹಕ್ಕುಗಳ ಹೋರಾಟವೇ. ಅವುಗಳ ಅಂತಿಮ ಗುರಿ ಮಾನವೀಯತೆ. ಅಂತಹ ದಾರಿಯಲ್ಲಿ ಸಾಗಬಯಸುವ ಲೈಂಗಿಕ ಅಲ್ಪಸಂಖ್ಯಾತರ ಹೋರಾಟದ ಹಾದಿಯಲ್ಲಿ ರೇವತಿಯ ಪುಸ್ತಕ ಒಂದು ಮೈಲಿಗಲ್ಲು ಎಂದರೆ ತಪ್ಪಾಗದು.

ದು. ಸರಸ್ವತಿ
ನಂ. ೫೮೪, ೧೦ನೇ 'ಸಿ' ಅಡ್ಡರಸ್ತೆ, ವೆಸ್ಟ್ ಆಫ್ ಕಾರ್ಡ್ ರಸ್ತೆ,
ಮಹಾಲಕ್ಷ್ಮೀಪುರಂ, ೨ನೇ ಹಂತ, ಬೆಂಗಳೂರು - ೫೬೦ ೦೮೬



## ಗಜ಼ಲ್

ನೀ ನಡೆದು ಬಂದೆ ಇಬ್ಬನಿಗಳೆಲ್ಲ ನಕ್ಕವು ನೀನಿರುವುದೇ ಹಾಗೆ
ಸವಿಮುತ್ತ ನೀಡಿದೆ ಚಿಕ್ಕೆಗಳೆಲ್ಲ ಮಿನುಗಿದವು ನೀನಿರುವುದೇ ಹಾಗೆ

ಮುಂಜಾವಿನ ಹೊಂಗಿರಣದಿ ತೊಯ್ದ ಗಿಡಗಂಟೆ ಬಳ್ಳಿಗಳೆಲ್ಲ
ಚಿಗುರು ಬೆರಳಿಂದ ಸವರಿದೆ ಮೊಗ್ಗೆಲ್ಲ ಅರಳಿದವು ನೀನಿರುವುದೇ ಹಾಗೆ

ಸುಳಿವ ತಂಗಾಳಿಯಲ್ಲಿ ನೀರವ ಮೌನದಲ್ಲಿ ಪಿಸುಮಾತಿನ ಹೊನಲ
ಹರಿಸಿದೆ ಕೋಗಿಲೆಗಳೆಲ್ಲ ಕೂಜನವ ಮರೆತವು ನೀನಿರುವುದೇ ಹಾಗೆ

ಕುಡಿನೋಟ, ಹುಸಿನಗೆ, ಕಿರುಗೆಜ್ಜೆಯ ನಾದವ ಹೊಮ್ಮಿಸಿ, ಚಿಮ್ಮುತ, ಬಳುಕುತ
ಹಸಿರಿನಲೆಲ್ಲ ಸುಳಿದೆ ಚಿಟ್ಟೆಗಳೆಲ್ಲ ಬೆರಗಾದವು ನೀನಿರುವುದೇ ಹಾಗೆ

ಸುಳಿಸುಳಿಯಾಗಿ ಹೆರಳ ಕೆದರಿ ಕೊರಳು ಕೊಂಕಿಸಿ ಓರೆನೋಟವ ಬೀರಿ
ಮುನಿಸು ತೋರಿದೆ ನವಿಲುಗಳೆಲ್ಲ ಹೆಜ್ಜೆ ಮರೆತವು ನೀನಿರುವುದೇ ಹಾಗೆ

ಸಿದ್ಧರಾಮ ಹಿರೇಮಠ
ಕೂಡ್ಲಿಗಿ

ಪ್ರದೀಪ್ ಅಂತೋನಿ ಯೇ. ಸ.

# ಆಚರಣೆಗಳು ಅಗತ್ಯವೇ?

> ಆಚರಣೆಯು ಬಾಹ್ಯ ಆಡಂಬರವಾದರೂ ವ್ಯಕ್ತಿಯ ಧಾರ್ಮಿಕ ನವೀಕರಣದ ಸುಸಂದರ್ಭ. ಹಬ್ಬಹರಿದಿನಗಳಲ್ಲಿ ವಿಶೇಷ ಪ್ರವಚನಗಳು, ಇತಿಹಾಸ ಅಥವಾ ಪುರಾಣ ಕಥಾಧಾರಿತ ನಾಟಕ ಮತ್ತು ನೃತ್ಯ ರೂಪಕಗಳು ಹಾಗೂ ಸಾಮುದಾಯಿಕ ದೇವಾರಾಧನೆಗಳು ಸಾಮಾನ್ಯ. ಇವುಗಳಲ್ಲಿ ಭಕ್ತರು ತಮ್ಮ ಜೀವನದ ದ್ವಂದ್ವ, ನೋವು ನಲಿವುಗಳಿಗೆ ಅನುಭವಾತೀತ ಅರ್ಥವನ್ನು ಕಂಡುಕೊಳ್ಳುತ್ತಾರೆ. ಹೀಗೆ ಧಾರ್ಮಿಕ ರಹಸ್ಯವನ್ನು ಸಂಕೇತಗಳ ಮೂಲಕ ಅಭಿವ್ಯಕ್ತಪಡಿಸುವುದರ ಮೂಲಕ ಆಚರಣೆಗಳು ರಕ್ಷಣಾ ಹಾಗೂ ವಿಮೋಚನಾ ಸಾಧನಗಳಾಗುತ್ತವೆ. ಹೀಗೆ ಆಚರಣೆಗಳು ಈ ನಮ್ಮ ಜೀವನ ಇಹಲೋಕದ ದೈನಂದಿನ ಜೀವನವನ್ನು ಮೀರಿದ್ದು ಎಂದು ಸಾರುವ ಸಂಕೇತಗಳಷ್ಟೆ.

ನಮ್ಮ ದೇಶದಲ್ಲಿ ಆಚರಣೆಗಳಿಗೆ ಕೊನೆಯಿಲ್ಲ. ಯಾವುದೇ ಕ್ಷುಲ್ಲಕ ಕಾರಣವು ಸಹ ಆಚರಣೆಗೆ ಎಡೆಮಾಡಿಕೊಡುತ್ತದೆ. ಸಮೀಕ್ಷೆಯೊಂದರ ಪ್ರಕಾರ ಶ್ರೀಲಂಕಾ ನಂತರ ವಿಶ್ವದಲ್ಲೇ ಹೆಚ್ಚು ವಾರ್ಷಿಕ ಆಚರಣೆಗಳನ್ನು ಆಚರಿಸುವ ದೇಶವೆಂದರೆ ಭಾರತ. ದೇಶದಲ್ಲಿರುವ ಅಸಂಖ್ಯಾತ ಧರ್ಮಗಳು ತಮ್ಮದೇ ಆದ ವಿವಿಧ ಹಬ್ಬಗಳನ್ನು ಆಚರಿಸುತ್ತವೆ. ಇವುಗಳೊಂದಿಗೆ ವಿವಿಧ ಸಾಂದರ್ಭಿಕ ಆಚರಣೆಗಳೂ ಇವೆ. ಇವುಗಳಲ್ಲಿ ವ್ಯಕ್ತಿಯ ಜನನ, ಮರಣ, ಹರೆಯದ ಆರಂಭ ಮತ್ತು ವಿವಾಹ ಎಲ್ಲವನ್ನೂ ಆಚರಿಸಲ್ಪಡುವ ಸಂದರ್ಭಗಳೂ ಇವೆ. ನಾಯಕರ ಮತ್ತು ಸಂತರ ಜನ್ಮದಿನಾಚರಣೆಯನ್ನು ಆಚರಿಸುತ್ತೇವೆ. ಇತ್ತೀಚೆಗೆ ಈ ಸಾಲಿನಲ್ಲಿ ರಾಜಕೀಯ ಪ್ರೇರಿತ ಸಮಾರಂಭಗಳೂ ಸೇರಿಕೊಳ್ಳುತ್ತಿವೆ. ಈ ದಿಶೆಯಿಲ್ಲ ಸರ್ಕಾರದ ಸಾಧನ ಸಮಾವೇಶ ಅಥವಾ ಜನ ಜಾಗೃತಿ ಸಮಾವೇಶಗಳು ಕೆಲವು ಉದಾಹರಣೆಗಳಷ್ಟೆ.

ಆಚರಣೆಯಲ್ಲಿ ನೇರವಾಗಿ ಭಾಗಿಯಾಗದವರಿಗೆ ಈ ಸಂದರ್ಭಗಳು ತೊಂದರೆ ಸೃಷ್ಟಿಸುವ ಪೀಡೆಗಳಾಗಿವೆ. ವಿಪರೀತ ಶಬ್ದ, ಪ್ರಕೃತಿ ಮಾಲಿನ್ಯ ಹಾಗೂ ಸಾರ್ವಜನಿಕ ಪ್ರದೇಶಗಳಾದ ರಸ್ತೆ, ಮೈದಾನಗಳಲ್ಲಿ ಜನರಿಗೆ ಅನಾನುಕೂಲವನ್ನು ಸೃಷ್ಟಿಸುವುದು ಮಾತ್ರವಲ್ಲದೆ ಈ ಆಚರಣೆಗಳು ವ್ಯಕ್ತಿಗಳನ್ನು ದುಂದುವೆಚ್ಚದ ಹೊರೆಯಿಂದಾಗಿ ಸಾಲಗಾರರನ್ನಾಗಿ ಮಾರ್ಪಡಿಸುತ್ತವೆ. ಕೆಲವು ಆಚರಣೆಯ ಸಂದರ್ಭಗಳಲ್ಲಿ ಎದುರಾಗುವ ಅಹಿತಕರ ಘಟನೆಗಳು ಜೀವನದಲ್ಲಿ ಮರೆಯಲಾಗದಂತಹ ಕಹಿನೆನಪುಗಳಾಗಿ ಉಳಿಯುತ್ತವೆ. ಇಂತಹ ಆಚರಣೆಗಳಿಗೆ ಮುಕ್ತಾಯ ಹೇಳುವುದು ಒಳಿತು.

ಆಚರಣೆಗಳನ್ನು ಧಾರ್ಮಿಕ ಮತ್ತು ಧರ್ಮಾತೀತ ವಿಷಯಾಧಾರದಲ್ಲಿ ವಿಂಗಡಿಸುವುದು ಸಾಮಾನ್ಯ. ಮಾನವನು ತನ್ನ ಮತ್ತು ದೈವದ ಅನುಬಂಧವನ್ನು ಸ್ಮರಿಸಿ ವೃದ್ಧಿಗೊಳಿಸುವಲ್ಲಿ ಧಾರ್ಮಿಕ ಹಬ್ಬಗಳು ವಿಧಿ - ಸಂಸ್ಕಾರಗಳ ಅನುಕರಣೆಯ ಮೂಲಕ ಸಹಕರಿಸಿದರೆ ತಮ್ಮ ಜೀವನದಲ್ಲಿ ಎದುರಾಗುವ ಯಶಸ್ಸನ್ನು, ಹಿಂದಿನ ಸಿಹಿನೆನಪುಗಳನ್ನು ಸ್ಮರಿಸುವ ಸಂದರ್ಭಗಳೇ ಧರ್ಮಾತೀತ ಆಚರಣೆಗಳು. ಈ ಎರಡೂ ಬಗೆಯ ಆಚರಣೆಗಳನ್ನು ಅರ್ಥಭರಿತ ಮತ್ತು ಅರ್ಥಹೀನ ಆಯಾಮದಡಿ ವಿಮರ್ಶಿಸಬಹುದು. ಮಾನವ ತನ್ನ ಜೀವನದಲ್ಲಿ ದೇವರ ಸ್ಥಾನ ಮತ್ತು ಅಗತ್ಯವನ್ನು ಕಂಡುಕೊಂಡು, ಜೀವನದ ಮೂಲ ಉದ್ದೇಶವನ್ನು ಅರಿತು, ತನ್ನ ಗುರಿಯನ್ನು ಈಡೇರಿಸಿಕೊಳ್ಳಲು ಪೂರಕವಾಗುವಂತಹ ಅಸಂಖ್ಯಾತ ಆಚರಣೆಗಳು ನಮ್ಮಲ್ಲಿವೆ. ಅವುಗಳ ಜೊತೆಗೇ ಮಾನವನ ವ್ಯಕ್ತಿತ್ವ ಮತ್ತು ಸಮಾಜದ ಮೇಲೆ ಯಾವುದೇ ರೀತಿಯ ಸಕರಾತ್ಮಕ ಪ್ರಭಾವ ಬೀರುವ ಬದಲು ಪ್ರತಿಕೂಲಕ್ಕೆ ಎಡೆಮಾಡುವ ಮಾರುಕಟ್ಟೆ ಪ್ರೇರಿತ ದುಂದುವೆಚ್ಚದ ಆಚರಣೆಗಳೂ ನಮ್ಮಲ್ಲಿ ಸಾಕಷ್ಟಿವೆ. ಇಂದು ಕೆಲವು ಧಾರ್ಮಿಕ ಆಚರಣೆಗಳೂ ಈ ದಿಕ್ಕಿನಲ್ಲಿ ಸಾಗುತ್ತಿರುವುದು ನಿಸ್ಸಂಶಯ.

ಆಚರಣೆಗಳಲ್ಲಿ ತೊಡಗಿರುವವರು ಯಾರು? ಹೆಚ್ಚಾಗಿ ಉಳ್ಳವರು ಸಮಾಜದಲ್ಲಿ ತಮ್ಮ ಸ್ಥಾನಮಾನಕ್ಕೆ ತಕ್ಕಂತೆ ಆಚರಣೆಗಳಲ್ಲಿ ಸಕ್ರಿಯ ಪಾಲುದಾರರು ಎಂದೆನಿಸುವುದು ಸಹಜ. ವಿಚಿತ್ರವೆಂದರೆ ಬಹುಪಾಲು ಬಡವರಿಂದ ಕೂಡಿರುವ ಈ ನಮ್ಮ ದೇಶದಲ್ಲಿ ಆಚರಣೆಗಳು ಯಾವುದೇ ಒಂದು ವರ್ಗಕ್ಕೆ ಸೀಮಿತವಾಗಿಲ್ಲ. ಆಚರಣೆಗಳು ತಮ್ಮ ಉದಾರತೆ ಹಾಗೂ ಇತರರ ನಡುವೆ ತಮ್ಮ ಅನನ್ಯತೆಯನ್ನು ಗುರುತಿಸಿಕೊಳ್ಳಲು ಒದಗುವ ಸಾಧನೆಗಳಾಗಿವೆ. ಸಮಾಜದ ಕೆಳಸ್ತರದ ಜನರು ತಮ್ಮ ಸಾಮರ್ಥ್ಯವನ್ನು ಮೀರಿ ಆಚರಣೆಗಳೆಂಬ ಹೊರೆಯನ್ನು ತಮ್ಮ ಹೆಗಲಿಗೇರಿಸುವುದು ಸಮಾಜದ ಮುಖ್ಯವಾಹಿನಿಗೆ ಸೇರುವ ಅವರ ಹಂಬಲದ ಪ್ರತೀಕ. ಉಳ್ಳವರು ತಮ್ಮಲ್ಲಿದ್ದುದರಲ್ಲಿ ಒಂದಿಷ್ಟನ್ನು ವ್ಯಯಿಸಿದರೆ ನಿರ್ಗತಿಕರು ತಮ್ಮ ಕಿಂಚಿತ್ತನ್ನೇ ಆಚರಣೆಗಳಿಗೆ ಮುಡಿಪಾಗಿಡುವುದು ಅವರ ವಿಶ್ವಾಸ ಮತ್ತು ಉದಾರತೆಗೆ ಹಿಡಿದ ಕನ್ನಡಿ.

ಧಾರ್ಮಿಕ ಆಚರಣೆಗಳು ತಮ್ಮ ಒಡಲಾಳದ ನಂಬುಗೆಯನ್ನು ಹೊರಹಾಕುವ ಸ್ವಯಂಪ್ರೇರಿತ ಪ್ರಕ್ರಿಯೆಗಳು ಎಂದೆನಿಸುವುದು ಕೇವಲ ಭ್ರಮೆ. ಇಂದು ಆಚರಣೆಗಳು ತಮ್ಮ ಅಂತರಾಳದ ಅಭಿವ್ಯಕ್ತದ ಮಾಧ್ಯಮಗಳಾಗದೆ ಯಥಾಸ್ಥಿತಿಯನ್ನು ಮುಂದುವರಿಸುತ್ತ ಸಮಾಜಕ್ಕೆ ಹೊರೆಯಾಗಿವೆ. ದೇವರೊಂದಿಗಿನ ತಮ್ಮ ಅನ್ಯೋನ್ಯತೆ ಅಥವಾ ಆತನ ಕೃಪಾವರವನ್ನು ಸ್ಮರಿಸಿ ಕೃತಜ್ಞತಾ ಭಾವದಿಂದಲ್ಲದಿದ್ದರೂ, ಧಾರ್ಮಿಕ ವಿಧಿಗಳನ್ನು ನೆರವೇರಿಸದಿದ್ದರೆ ದೇವರ ಕೋಪಕ್ಕೆ ಈಡಾಗಬಹುದು ಎಂಬ ಭಯವು ಅನೇಕರನ್ನು ಆಚರಣೆಯೆಡೆಗೆ ಸೆಳೆಯುತ್ತಿದೆ. ಹೀಗೆ ವಿಮೋಚನೆಗೆ ನೆರವಾಗಬೇಕಾದ ಧಾರ್ಮಿಕ ಆಚರಣೆಗಳು ಭಕ್ತಾದಿಗಳ ಮೇಲೆ ತಮ್ಮ ದಬ್ಬಾಳಿಕೆಯನ್ನು ಮುಂದುವರಿಸಿರುವುದು ವಿಪರ್ಯಾಸವೇ ಸರಿ. ಈ ಆಚರಣೆಗಳಿಂದ. ಸಾಮಾನ್ಯವಾಗಿ ಶೋಷಣೆಗೆ ಬಲಿಪಶುಗಳಾಗುವವರು ಮಹಿಳೆಯರು. ವಿವಿಧ ಧಾರ್ಮಿಕ ಕ್ರಿಯೆಗಳಲ್ಲಿ ಮಹಿಳೆಯರ ದುರ್ಬಳಕೆ ಮತ್ತು ಅವರ ಮೇಲೆ ಹೇರುವ 'ನಿಷೇಧಗಳ' ಸರಮಾಲೆ ಕಾಲಕ್ರಮೇಣ ಕ್ಷೀಣಿಸುತ್ತಿದ್ದರೂ ಪ್ರಸ್ತುತ ಆಚರಣಾ ವಿಧಿಗಳಲ್ಲಿ ಆಕೆಯ ಪಾತ್ರ ಸರಿಸಮಾನವಾದುದೆಂದರೆ ತಪ್ಪಾದೀತು. ಹಬ್ಬ ಆಚರಣೆಗಳಲ್ಲಿ ಪೂಜಾಸಿದ್ಧತೆಯಾಗಲಿ, ಮನೆ ಸಿಂಗರಿಸುವುದಾಗಲಿ, ಭೋಜನ ವ್ಯವಸ್ಥೆಯನ್ನು ನಿರ್ವಹಿಸುವುದಾಗಲಿ ಎಲ್ಲದರಲ್ಲೂ ಮಹಿಳೆಯ ಪಾಲು ಅತ್ಯಧಿಕ.

ಆಚರಣೆಗಳು ವೈಯಕ್ತಿಕ ನಿಲುವು ಮತ್ತು ಮನೋಭಾವನೆಯನ್ನು ವಿವಿಧ ರೀತಿಯಲ್ಲಿ ಹೊರಹಾಕುತ್ತವೆ. ತಮಗಾದ ಅನ್ಯಾಯದ ವಿರುದ್ಧ ಹೋರಾಡುವ ಭಾರತೀಯರು ತಮ್ಮ ಕೆಲಸಕಾರ್ಯಗಳಿಗೆ ಗೈರುಹಾಜರಾಗುವುದರೊಂದಿಗೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದರೆ ಜಪಾನ್ ದೇಶದಲ್ಲಿ ನಿಗದಿತ ಅವಗಿಂತ ಹೆಚ್ಚು ಕೆಲಸ ಮತ್ತು ಉತ್ಪಾದನೆಯನ್ನು ಮಾಡುವುದರ ಮೂಲಕ ತಮ್ಮ ಅಸಹಕಾರವನ್ನು ತೋರ್ಪಡಿಸುತ್ತಾರೆ. ಹೀಗೆ ಸಂದರ್ಭ ಒಂದೇ ತೆರನಾದರೂ ಅದರ ಆಚರಣೆ ಮಾತ್ರ ವ್ಯಕ್ತಿ ಮತ್ತು ಸಂಸ್ಕೃತಿಯನ್ನಾಧರಿಸಿ ವಿವಿಧ ಸಾಧ್ಯತೆಗಳನ್ನು ಒಳಗೊಂಡಿರುತ್ತದೆ.

ಪ್ರಸಿದ್ಧ ಚಿಂತಕ ಕಾರ್ಲ್ ಮಾರ್ಕ್ಸ್ ಧರ್ಮವನ್ನು ಅಫೀಮು ಎಂದು ವ್ಯಾಖ್ಯಾನಿಸಿದಂತೆ ಇಂದಿನ ವಿವಿಧ ಆಚರಣೆಗಳನ್ನು ಅಫೀಮು ಎಂದು ಕರೆಯಬಹುದು. ರೋಮ್ ದೇಶದ ದೊರೆ ಪ್ಲಾವಿಯಸನು ಆಡಳಿತದಲ್ಲಿನ ತನ್ನ ಬಲಹೀನತೆಯನ್ನು ಮರೆಮಾಚಲು ಮತ್ತು ರಾಜ್ಯ ಎದುರಿಸುತ್ತಿದ್ದ ಗಂಡಾಂತರಗಳಿಂದ ಪ್ರಜೆಗಳ ಮನಸ್ಸನ್ನು ಬೇರೆಡೆಗೆ ಪಲ್ಲಟಗೊಳಿಸಲು ಅನೇಕ ವಿನೋದಮಯ

(57ನೇ ಪುಟಕ್ಕೆ)

# ಕೀರ್ತನೆಗಳಲ್ಲಿ ದೇಸಿ

**ಕ**ನ್ನಡ ಸಾಹಿತ್ಯದಲ್ಲಿ 'ದೇಸಿ' ಕುರಿತ ಪ್ರಸ್ತಾಪ ಮೊದಲು ಕಾಣಿಸಿಕೊಂಡದ್ದು ಕವಿರಾಜಮಾರ್ಗದಲ್ಲಿ. ತರುವಾಯ ಪಂಪನಲ್ಲಿ ಅದು ಅಚ್ಚಗನ್ನಡ ಒಲವುಳ್ಳ ಕಾವ್ಯಶೈಲಿ ಇಲ್ಲವೆ ಪದಬಂಧವಾಗಿ ಮೈದೋರಿದೆ. 'ಮಾರ್ಗ' ಪದ್ಧತಿಗೆ ಪ್ರತಿಯಾದ 'ದೇಸಿ' ಕಾವ್ಯಮಾರ್ಗವಾಗಿದೆ. ಸಂಸ್ಕೃತ ಭೂಯಿಷ್ಠ ಪದಗಳಿಂದ ಕೂಡಿದ ಶೈಲಿ ಮಾರ್ಗ ಎನ್ನಿಸಿಕೊಂಡರೆ, ಪ್ರಾದೇಶಿಕ ಸತ್ವವನ್ನು ಒಳಗೊಂಡ ಭಾವಾಭಿವ್ಯಕ್ತಿಕ್ರಮವಾಗಿ ದೇಸಿ ಕಾಣಿಸಿಕೊಂಡಿದೆ. 'ದೇಸಿ' ಎನ್ನುವ ಮಾತಿಗೆ 'ಚಲುವು' ಎನ್ನುವ ಅರ್ಥವೂ ಇದೆ. ಜನರ ಆಡು-ನುಡಿಯಲ್ಲಿ ಧಾರಾಳವಾಗಿರುವ ಬಾಗು, ಬಳುಕು, ಕಾಕು, ಗಾದೆ, ನಾಣ್ಣುಡಿ, ನುಡಿಗಟ್ಟು, ಪಡೆನುಡಿಗಳನ್ನು ಶಿಷ್ಟಕವಿಗಳು 'ದೇಸಿ'ಯ ಹೆಸರಿನಲ್ಲಿ ತಮ್ಮ ಕಾವ್ಯದಲ್ಲಿ ಬಳಸಿಕೊಂಡಿದ್ದಾರೆ. ಜಾನಪದ ಜೀವನ ಮತ್ತು ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿರುವ ನಂಬಿಕೆ, ರೂಢಿ, ಸಂಪ್ರದಾಯ, ಆಚರಣೆ, ಗಾದೆ, ಒಗಟು, ಹಾಡಿನ ಮಟ್ಟುಗಳನ್ನು ಶಿಷ್ಟಕವಿಗಳು ತಮ್ಮ ವಸ್ತು, ಭಾಷೆ, ಛಂದಸ್ಸು, ಭಾವಾಭಿವ್ಯಕ್ತಿಗಳಿಗೆ ಬಳಸಿಕೊಂಡು ತಮ್ಮ ಕಾವ್ಯಶೈಲಿಗೆ ಹೊಸ ಶಕ್ತಿ, ಕಾಂತಿಗಳನ್ನು ತುಂಬಿದ್ದಾರೆ. ಈ ಅರ್ಥದಲ್ಲಿ ದೇಸಿ ಎನ್ನುವುದು ಪ್ರಾದೇಶಿಕ ಸೊಗಡನ್ನುಳ್ಳ ಗತಿಶೀಲವಾದ, ಬಹುಮುಖಿಯಾದ ಜನಪರವಾದ ಸಂಸ್ಕೃತಿಯ ತಿರುಳುಳ್ಳ ಅಭಿವ್ಯಕ್ತಿ ಕ್ರಮವಾಗಿದೆ.

ಕನ್ನಡ ಸಾಹಿತ್ಯದಲ್ಲಿ ದೇಸಿಯುಗ ಇಡಿಯಾಗಿ ಕಾಣಿಸಿಕೊಂಡದ್ದು ವಚನಸಾಹಿತ್ಯದಲ್ಲಿ. ತರುವಾಯ ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಕೀರ್ತನ ಸಾಹಿತ್ಯಗಳಲ್ಲಿ 'ದೇಸಿ' ವೈವಿಧ್ಯಮಯವಾಗಿ ಮೈದೋರಿದೆ. ಐದು ಶತಮಾನಗಳಿಗೂ ಮಿಕ್ಕಿದ ಕಾಲದಲ್ಲಿ ವ್ಯಾಪಿಸಿದ ಹರಿದಾಸ ಸಾಹಿತ್ಯ ಪರಂಪರೆ ನಮ್ಮ ನಾಡಿನ ಸಂಸ್ಕೃತಿಯ ಪ್ರಧಾನ ಧಾರೆಗಳಲ್ಲೊಂದು. ಭಕ್ತಿ ಈ ಸಾಹಿತ್ಯದ ಮೂಲ ಶ್ರುತಿ. ಬದುಕಿನ ಅರ್ಥವಂತಿಕೆಯ ಸಾಧ್ಯತೆಗಳನ್ನು ಆಧ್ಯಾತ್ಮಿಕ ನೆಲೆಯಲ್ಲಿ ಅನ್ವೇಷಣೆಗೈದು ಅನುಸಂಧಾನಗೈದ ಹರಿದಾಸರು ವಚನಕಾರರಂತೆ ತಮ್ಮ ಅಭಿವ್ಯಕ್ತಿ ಮೂಲಗಳಿಗೆ ದೇಸಿ ಭಾವ-ಭಾಷೆ, ಪ್ರಕಾರಗಳಿಗೆ ಮೊರೆಹೊಕ್ಕು ಜನಸಮ್ಮುಖರಾಗುವಲ್ಲಿ ಯಶಸ್ವಿಯಾದರು. ಜನಪದ ಮೂಲದ ಲಯ ಪ್ರಕಾರಗಳ ಮಾಧುರ್ಯವನ್ನು, ಸಾಹಿತ್ಯದ ಸೌಂದರ್ಯವನ್ನು, ವೇದಾಂತದ ಸಾರವನ್ನು ಬೆರೆಸಿ ತಯಾರಿಸಿದ ಅರ್ಥಪಾಕ-ರಸಪಾಕಗಳೇ ಕೀರ್ತನೆಗಳು. ಆತ್ಮಶೋಧನೆ, ಆತ್ಮನಿವೇದನೆ, ನಾಮಸ್ಮರಣೆ, ಆತ್ಮಸಮರ್ಪಣೆಗಳ ಮೂಲಕ ಹರಿದಾಸರು ಅಂತರಂಗ ಶುದ್ಧಿಯನ್ನು ಸಾಧಿಸಿದರು. ತತ್ವ, ನೀತಿ, ವೈರಾಗ್ಯಗಳ ಬೋಧನೆಯ ಕೈಂಕರ್ಯವನ್ನು ಕೈಗೊಂಡು ಸರಳ, ಸಾತ್ವಿಕ, ಅಪರಿಹಗ್ರಹದ ಬದುಕು ನಡೆಸಿ ಬಹಿರಂಗ ಶುದ್ಧಿಯನ್ನು ಸಾಧಿಸಿದರು. ಭಗವದಾನಂದದ ಸವಿಸುಖಗಳನ್ನುಂಡು ದಣಿದು, ದಣಿವರಿಯದೆ ಹಾಡಿದರು.

ಅಂಧಾನುಕರಣೆ, ಮಡಿವಂತಿಕೆ, ಮೌಢ್ಯಗಳಲ್ಲಿ ಮುಳುಗಿದ ವೈದಿಕ ಸಮಾಜವನ್ನು ವ್ಯಂಗ್ಯ-ವಿಡಂಬನೆಗಳಿಂದ ಚುಚ್ಚಿ ಎಚ್ಚರಿಸಿದರು. ಅದೇ ಕಾಲಕ್ಕೆ ಕೆಳವರ್ಗದ ಅಜ್ಞಾನ, ಅಂಧಶ್ರದ್ಧೆಗಳನ್ನು ಖಂಡಿಸಿ ಜನಮನವನ್ನು ಹಸನುಗೈದರು. ದೇವರು-ಧರ್ಮಗಳು ತಮ್ಮ ಪ್ರಾಪಂಚಿಕ ಜೀವನೋಪಾಯಕ್ಕೆ ಮಾರ್ಗವಾಗಿ ಶೋಷಣೆಯ ಸಾಧನವಾಗಲು ಕಾರಣರಾದವರ ಮೇಲೂ ಅವರು ಕಿಡಿಕಾರಿದರು. ಪರಿಶುದ್ಧ, ಸಾತ್ವಿಕ ಪ್ರಾಪಂಚಿಕ ನೆಲೆಯಿಂದಲೇ ಪಾರಮಾರ್ಥಿಕ ಬದುಕು ಅರಳುವುದನ್ನು ತಮ್ಮ ಬದುಕು-ಬರಹಗಳ ಮೂಲಕ ನಿಜ ಮಾಡಿ ತೋರಿದರು. ಸಮಾನತೆಯ, ಸ್ವಾಭಿಮಾನದ ಮೌಲಿಕ ಬದುಕಿನ ದಾರಿ ತೋರಿದರು. ಭೋಗಲಾಲಸೆ, ಕ್ಷುದ್ರತೆ, ಸ್ವಾರ್ಥ, ಆಡಂಬರದ ಬದುಕಿನ ಠಕ್ಕನ್ನು ಬಯಲಿಗೆಳೆದು ಅದರ ಪೊಳ್ಳುತನವನ್ನು ತೆರೆದು ತೋರಿದರು.

ವೈದಿಕ ಸಮಾಜ ಸಹಸ್ರಮಾನಗಳಿಂದ ಸಂಸ್ಕೃತವನ್ನು ಧಾರ್ಮಿಕ, ತಾತ್ವಿಕ ಅಗತ್ಯಗಳಿಗೆ ಬಳಸಿಕೊಂಡು ಜನಸಾಮಾನ್ಯರಿಂದ ದೂರವಾಯಿತು. ತಮಿಳುನಾಡಿನ ಆಳ್ವಾರರು, ಕನ್ನಡದ ವಚನಕಾರರು ತಮ್ಮೆಲ್ಲ ಅಗತ್ಯಗಳಿಗೂ ಮಾತೃಭಾಷೆಗೆ ಒಲಿದಿರುವುದನ್ನು ಮನಗಂಡು ಹರಿದಾಸರು ಈ ದಿಶೆಯಲ್ಲಿ ದಿಟ್ಟ ಹೆಜ್ಜೆ ಇಟ್ಟರು. ಇವರಲ್ಲಿ ಈ ಶ್ರೇಯಸ್ಸಿಗೆ ಪಾತ್ರರಾದವರು ಶ್ರೀಪಾದರಾಯರು. ಬಹುಪಾಲು ಹರಿದಾಸರಿಗೆ ಸಂಸ್ಕೃತದಲ್ಲಿ ಅಪಾರ ಪಾಂಡಿತ್ಯವಿದ್ದೂ, ಸುಲಭವಾಗಿ ಅರ್ಥವಾಗುವ ಜನಭಾಷೆಗೆ ಒಲಿದುದು ಕಾಲಮಾನದ ಅಗತ್ಯವೂ ಹೌದು. ದೇವಭಾಷೆ, ಮಡಿಭಾಷೆ ಎಂದು ಸಂಸ್ಕೃತನಿಷ್ಠವಾದ ಪಂಡಿತವರ್ಗ ವ್ಯಾಸಕೂಟವನ್ನು ಅನುಸರಿಸಿತು. ದಾಸಕೂಟವು ಕನ್ನಡಕ್ಕೆ ಒಲಿದ ಭಕ್ತಿ, ತತ್ವವಿಚಾರಗಳ ಪ್ರಚಾರದಲ್ಲಿ ಆಸಕ್ತಿ ತಾಳಿದುದು ಸಮಾಜಪರ ನಿಲುವುಳ್ಳ ಹರಿದಾಸ ಪಡೆ.

ತಮ್ಮ ಸಂಗೀತ, ಸಾಹಿತ್ಯ, ನೃತ್ಯ, ವಾದ್ಯಗಳ ಜ್ಞಾನವನ್ನು ಧಾರೆಯೆರೆದ ಹರಿದಾಸ ಕೂಟವು ತಮ್ಮ ಪ್ರಯೋಗಶೀಲತೆಯಿಂದ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ ಮೊದಲಾದ ಪ್ರಕಾರಗಳಲ್ಲಿ ಅಭಿವ್ಯಕ್ತಿಮೂಲವನ್ನು ಕಂಡುಕೊಂಡಿತು.

ಗುರುವಿನಿಂದ 'ಅಂಕಿತ' ಪಡೆದು; ಶಿಷ್ಯ ವೃತ್ತಿ ಮಾಡಿ, ಶಾಸ್ತ್ರಾಧ್ಯಯನ ನಡೆಸಿ, ದಾಸದೀಕ್ಷೆಯನ್ನು ಪಡೆದು'ಸಾಲ ಮಾಡಬೇಡ ಸಾಲದೆನ್ನಬೇಡ, ನಾಳಿಗಿಡಬೇಡ' ಎಂಬ ಪ್ರತಿಜ್ಞೆಗೈದು ಸಂಯಮ, ತಾಳ್ಮೆ, ವೈರಾಗ್ಯದ ಬದುಕು ನಡೆಸಿದವರು ಈ ದಾಸರು. ಸಮಾಜಸೇವೆಯ ದೀಕ್ಷೆ ವಹಿಸಿದ ಈ ಹರಿದಾಸರು ಕಚ್ಚೆಹಾಕಿದ ಧೋತ್ರ, ಮೈಮೇಲೆ ಅಂಗವಸ್ತ್ರ, ಕಾವಿ ಬಣ್ಣದ ಮುಂಡಾಸು, ತುಳಸಿಮಾಲೆ, ಗೋಪಾಳಬುಟ್ಟಿ, ಬಲಗೈಯಲ್ಲಿ ತಂಬೂರಿ, ಎಡಗೈಯಲ್ಲಿ ತಾಳ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಮನೆ-ಮನಗಳಿಗೆ


ಡಾ॥ ಗುರುಪಾದ ಫಿವಾರಿ




ಧರ್ಮದ ಸಂದೇಶವನ್ನು ತಮ್ಮ ಕೀರ್ತನೆಗಳ ಮೂಲಕ ಹಾಡಿ, ಕುಣಿದು ಬಿಂಬಿಸಿದವರು. ಹರಿದಾಸರಲ್ಲಿ ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರಂತಹ ಯತಿಗಳೂ, ಪುರಂದರದಾಸರಂತಹ ಗೃಹಸ್ಥರೂ ಉಂಟು. ತಮ್ಮ ಬದುಕಿನ ಮಧ್ಯಭಾಗದಲ್ಲಿ ಸಂಸಾರದ ನಶ್ವರತೆ, ನಿಸ್ಸಾರತೆ, ಅಲ್ಪತೆಗಳಿಗೆ ಹೇಸಿ ವೈರಾಗ್ಯ ತಾಳಿದ ಇವರು ಭಗವದರ್ಪಿತವಾದ ನಿರಾಡಂಬರದ ನಿಶ್ಚಿಂತ ಬದುಕಿನ ಸಮಾಜಸೇವೆಯ 'ಮಣಿಹ'ವನ್ನು ಒಪ್ಪಿಕೊಂಡವರು. ಇದುವರೆಗೆ ಸುಮಾರು ಮುನ್ನೂರು ಹರಿದಾಸರು ಮೂವತ್ತು ಸಾವಿರಕ್ಕೂ ಮಿಕ್ಕಿದ ಕೀರ್ತನೆಗಳನ್ನು ರಚಿಸಿದ್ದಾರೆಂಬ ಅಂದಾಜಿದ್ದರೂ, ಲಭ್ಯ ಸಾಮಗ್ರಿಯ ಆಧಾರದ ಮೇಲೆ ೧೪೫ ಹರಿದಾಸರು ಸುಮಾರು ೧೬,೦೦೦ ಕೀರ್ತನೆಗಳನ್ನು ರಚಿಸಿರುವ ಸಂಗತಿ ಬೆಳಕಿಗೆ ಬಂದಿದೆ.

ನರಹರಿತೀರ್ಥರಿಂದ ಪ್ರಾರಂಭಗೊಂಡರೂ ಶ್ರೀಪಾದರಾಯರಿಂದ ಭದ್ರ ನೆಲೆಗಟ್ಟನ್ನು ಕಂಡುಕೊಂಡ ದಾಸಸಾಹಿತ್ಯ ವ್ಯಾಸರಾಯ, ಪುರಂದರದಾಸ, ಕನಕದಾಸ ವಾದಿರಾಜ-ಮೊದಲಾದವರ ಕಾಲಕ್ಕೆ ತನ್ನ ಸತ್ವಾಧಿಕ್ಯವನ್ನು ಮೆರೆಯಿತು. ಕೆಲಕಾಲ ಕಣ್ಮರೆಯಾದಂತೆ ತೋರಿ ಎರಡನೆಯ ಘಟ್ಟದ ವಿಜಯದಾಸರಿಂದ ಪುನರುಜ್ಜೀವನಗೊಂಡು ಜಗನ್ನಾಥದಾಸ, ಗೋಪಾಲದಾಸ, ಪ್ರಸನ್ನ ವೆಂಕಟದಾಸ ಮೊದಲಾದವರಿಂದ ಹೆಳವನಕಟ್ಟೆಗಿರಿಯಮ್ಮ, ಹರಪನಹಳ್ಳಿ ಭೀಮವ್ವಳವರೆಗೆ ಹರಿಗಡಿಯದೆ ಮುಂದುವರಿಯಿತು.

ಹರಿದಾಸ ಸಾಹಿತ್ಯವು ಮಧ್ವಸಿದ್ಧಾಂತದ ತಳಹದಿಯ ಮೇಲೆ 'ಭಾಗವತ'ವರ್ಣಿತ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನಗಳ ನವವಿಧ ಭಕ್ತಿಯು ಶಾಂತ, ಸಖ್ಯ, ದಾಸ್ಯ, ಮಧುರ, ವಾತ್ಸಲ್ಯ ಭಾವಗಳಲ್ಲಿ ಅಭಿವ್ಯಕ್ತಗೊಂಡಿದೆ. ಭಗವಂತನನ್ನು ಒಡೆಯನಾಗಿ, ಇನಿಯನಾಗಿ, ಎಳೆಯನಾಗಿ ಪರಿಭಾವಿಸುವ ಪರಿ ಇಲ್ಲಿದೆ.

ಹರಿದಾಸರು ಜನಸಾಮಾನ್ಯರೊಂದಿಗೆ ಬೆರೆತು ಅವರ

ಭಾವ-ಭಾಷೆ-ಬದುಕುಗಳನ್ನು ಹತ್ತಿರದಿಂದ ಅರಿತವರು. ಅವರ ಬದುಕಿನಲ್ಲಿ ಹಾಸುಹೊಕ್ಕಾದ ಜೋಗುಳ ಪದ, ಮದುವೆ ಹಾಡು, ಸಂಪ್ರದಾಯದ ಹಾಡುಗಳು, ಕೋಲಾಟ, ಲಾವಣಿ, ಗೀಗೀ ಪದಗಳ ಧಾಟಿಗಳನ್ನು ಲಯ ಮಾಧುರ್ಯವನ್ನು, ಗಾದೆ, ನಾಣ್ಣುಡಿ, ಒಗಟು, ಕಥನಗೀತಗಳನ್ನು ಬಳಸಿಕೊಂಡರು. ತಮ್ಮ ವೈದಿಕ ಪ್ರಜ್ಞೆಯ ಅಭಿವ್ಯಕ್ತಿಗೆ ಜನಪದರ ದೇಸಿ ಪ್ರಜ್ಞೆಯ ಕಸಿಗೈದರು.

ಮಕ್ಕಳು ಅತ್ತು ಹಟಮಾಡಿದಾಗ ಅವುಗಳನ್ನು ಹೆದರಿಸಿ ಸುಮ್ಮನಿರಿಸಲು ತಾಯಿ ಬಳಸುವ ತಂತ್ರಗಳು ಪ್ರಸಿದ್ಧ. ಅದಕ್ಕೆ ಪ್ರತಿಯಾಗಿ ತುಂಟ ಬಾಲಕೃಷ್ಣ ತಾಯಿಗೆ ಹೆದರಿದಂತೆ ನಟಿಸಿ ತಾಯಿಗೆ ಭರವಸೆ ಕೊಡುವ ಮಾತುಗಳು ಜನಪದ ಬಾಲಭಾಷೆಯನ್ನು ಬಳಸಿ ಪುರಂದರದಾಸರು ಎಷ್ಟೊಂದು ಸುಂದರ ಚಿತ್ರಗಳನ್ನು ಹೆಣೆಯಬಲ್ಲರೆಂಬುದಕ್ಕೆ ಕೆಳಗಣ ಕೀರ್ತನೆ ನಿದರ್ಶನವಾಗಿದೆ :

> ಗುಮ್ಮನ ಕರೆಯದಿರೆ - ಅಮ್ಮ ನೀನು ।
> ಗುಮ್ಮನ ಕರೆಯದಿರೆ
> ಸುಮ್ಮನೆ ಇರುವೆನು ಅಮ್ಮಿಯ ಬೇಡೆನು
> ಮಮ್ಮು ಉಣ್ಣುತ್ತೇನೆ ಅಮ್ಮ ಅಳುವುದಿಲ್ಲ

ಗುಮ್ಮ, ಮಮ್ಮು, ಅಮ್ಮಿ ಮೊದಲಾದ ಬಾಲಭಾಷೆಯ ಬಳಕೆ ತನ್ನ ತುಂಟತನವನ್ನು ಇನ್ನು ಮುಂದೆ ನಡೆಸದಿರುವ ಬಾಲಕೃಷ್ಣನ ಭರವಸೆಯ ಮಾತುಗಳು ಅತ್ಯಂತ ಮೋಹಕವಾಗಿವೆ. ಅದೇ ರೀತಿ ಇನ್ನೊಂದು ಕೀರ್ತನೆ ತುಂಬ ಸ್ವಾರಸ್ಯಕರವಾದದ್ದು :

> ಗುಮ್ಮನೆಲ್ಲಿಹ ತೋರಮ್ಮ - ನಮ್ಮಮ್ಮ ।
> ಸುಮ್ಮನಂಜಿಸಬೇಡಮ್ಮ ।
> ಪಂಚಾಶತ್ಕೋಟಿ ವಿಸ್ತೀರ್ಣದ ಭೂಮಿಯ
> ವಂಚನೆಯಿಲ್ಲದೆ ತಿರುಗಿ ಬಂದೆನೆ ನಾನು ॥
> ಹಂಚಿಸಿಕೊಟ್ಟೆನೆ ಅವರವರಿಗೆ ನಾ
> ಅಂತು ನೋಡಿದರಾ ಕಾಣೆನೆ ಗುಮ್ಮನ

ಪರಿಚಿತರಾದವರು ಪರಸ್ಪರ ಎದುರಾದರೆ, ಭೆಟ್ಟಿಯಾದರೆ ಉಭಯಕುಶಲೋಪರಿ ಸರ್ವೇಸಾಮಾನ್ಯ. ಜನಪದರ ಈ ರೂಢಿಯನ್ನು ಕನಕದಾಸರು ತಮ್ಮ ಒಂದು ಹಾಡಿನಲ್ಲಿ ಉಪಯೋಗಿಸಿಕೊಂಡ ಬಗೆ ತುಂಬ ಸೊಗಸಾಗಿದೆ. ರಾವಣನಿಂದ ಅಪಹೃತಳಾಗಿ ಅಶೋಕವನದಲ್ಲಿ ಬಂಧಿಯಾಗಿರುವ ಸೀತೆಯನ್ನು ಹನುಮಂತ ಭೇಟಿಯಾಗುತ್ತಾನೆ. ಆಗ ಆಕೆ ತನ್ನವರ ಯೋಗಕ್ಷೇಮವನ್ನು ಕೇಳಿ ತಿಳಿದುಕೊಳ್ಳುವ ರೀತಿ ದಾಸರ ದೇಸೀ ಪ್ರಜ್ಞೆಯ ದ್ಯೋತಕ :

> ಎನ್ನ ಕಂದ ಹಳ್ಳಿಯ ಹನುಮ
> ಚೆನ್ನಾಗಿ ಇಹರೆ ಲಕ್ಷ್ಮಣ ದೇವರು ।
> ತುಪ್ಪ ಪಂಚಾಮೃತವಂದು ಅಡವಿ ಗಡ್ಡೆಗಳಿಂದು
> ಕರ್ಪೂರವೀಳ್ಯವಂದು ಕುರುಕು ಇಂದು
> ಸುಪ್ಪತ್ತಿಗೆ ಮಂಚವಂದು ಹುಲ್ಲುಹಾಸಿಗೆ ಇಂದು
> ಶ್ರೀಪತಿ ರಾಘವ ಕ್ಷೇಮದಲ್ಲೆದಾರೆ ?

ಸಾಮಾನ್ಯ ಜನವರ್ಗದಿಂದ ಬಂದ ಕನಕದಾಸರಲ್ಲಿ ದೇಸಿ ಪ್ರಜ್ಞೆ ದಟ್ಟವಾಗಿದ್ದಷ್ಟು ಉಳಿದವರಲ್ಲಿ ಕಾಣದು. ಮನುಷ್ಯ ಯಾವುದೇ ವರ್ಗ, ಜಾತಿ ಕುಲಕ್ಕೆ ಸೇರಿರಲಿ ಅವನ ಸಕಲ ಕಾರ್ಯಗಳ ಹಿಂದಿರುವ ಮೂಲ ಪ್ರೇರಣೆ ಹೊಟ್ಟೆ ಹೊರೆದುಕೊಳ್ಳುವುದು. ಅದರಲ್ಲಿ ಮೇಲುಕೀಳುಗಳಿಲ್ಲ. ಈ ವಿಷಯವನ್ನು ಪ್ರತಿಪಾದಿಸುವ ಜನಪದ ಕುಣಿತದ ಧಾಟಿಯಲ್ಲಿರುವ ಪ್ರಸಿದ್ಧವಾದ ಹಾಡು ಇದು :

> ಎಲ್ಲಾರು ಮಾಡುವುದು ಹೊಟ್ಟೆಗಾಗಿ
> ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ
> ವೇದಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ
> ಬೋಧನೆಯ ಮಾಡುವುದು ಹೊಟ್ಟೆಗಾಗಿ
> ಗೇಣು ಬಟ್ಟೆಗಾಗಿ ।

ಅವರದೇ ಇನ್ನೊಂದು ಕೀರ್ತನೆ ನಿರೂಪಣೆಯ ಆಪ್ತತೆ - ಆತ್ಮೀಯತೆಗಳಿಂದ ಮನಸೂರೆಗೊಳ್ಳುತ್ತದೆ :

> ಊರಿಗೆ ಬಂದರೆ ದಾಸಯ್ಯ । ನಮ್ಮ
> ಕೇರಿಗೆ ಬಾ ಕಂಡ್ಯ ದಾಸಯ್ಯ ।
> ಕೋಲು ಕೊಳಲು ಕೈಲಿ ದಾಸಯ್ಯ। ನೀ
> ಕಲ್ಲಿಗೆ ವರವಿತ್ತೆ ದಾಸಯ್ಯ।
> ಮಲ್ಲನ ಮರ್ದಿಸಿ ಮಾವನ ಮಡುಹಿದ
> ನೀಲಮೇಘಶ್ಯಾಮ ದಾಸಯ್ಯ ।

ಕೋಲಾಟದ, ಡೊಳ್ಳಿನ ಹಾಡು, ಕುಣಿತದ ಲಯ ವೈವಿಧ್ಯವನ್ನು ಕನಕದಾಸರು, ಪ್ರಸನ್ನ ವೆಂಕಟದಾಸರು, ಹರಪನಹಳ್ಳಿ ಭೀಮವ್ವ ತಮ್ಮ ಕೀರ್ತನೆಗಳಲ್ಲಿ ಬಹಳ ಸಶಕ್ತವಾಗಿ ಬಳಸಿಕೊಂಡಿದ್ದಾರೆ.

ಕನಕದಾಸರ ಡೊಳ್ಳಿನ ಹಾಡಿನ ಧಾಟಿಯಲ್ಲಿರುವ ಕೀರ್ತನೆ ಹೀಗಿದೆ :

> ದೇವಿ ನಮ್ಮ ದ್ಯಾವರು ಬಂದರು ಬನ್ನಿರೆ
> ನೋಡಬನ್ನಿರೆ ।ಪ।
> ಕೆಂಗಣ್ಣ ಮೀನನಾಗಿ । ನವರಂಗ
> ಗುಂಗಾಡಿ ಸೋಮನ ಕೊಂದಾನ್ಯಾ
> ಗುಂಗಾಡಿ ಸೋಮನ ಕೊಂದು ವೇದವ
> ಭಂಗಾರದೊಡಲಿನಿಗಿತ್ತಾನ್ಯಾ ।
> ಡೊಳ್ಳಿನ ಮೇಲೆ ಕೈ ಭರಮಪ್ಪ ಹಾಕ್ಯಾನು
> ತಾಳವ ಶಿವನಪ್ಪ ತಟ್ಯಾನ್ಯಾ
> ಒಳ್ಳೊಳ್ಳೆ ಪದಗಳು ಹನುಮಪ್ಪ ಹಾಡ್ಯಾನು
> ಚೆಲುವ ಕನಕಪ್ಪ ಕುಣಿದಾನ್ಯಾ ।

ಗಾದೆ ಮಾತುಗಳ ಮಾದರಿಯನ್ನು ಹರಿದಾಸರು



# ತನ್ನತನ



**ಮಾ**ದರಿ ವ್ಯಕ್ತಿಯ
ಹುಡುಕಾಟದಲ್ಲಿದ್ದನಾತ

ಇವರು ಹೀಗೆ ಹೀಗೆ ಎಂದು
ಹೀಗಳೆದ ಮನಸಿನಲ್ಲಿ
ಕಟು ವಿಮರ್ಶೆ ಎದುರಿಸದೆ
ಇಳೀದು ಹೋಗಿಬಿಟ್ಟರವರು
ಮನಸಿನಿಂದ ಹೊರಗೆ

ಬದಲಿಸಿಕೊಂಡನಾತ
ಮನೋಭಾವ

ಅವರು ಹಾಗೆ ಹಾಗೆ ಎಂದು
ಹೊಗಳಿದ ಮನಸಿನಲ್ಲಿ
ಹೊಗಳಿಕೆ ಹೊನ್ನಶೂಲವೆಂದು
ಹೋಗಿಬಿಟ್ಟರವರು
ಮನಸಿನಿಂದ ಹೊರಗೆ

ಇತ್ತ ಇವರೂ ಇಲ್ಲ
ಅತ್ತ ಅವರೂ ಇಲ್ಲ
ಹಳಹಳಿಸುತ್ತ ಬಂದು
ನಿಂತರೆ ಕನ್ನಡಿಯ ಎದುರಿಗೆ
ಮುಖವೇ ಮಂಗಮಾಯ !

**ಹ. ಶಿ. ಭೈರನಟ್ಟಿ**
ಭಾಗೀರಥಿ ನಿಲಯ, ವಿನಾಯಕನಗರ
ಧಾರವಾಡ - ೫೮೦೦೦೧

ಬಳಸಿಕೊಂಡಂತೆ ಅವರ ಮಾತುಗಳೂ ಜನಪ್ರಿಯ ಗಾದೆಗಳಾಗಿ ಪರಿಣಮಿಸಿದ್ದೂ ಉಂಟು. ಹೀಗೆ ಶಿಷ್ಟಪದ ಸಾಹಿತ್ಯ, ಜನಪದ ಸಾಹಿತ್ಯ, ಪರಸ್ಪರ ಕೈ ಜೋಡಿಸಿ ವಿನಿಮಯ ಮಾಡಿಕೊಂಡದ್ದುಂಟು. ಕನಕದಾಸರ 'ಅಹುದಾದರಹುದೆನ್ನಿ' ಎನ್ನುವ ಇನ್ನೊಂದು ಕೀರ್ತನೆ ಇದಕ್ಕೆ ನಿದರ್ಶನ :

ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ
ಬಹುಜನರು ನೆರೆ ತಿಳಿದು ಪೇಳಿ ಮತ್ತಿದನು ।
ದೇವರಿಲ್ಲದ ಗುಡಿಯು ಪಾಳು ಬಿದ್ದಂಗಡಿಯು
ಭಾವವಿಲ್ಲದ ಭಕುತಿ ಅದು ಕುಹಕಯುಕುತಿ ।
ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು
ಮಕ್ಕಳಿಲ್ಲದ ಸಿರಿಯು ಕೊಳೆತ ತೆಂಗಿನ ತುರಿಯು

ಈ ಪ್ರಾಸಬದ್ಧ ರಚನೆ ಕಿವಿಗಿಂಪಾದಂತೆ ಅರ್ಥವೂ ಸೊಂಪಾಗಿದೆ.



ಮುಂದಾಗುವುದನ್ನು, ಸಹಜವಾಗಿ ತಿಳಿಯಲಾಗದ್ದನ್ನು ಅತೀಂದ್ರಿಯ ಶಕ್ತಿಯನ್ನುಳ್ಳವರಿಂದ ಕೇಳಿ ತಿಳಿದುಕೊಳ್ಳುವುದಕ್ಕೆ ಮಾನವ ಸಹಜ ಕುತೂಹಲವೇ ಕಾರಣ. ಕಳೆದು ಹೋದುದನ್ನು ಪತ್ತೆಹಚ್ಚಲು, ಭವಿಷ್ಯವನ್ನು ತಿಳಿಯಲು ಜನಪದರು ಕೊರವಂಜಿಗಳನ್ನು ಆಶ್ರಯಿಸುತ್ತಾರೆ. ಕೃಷ್ಣನ ಲೀಲೆಗಳನ್ನು ವರ್ಣಿಸುತ್ತ ದಾಸರು ಕೊರವಂಜಿಯ ವೇಷದಲ್ಲಿ ಕೃಷ್ಣ ಬಂದು ಕಣಿ ಹೇಳುವ ಪ್ರಸಂಗವನ್ನು ಕಲ್ಪಿಸಿ ಹಾಡಿದ್ದಾರೆ. ಜೊತೆಗೆ ಜನಸಾಮಾನ್ಯರ ಅಂಧಶ್ರದ್ಧೆ, ಅಂಧಾನುಕರಣೆಗಳನ್ನು ನಿವಾರಿಸಲೂ ಈ ಸಂದರ್ಭವನ್ನು ಬಳಸಿಕೊಂಡಿದ್ದಾರೆ :

ಕಣಿಯ ಹೇಳಬಂದೆ ನಾನು ತಿಳಿಯಲಿಲ್ಲವೆ ? ।ಪ।
ಕಣಿಯ ಹೇಳಬಂದೆ ನಾರಾ
ಯಣನಲ್ಲದೆ ಇಲ್ಲವೆಂದು ಬಿನುಗು ಮಾರ್ಗವನ್ನು ಹಿಡಿದು
ಜುಣಗಬೇಡಿರೋ ।

ಎಂದು ಬೋಧಿಸುತ್ತ ಕ್ಷುದ್ರದೇವತೆಗಳ ಉಪಾಸನೆಗಳನ್ನು ಖಂಡಿಸುತ್ತಾರೆ :

ಎಕ್ಕನಾತಿಯರು ಕಾಟಿ ಜಕ್ಕಣಿಯರು ಜಲಜೆಯರು
ಸೊಕ್ಕಿನಿಂದ ಸೊಂಟದ ಮುರುಕ ಮೈಲಾರ ದೇವರು
ಮಿಕ್ಕ ಮಾರಿ ಮಸಣಿ ಚೌಡಿ ಭೈರವ ದೇವ ಮೊದಲಾದ
ಠಕ್ಕು ದೇವರ ಗೊಡವೆ ಬೇಡ ನರಕ ತಪ್ಪದು ।

ಜನಪದ ಸೂತ್ರದ ಗೊಂಬೆಯಾಟ, ತೊಗಲು ಗೊಂಬೆಯಾಟದ ವಿಧಿ ವಿಧಾನಗಳನ್ನು ಬದುಕಿನ ನಶ್ವರತೆ, ದೈವಲೀಲೆಗಳನ್ನು ನಿರೂಪಿಸಲು ಅಭಿವ್ಯಕ್ತಿಯ ಸಾಮಗ್ರಿಗಳಾಗಿ ಬಳಸಿಕೊಳ್ಳುತ್ತಾರೆ. ಜನಪದ ವಾದ್ಯಗಳ ಉಲ್ಲೇಖಗಳೂ ಕೀರ್ತನೆಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಕನಕದಾಸರು ಒಗಟಿನ ರೂಪದ ರಚನೆಯನ್ನು ಮುಂಡಿಗೆಗಳಲ್ಲಿ ಉಪಯೋಗಿಸಿಕೊಂಡಿದ್ದಾರೆ.

ಪುರಂದರದಾಸರು ಡಾಂಭಿಕರನ್ನು ಖಂಡಿಸುವಲ್ಲಿ, ಗೇಲಿ ಮಾಡುವಲ್ಲಿ ಗ್ರಾಮೀಣ ಸಮುದಾಯದ ಬೈಗುಳ, ಚುಚ್ಚುಮಾತುಗಳನ್ನು ಬಳಸಿದ್ದಾರೆ. ಅಲ್ಲಿ ದೇಸಿ ಚೆಲುವು ಮೈದೋರಿದೆ. ಅವರು 'ಕದವ ಮುಚ್ಚಿದಳಿಕೊ ಗಯ್ಯಾಳಿ ಮೂಳಿ' ಎಂದು ಛೇಡಿಸುತ್ತಾರೆ. ಅದರಂತೆ ಸೋಗಲಾಡಿಗಳ ಒಳ ಹೂರಣವನ್ನು ಬಯಲಿಗೆಳೆಯುವಲ್ಲಿ ಮಾತು ಕಟುವಾಗುತ್ತದೆ; ವಿಡಂಬನೆ ಹರಿತವಾಗುತ್ತದೆ :

ತುಡುಗ ಮುಂಡೇಗಂಡರು ಗಡ್ಡ ಮೀಸೆ ಬೋಳಿಸಿಕೊಂಡು
ಗೊಡ್ಡು ನಾಮ ತೀಡಿಕೊಂಡು ಅಡ್ಡಾದಿಡ್ಡಿ ಮುದ್ರೆಗಳ
ಬಡಿದುಕೊಂಡು
ದೊಡ್ಡ ದೊಡ್ಡ ಮಾತುಗಳಾಡಿ ದೊಡ್ಡವರೆಂದು
ಹೇಳಿಕೊಂಡು
ಬಡ್ಡೀ ದಗಡೀ ಮಕ್ಕಳು ಸೋಗಿಲಿರುವ ಜೋಗಿ ತೊತ್ತಿನ
ಮಕ್ಕಳು

ಕನಕದಾಸರಲ್ಲಿ ವಿಮರ್ಶನ ಪ್ರಜ್ಞೆ ಅತ್ಯಂತ ತೀಕ್ಷ್ಣವಾಗಿದೆ. ಜಾತಿ-ಮತಗಳ, ಮೇಲು-ಕೀಳುಗಳ ಪ್ರಶ್ನೆಗಳನ್ನೆತ್ತುವವರನ್ನು ಅವರು ತರಾಟೆಗೆ ತೆಗೆದುಕೊಂಡು ಛೇಡಿಸುತ್ತಾರೆ :

ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೇ ಜನ್ಮ
ಸಾರ್ಥಕವಿಲ್ಲದವರೆಲ್ಲ ಭಾಗವತರೇ ?

– ಎಂಬ ಕೀರ್ತನೆಯಲ್ಲಿ ವೇಷಧಾರಿಗಳನ್ನು ಖಂಡಿಸುತ್ತಾರೆ. ಇದ್ದುದನ್ನು ಇದ್ದಂತೆ ಅವರೆದುರು ಜರೆದು ವಿಡಂಬಿಸಿ ಟೀಕಿಸುವ ಜನಪದರ ಧೈರ್ಯವನ್ನು ಪ್ರಕಟಿಸುತ್ತಾರೆ. ಪ್ರಾಣಿ ರೂಪಕಗಳ ಮೂಲಕ ಮನುಷ್ಯ ಸ್ವಭಾವದ ವಿಶ್ಲೇಷಣೆಗೂ ತೊಡಗುತ್ತಾರೆ.

ಪುರಂದರದಾಸರ 'ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ' ಎಂದು ಪ್ರಭುತ್ವದ ಟೊಳ್ಳುತನವನ್ನು ಭೋಗದ ನಶ್ವರತೆಯನ್ನು 'ಏತರ ಕಟಿಪಿಟಿ ಒಂದಿನ ಹೋಗುತಿ ಲಟಪಟಿ ' ಎಂದು ಗೇಲಿ ಮಾಡುವಲ್ಲಿ ಜನಪದ ಭಾಷಾ ಪ್ರಯೋಗ ತುಂಬ ಪರಿಣಾಮಕಾರಿಯಾಗಿದೆ.

ಹೀಗೆ ಜನಪದರ ಬದುಕಿನಲ್ಲಿ ನೆಲೆನಿಂತ ನಂಬಿಕೆ, ಸಂಪ್ರದಾಯ, ಆಚರಣೆಗಳನ್ನು ಮತ್ತು ಅವುಗಳ ನೈಜತೆಯನ್ನು ಪ್ರಶ್ನಿಸಲು ಹಾಗೂ ಶುದ್ಧ, ಸಾತ್ವಿಕ ಆಚಾರ ವಿಚಾರಗಳನ್ನು ಬಿತ್ತಲು ಜನಪದ ಭಾವ, ಭಾಷೆ, ಲಯಗಳನ್ನು ಹರಿದಾಸರು ಬಳಸಿಕೊಂಡರು. ಆ ಮೂಲಕ ಜನಜೀವನವನ್ನು ಸಂಸ್ಕರಿಸಿ ಕನ್ನಡ ಸಂಸ್ಕೃತಿಯ ಸಿರಿಯನ್ನು ಹೆಚ್ಚಿಸಿದರು. ತಮ್ಮ ನೂತನ ಪ್ರಯೋಗಗಳಿಂದ ಸಾಹಿತ್ಯದ ಶ್ರೀಮಂತಿಕೆಗೂ ಕಾರಣಕರ್ತರಾದರು.

**ಡಾ|| ಗುರುಪಾದ ಘಿವಾರಿ**
ಮುಖ್ಯಸ್ಥರು, ಕನ್ನಡ ವಿಭಾಗ, ಎಸ್. ಕೆ. ಕಾಲೇಜು, ತಾಳಿಕೋಟೆ - ೫೮೬೨೧೪

*(54ನೇ ಪುಟದಿಂದ)* ***ಆಚರಣೆಗಳು ಅಗತ್ಯವೇ ?***

ಆಚರಣೆ, ಹಾಸ್ಯೋತ್ಸವ, ಆಟೋಟ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದುದು ಇತಿಹಾಸ. ಪ್ರಸ್ತುತ ರಾಜಕೀಯ ಪಕ್ಷಗಳು ಮತ್ತು ವ್ಯಕ್ತಿಗಳ ಕೃಪಾಕಟಾಕ್ಷದಲ್ಲಿ ನೆರವೇರುವ ಆಚರಣೆಗಳು ಅನೇಕ. ರಾಜಕೀಯ ಹಾಗೂ ವೈಯಕ್ತಿಕ ಲಾಭಕ್ಕಾಗಿ ಸುಂಕುಚಿತ ವಿಷಯ ಗಳನ್ನು ಗುರಿಯನ್ನಾಗಿಸಿಕೊಂಡು ಜನರನ್ನು ಸಂಘಟಿಸಿ, ಈ ಸಂಘಟನೆಗಳ ವಿವಿಧ 'ಜನಪರ' ಕಾರ್ಯಕ್ರಮಗಳೆಂಬ ಸೋಗುಹಾಕುತ್ತ ಜನರನ್ನು ವಾಸ್ತವತೆಯಿಂದ ದೂರಕೊಂಡೊಯ್ಯುತ್ತಿವೆ. ಆಚರಣೆಗಳು ಇಂದು ರಾಜಕೀಯ ನಾಯಕರುಗಳ ಸಿದ್ಧಾಸ್ತ್ರವಾಗಿ ಮಾರ್ಪಟ್ಟಿವೆ.

ಮೇಲ್ಕಂಡ ಕುಂದುಕೊರತೆಗಳಿಗೆ ಸಂಪೂರ್ಣ ತಡೆಯೊಡ್ಡಲು ಆಗದಿದ್ದರೂ ಅವುಗಳನ್ನು ಸರಿಪಡಿಸಿಕೊಂಡು ಆಚರಿಸದಿದ್ದರೆ ನಷ್ಟವಾಗುವುದು ಮಾನವನಿಗೇ ಹೊರತು ಬೇರಾರಿಗೂ ಅಲ್ಲ. ಜೀವನದಲ್ಲಿ ಹಣ ಗಳಿಸುವುದಕ್ಕಿಂತ ಮತ್ತು ವೈಯಕ್ತಿಕ ಸುಖಕ್ಕಿಂತ ಶ್ರೇಷ್ಠವಾದುದೂ ಇದೆ ಎಂಬುದನ್ನು ಈ ಆಚರಣೆಗಳು ತಿಳಿಸುತ್ತವೆ. ವಿವಿಧ ಸಾಂದರ್ಭಿಕ ಆಚರಣೆಗಳ ಮೂಲಕ ವ್ಯಕ್ತಿಯು ಪ್ರಕೃತಿ ಮತ್ತು ಜಗತ್ತಿನೊಂದಿಗಿರುವ ತನ್ನ ಅನ್ಯೋನ್ಯತೆಯನ್ನು ವ್ಯಕ್ತಪಡಿಸುತ್ತಾನೆ. ಈ ಸಂಬಂಧ ಕೇವಲ ನಂಬಿಕೆ ಅಥವಾ ವಿಶ್ವಾಸವಾಗಿ ವ್ಯಕ್ತಿಯಲ್ಲಿ ಹುದುಗಿರದೇ ಆತನ/ ಆಕೆಯ ಕೌಶಲ್ಯವನ್ನು ಆಧರಿಸಿ ಹಾಡು, ನೃತ್ಯ, ಉಡುಪು, ಅಲಂಕಾರ ಹೀಗೆ ಇನ್ನಿತರ ಆನಂದಭರಿತ ಕಾರ್ಯಗಳ ಮೂಲಕ ಹೊರಹೊಮ್ಮುತ್ತವೆ. ಆಚರಣೆ ಎಂಬುದು ಸಮುದಾಯವನ್ನು ಒಂದೆಡೆ ಸೇರಿಸಿ ಪರಸ್ಪರ ಅನ್ಯೋನ್ಯತೆಯನ್ನು ಬಲವರ್ಧಿಸುವ ಸಮಯ. ಇತರರೊಂದಿಗೆ ಸಂತೋಷ ಮತ್ತು ವಸ್ತುಗಳನ್ನು ಹಂಚಿಕೊಳ್ಳುವುದರೊಂದಿಗೆ ಸಮುದಾಯಕ್ಕಿರುವ ತನ್ನ ಕರ್ತವ್ಯವನ್ನು ವ್ಯಕ್ತಿಯು ಅರಿಯುತ್ತಾನೆ.

ಆಚರಣೆಯು ಬಾಹ್ಯ ಆಡಂಬರವಾದರೂ ವ್ಯಕ್ತಿಯ ಧಾರ್ಮಿಕ ನವೀಕರಣದ ಸುಸಂದರ್ಭ. ಹಬ್ಬ ಹರಿದಿನಗಳಲ್ಲಿ ವಿಶೇಷ ಪ್ರವಚನಗಳು, ಇತಿಹಾಸ ಅಥವಾ ಪುರಾಣ ಕಥಾಧಾರಿತ ನಾಟಕ ಮತ್ತು ನೃತ್ಯ ರೂಪಕಗಳು ಹಾಗೂ ಸಾಮುದಾಯಿಕ ದೇವಾರಾಧನೆಗಳು ಸಾಮಾನ್ಯ. ಇವುಗಳಲ್ಲಿ ಭಕ್ತರು ತಮ್ಮ ಜೀವನದ ದ್ವಂದ್ವ, ನೋವು ನಲಿವುಗಳಿಗೆ ಅನುಭವಾತೀತ ಅರ್ಥವನ್ನು ಕಂಡುಕೊಳ್ಳುತ್ತಾರೆ. ಹೀಗೆ ಧಾರ್ಮಿಕ ರಹಸ್ಯವನ್ನು ಸಂಕೇತಗಳ ಮೂಲಕ ಅಭಿವ್ಯಕ್ತಪಡಿಸುವುದರ ಮೂಲಕ ಆಚರಣೆಗಳು ರಕ್ಷಣಾ ಹಾಗೂ ವಿಮೋಚನಾ ಸಾಧನಗಳಾಗುತ್ತವೆ. ಹೀಗೆ ಆಚರಣೆಗಳು ಈ ನಮ್ಮ ಜೀವನ ಇಹಲೋಕದ ದೈನಂದಿನ ಜೀವನವನ್ನು ಮೀರಿದ್ದು ಎಂದು ಸಾರುವ ಸಂಕೇತಗಳಷ್ಟೆ.

**ಪ್ರದೀಪ್ ಆಂತೋನಿ ಯೇ. ಸ.**
ಜ್ಞಾನಜ್ಯೋತಿ, ಆನೇಕಲ್, ಬೆಂಗಳೂರು ಜಿಲ್ಲೆ

ಸೀಯಾರ್ಕೆ...




## ಪಾಕಿಸ್ತಾನದಲ್ಲಿ ಮತಾಂಧ ಉಗ್ರಗಾಮಿಗಳ ಮೇಲುಗೈ

**ಪಾ**ಕಿಸ್ತಾನದಲ್ಲಿ ಮತಧರ್ಮೀಯ ಉಗ್ರಗಾಮಿಗಳ ಉಪಟಳ ವಿಪರೀತವಾಗಿ ಹೆಚ್ಚಿದೆ. ಅಲ್ಪಸಂಖ್ಯಾತರ ಮೇಲೆ ಹಲ್ಲೆ ನಡೆಸುವುದು ಒಂದು ಬಗೆಯಾದರೆ ಸ್ವಧರ್ಮೀಯರ ಮೇಲೇ ಅಸಹನೆ ಬೆಳೆಯುತ್ತಿದೆ. ಇಸ್ಲಾಮ್ ಹೆಸರಿನಲ್ಲಿ ನಡೆಯುತ್ತಿರುವ ಭಯೋತ್ಪಾದಕ ಕೃತ್ಯಗಳು ನಾಗರಿಕ ಸಮಾಜವನ್ನು ತಲ್ಲಣಗೊಳಿಸಿದೆ, ಇನ್ನೂ ಸ್ಥಿರಗೊಳ್ಳದ ಪಾಕಿಸ್ತಾನದ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಮತ್ತಷ್ಟು ಅಸ್ಥಿರಗೊಳಿಸುತ್ತಿದೆ. ಪಾಕಿಸ್ತಾನದ ವಿಚಾರದಲ್ಲಿ ಇದು ಹೊಸ ಬೆಳವಣಿಗೆ ಏನೂ ಇಲ್ಲದಿದ್ದರೂ ಈಚಿನ ದಿನಗಳಲ್ಲಿ ಸಂಭವಿಸುತ್ತಿರುವ ಘಟನೆಗಳು ಗಾಬರಿ ಹುಟ್ಟಿಸುವಂಥವಾಗಿವೆ. ಉಗ್ರಗಾಮಿ ಸಂಘಟನೆಗಳ ಮೇಲೆ ಪಾಕಿಸ್ತಾನ ಸರಕಾರ ಕಟ್ಟುನಿಟ್ಟಾದ ಕ್ರಮ ಕೈಗೊಳ್ಳಲು ಅಸಮರ್ಥವಾಗಿರುವುದರಿಂದ ಪರಿಸ್ಥಿತಿ ಹದಗೆಟ್ಟಿದೆ. ಸರದಿಯೋಪಾದಿಯಲ್ಲಿ ಇಸ್ಲಾಮಾಬಾದಿನಲ್ಲಿ, ಕರಾಚಿಯಲ್ಲಿ, ವಾಯುವ್ಯ ಗಡಿಪ್ರದೇಶದಲ್ಲಿ ಆಗಾಗ್ಗೆ ಉಗ್ರಗಾಮಿಗಳ ದಾಳಿ ಅಮಾಯಕರನ್ನು ಬಲಿ ತೆಗೆದುಕೊಳ್ಳುತ್ತಿದೆ. ಪಾಕಿಸ್ತಾನದ ಗುಪ್ತಚರ ದಳದ ಕುಮ್ಮಕ್ಕಿನಿಂದ ಬೆಳೆದಿರುವ ಉಗ್ರಗಾಮಿ ಸಂಘಟನೆಗಳು ಈಗ ದೇಶಕ್ಕೇ ಮುಳುವಾಗಿವೆ. ಇದರ ಮೇಲೆ ಅದು ಪೋಷಿಸಿದ ತಾಲಿಬಾನ್ ಪಡೆಯ ಹಾವಳಿ ಬೇರೆ. ನೆರೆಯ ಅಫ್ಘಾನಿಸ್ತಾನ ಅಮೆರಿಕದ ಆಕ್ರಮಣದಲ್ಲಿದ್ದರೆ, ಪಾಕಿಸ್ತಾನ ಅಮೆರಿಕದ ಪೋಷಣೆಯಲ್ಲಿರುವುದು ಒಂದು ದುರಂತ. ತನ್ನ ಅಸ್ತಿತ್ವದ ಅರವತ್ತು ಮೂರು ವರ್ಷಗಳಲ್ಲಿ ಅರ್ಧಕ್ಕಿಂತ ಹೆಚ್ಚು ಕಾಲ ಮಿಲಿಟರಿ ಸರ್ವಾಧಿಕಾರದಲ್ಲೇ ಕಳೆದ ಪಾಕಿಸ್ತನದಲ್ಲಿ ಪ್ರಜಾಪ್ರಭುತ್ವ ಸರಕಾರವೊಂದು ಅಧಿಕಾರದಲ್ಲಿರುವುದು ಈಚೆಗಷ್ಟೆ.

ಪ್ರಜಾಪ್ರಭುತ್ವ ವ್ಯವಸ್ಥೆಯ ಸ್ಥಾಪನೆಗಾಗಿ ಹೋರಾಡಿದ ಪಾಕಿಸ್ತಾನ ಪೀಪಲ್ಸ್ ಪಾರ್ಟಿಯ ನಾಯಕಿ ಬೆನಜೀರ್ ಭೂಟ್ಟೋರನ್ನು ಹತ್ಯೆಗೈದವರು ಇನ್ನೋ ಪತ್ತೆಯಾಗಿಲ್ಲ, ಆಗಲೇ ಇನ್ನೊಬ್ಬ ಪ್ರಮುಖ ನಾಯಕ ಪಾಕಿಸ್ತಾನದ ಪಂಜಾಬ್ ಗವರ್ನರ್ ಸಲ್ಮಾನ್ ತಸೀರ್ ಕೊಲೆಯಾಗಿದೆ. ಹತ್ಯೆಗೈದವನು ಅವರ ಬೆಂಗಾವಲಿಗಿದ್ದ ಮಾಲಿಕ ಮಮ್ತಾಜ್ ಹುಸೇನ್ ಖಾದ್ರಿ ಎಂಬಾತ. ಪ್ರಧಾನಿ ಇಂದಿರಾ ಗಾಂಧಿಯವರನ್ನು ಹತ್ಯೆಗೈದವನೂ ಬೆಂಗಾವಲಿಗಿದ್ದ ಯೋಧ. ಇದ್ದರೂ ಮತಾಂಧತೆಯ ಪ್ರೇರೇಪಣೆಯಿಂದ ಕೃತ್ಯ ಎಸಗಿದವರು. ಕೊಲೆಗಾರ ಖಾದ್ರಿಯ ಹಿಂದೆ ಯಾರ ಕೈವಾಡ ಇದೆ ಎನ್ನುವುದು ಪಾಕಿಸ್ತಾನದ ಇಂದಿನ ಪರಿಸ್ಥಿತಿಯಲ್ಲಿ ಪತ್ತೆಯಾಗುವುದು ಅನುಮಾನ. ಕೊಲೆಗಡುಕ ತಸೀರ್ ಅವರ ಮೇಲೆ ಹತ್ತಿರದಲ್ಲೇ ಒಂತು ಗುಂಡಿನ ಮಳೆಗರೆದ. ಉದಾರವಾದಿ ಧೋರಣೆಯ ಪಂಜಾಬಿನ ಜನಪ್ರಿಯ ಗವರ್ನರ್ ಸಲ್ಮಾನ್ ತಸೀರ್ ಪಾಕಿಸ್ತಾನದಲ್ಲಿರುವ ಅಲ್ಪಸಂಖ್ಯಾತರ ಪರವಾಗಿ ಯಾವಾಗಲೂ ದನಿ ಎತ್ತುತ್ತಿದ್ದ ವ್ಯಕ್ತಿ. ಧರ್ಮನಿಂದೆಯ ಅಪಾದನೆಗೀಡಾಗಿ ಮರಣದಂಡನೆ ಶಿಕ್ಷೆಗೆ ಗುರಿಯಾಗಿರುವ ಕ್ರಿಶ್ಚಿಯನ್ ಮಹಿಳೆ ಆಸಿಯಾ ಬೀಬಿಯನ್ನು ಕಾರಾಗೃಹದಲ್ಲಿ ಇತ್ತೀಚೆಗೆ ಭೇಟಿಮಾಡಿದ್ದರು. ಕಳೆದ ವರ್ಷ ನವೆಂಬರ್ ತಿಂಗಳಲ್ಲಿ ಆಕೆಗೆ ಶಿಕ್ಷೆ ವಿಧಿಸಲಾಗಿತ್ತು. ಪಾಕಿಸ್ತಾನದ ರಾಷ್ಟ್ರಪತಿ ಅಸೀಫ್ ಅಲಿ ಜರ್ದಾರಿಯವರಿಗೆ ಅವರು ಆಪಾದಿತೆ. ಆಸಿಯಾ ಬೀಬಿಗೆ ಕ್ಷಮೆ ನೀಡಬೇಕೆಂದು ಕೋರಿದ್ದ ಅರ್ಜಿಯನ್ನು ಶಿಫಾರಸು ಮಾಡಿ ತಲಪಿಸಿದ್ದು ಧರ್ಮಾಂಧವನ್ನು ರೊಚ್ಚಿಗೆಬ್ಬಿಸಿತ್ತು.

ಪಾಕಿಸ್ತಾನದಲ್ಲಿ ಸರ್ವಾಧಿಕಾರದ ವಿರುದ್ಧ ಹೋಟಾಟದಲ್ಲಿ ತಾರುಣ್ಯದಲ್ಲೇ ಕಾರಾಗೃಹದಲ್ಲಿ ಹಲವು ವರ್ಷಗಳು ಕಠಿಣ ಶಿಕ್ಷೆ ಅನುಭವಿಸಿದ್ದ ಸಲ್ಮಾನ್ ತಸೀರ್ ಪಾಕಿಸ್ತಾನ ಪೀಪಲ್ಸ್ ಪಾರ್ಟಿ ಅಸ್ತಿತ್ವಕ್ಕೆ ಬಂದಾಗಿನಿಂದ ಅದರ ಸದಸ್ಯರಾಗಿದ್ದರು. ಬುದ್ಧಿಜೀವಿ, ಪ್ರಕಾಶಕ, ಲೇಖಕ ತಸೀರ್ ಕಟ್ಟಾ ಪ್ರಜಾಪ್ರಭುತ್ವವಾದಿ. ತಸೀರ್ ಕಗ್ಗೊಲೆ ಪಾಕಿಸ್ತಾನದ ಸಮಾಜದಲ್ಲಿ ಉದಾರವಾದಿಗಳಿಗೆ ಹಿನ್ನಡೆಯಾಗಿದೆ. ಪಾಕಿಸ್ತಾನದಲ್ಲಿ ಧರ್ಮನಿಂದೆ ಬಹುದೊಡ್ಡ ಅಪರಾಧ. ಈ ಕಾಯಿದೆಯನ್ನು ತಿದ್ದುಪಡಿ ಮಾಡಬೇಕೆಂದು ಉದಾರವಾದಿಗಳು ಒತ್ತಾಯ ಮಾಡುತ್ತಲೇ ಇದ್ದಾರೆ. ಆದರೆ ಉಗ್ರಗಾಮಿಗಳದೇ ಈಗ ಮೇಲುಗೈಯಾಗಿದೆ. ಪಾಕಿಸ್ತಾನದ ಪಂಜಾಬ್ ಪ್ರಾಂತ ಅತ್ಯಂತ ಜನನಿಬಿಡ ಪ್ರದೇಶ. ತಸೀರ್ ಕೊಲೆಯ ನಂತರ ಮರುದಿನ ಪ್ರತಿಭಟನಾರ್ಥವಾಗಿ ಇಡೀ ಪ್ರಾಂತ ಬಂದ್ ಆಗಿತ್ತು. ಕೊಲೆಯ ವಿರುದ್ಧವಾಗಿ ಜನ ಪ್ರತಿಭಟಿಸಿದ್ದಾರೆ. ಯುವಜನ ಅಲ್ಪಸಂಖ್ಯಾತರ ರಕ್ಷಣೆಗಾಗಿ ಹೋರಾಟ ನಡೆಸಲು ಪಣ ತೊಟ್ಟಿದ್ದಾರೆ. ಅವರಿಗೆ ಯಶಸ್ಸನ್ನು ಹಾರೈಸೋಣ. ಮತಧರ್ಮೀಯ ಮೂಲಭೂತವಾದಿಗಳು ಯಾವುದೇ ನಾಗರಿಕ ಸಮಾಜಕ್ಕೂ ಕಂಟಕ. ಅದನ್ನು ಮಟ್ಟಹಾಕದೆ ನಾಗರಿಕ ಸಮಾಜ ಉಳಿಯದು. ಪಾಕಿಸ್ತಾನದಲ್ಲಿ ಮೊದಲಿನಿಂದಲೂ ಮೂಲಭೂತವಾದಕ್ಕೆ ಬೆಂಬಲ ದೊರೆತಿದ್ದು ಈಗ ಮಾರಕವಾಗಿ ಪರಿಣಮಿಸಿದೆ. ಇದನ್ನು ಹತ್ತಿಕ್ಕದೇ ಹೋದರೆ ವಿಪತ್ತು ಖಚಿತ.

## ಚೀಣಾದ ಕಿರಿಕಿರಿಗೆ ಕೊನೆ ಎಂದು ?

**ಭಾ**ರತ-ಚೀಣಾ ಸಂಬಂಧಗಳು ಒಂದು ಕಾಲದಲ್ಲಿ ಪರಸ್ಪರ ಆತ್ಮೀಯ. ಅದು ಐವತ್ತು ವರ್ಷಗಳ ಹಿಂದೆ. ಚೀಣಿ ಜನತಾ ಗಣರಾಜ್ಯ ಸ್ಥಾಪನೆಯಾದ ಮೇಲೆ ಸ್ನೇಹ, ಸೌಹಾರ್ದಗಳ ಸಂಬಂಧ ಇದ್ದದ್ದು ಕೆಲವೇ ವರ್ಷಗಳು. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ದೇಶದೇಶಗಳ ನಡುವೆ ಸಂಬಂಧಗಳಿಗೆ ಮೂಲ ಸೂತ್ರವಾಗಿ ಪಂಚಶೀಲ ಸೂತ್ರಗಳನ್ನು ರೂಪಿಸಿದ ಖ್ಯಾತಿ ಭಾರತ-ಚೀಣಾ ಸಂಬಂಧಗಳದ್ದು. ಚೀಣಾಗೆ ವಿಶ್ವಸಂಸ್ಥೆಯಲ್ಲಿ ನ್ಯಾಯವಾಗಿ ಸಲ್ಲಬೇಕಾಗಿದ್ದ ಸ್ಥಾನಕ್ಕಾಗಿ ಪ್ರಾಮಾಣಿಕವಾಗಿ ನಿರಂತರವಾಗಿ ಪ್ರಯತ್ನಿಸಿದ್ದು



ಭಾರತ. ಚೀಣಾದ ಕಿರಿಕಿರಿ ಪ್ರಾರಂಭವಾದ್ದು ಕಳೆದ ಶತಮಾನದ ಐವತ್ತರ ದಶಕದ ಉತ್ತರಾರ್ಧದಲ್ಲಿ, ಟಿಬೇಟಿನಿಂದ ದಲಾಯಿಲಾಮ ಮತ್ತು ಆತನ ಅನುಯಾಯಿಗಳು ಭಾರತಕ್ಕೆ ಪ್ರವೇಶಿಸಿ, ಆಶ್ರಯ ಪಡೆದ ಮೇಲೆ. ಅಂದಿನ ಪರಿಸ್ಥಿತಿಯಲ್ಲಿ ಭಾರತ ಸರಕಾರ ನಿರಾಶ್ರಿತರಾಗಿ ಬಂದವರಿಗೆ ಆಶ್ರಯ ನೀಡಿದ್ದು ಸಹಜವಾದ ನಿರ್ಧಾರ. ಟಿಬೇಟಿನ ಮೇಲೆ ಚೀಣಾದ ಸಾರ್ವಭೌಮತ್ವವನ್ನು ಮಾನ್ಯ ಮಾಡಿದ್ದ ಮೊದಲ ದೇಶ ಭಾರತ. ಅದು ಇಂದಿಗೂ ಬದಲಾಗಿಲ್ಲ. ಆದರೆ ಚೀಣಾ ಮಾತ್ರ ಅದು ಅಕ್ಷಮ್ಯ ಅಪರಾಧವೆಂಬಂತೆ ವರ್ತಿಸುತ್ತಿದೆ. ಭಾರತದೊಂದಿಗೆ ಗಡಿವಿವಾದದ ಕ್ಯಾತೆ ತೆಗೆದದ್ದೂ ಆಗಲೇ. ಚೀಣಾ ಆ ಹೊತ್ತಿಗಾಗಲೇ, ಅಂದರೆ ೧೯೫೮ರಿಂದಲೇ ಇನ್ನು ನಿಗದಿಯಾಗದಿದ್ದ ಆಕ್ಸೈಚಿನ್ ಗಡಿರೇಖೆಯನ್ನು ಪ್ರಶ್ನಿಸಿ, ಚೀಣಾ ತನ್ನದೆಂದು ಪರಿಗಣಿಸಿದ್ದ ಭೂಭಾಗದಲ್ಲಿ ರಸ್ತೆಯನ್ನು ನಿರ್ಮಿಸಿದ್ದು. ಆಗಾಗ್ಗೆ ಈ ಗಡಿಯಲ್ಲಿ ಸಂಭವಿಸುತ್ತಿದ್ದ ಸಣ್ಣಪುಟ್ಟ ಘರ್ಷಣೆಗಳು ೧೯೬೨ರಲ್ಲಿ ಪೂರ್ಣ ಪ್ರಮಾಣದ ಯುದ್ಧದಲ್ಲಿ ಪರ್ಯವಸಾನಗೊಂಡಿತು. ಚೀಣಾ ಇಂದು ಕೂಡ ಭಾರತಕ್ಕೆ ಸೇರಿದ ಸಾವಿರಾರು ಕಿಲೋಮೀಟರುಗಳಷ್ಟು ಭೂಪ್ರದೇಶವನ್ನು ಆಕ್ರಮಿಸಿಕೊಂಡಿದೆ. ಇದಾದನಂತರ ಎರಡು ದಶಕಗಳ ಕಾಲ ಎರಡೂ ದೇಶಗಳ ನಡುವೆ ಸಂಬಂಧಗಳು ಸ್ಥಗಿತಗೊಂಡಿದ್ದುವು.



ಅಯ್ಯೋ ದೇವ್ರೆ... ನಮಗೆ ಯಾರೂ ಗಾಳ ಹಾಕ್ತಾನೇ ಇಲ್ಲವಲ್ರಿ...

ಮತ್ತೆ ಸಂಬಂಧಗಳು ಪುನರ್‌ಸ್ಥಾಪನೆಯಾದ್ದು ೧೯೮೦ರ ದಶಕದಲ್ಲಿ. ಗಡಿವಿವಾದವನ್ನು ಶಾಂತಿಯುತವಾಗಿ ಬಗೆಹರಿಸಲು ಎರಡು ದೇಶಗಳೂ ಸಮ್ಮತಿಸಿವೆ. ಆದರೆ ಸಾಧಿಸಿರುವ ಪ್ರಗತಿ ಮಾತ್ರ ಸೊನ್ನೆ. ಇದಕ್ಕೆ ಚೀಣೀ ಕಡೆಯವರ ಜಿಗುಟು ಸ್ವಭಾವ ಮತ್ತು ಮೊಂಡುತನವೇ ಕಾರಣ. ಪ್ರಾಯಶಃ ಗಡಿವಿವಾದವನ್ನು ಬಗೆಹರಿಸದೆ ಹಾಗೆಯೇ ಉಳಿಸಿಕೊಂಡಿರುವುದೇ ಚೀಣಾದ ಧೋರಣೆ ಇರಬಹುದು. ಇದೊಂದು ಕಡೆಯಾದರೆ ಚೀಣಾ ಬೇರೆ ಬೇರೆ ರೀತಿಯಲ್ಲಿ ಕಿರುಕುಳ ನೀಡುತ್ತಿರುವುದೀಗ ಭಾರತದ ಆತಂಕವನ್ನು ಹೆಚ್ಚಿಸಿದೆ. ಗಡಿವಿವಾದವನ್ನು ಬದಿಗಿರಿಸಿ, ಅದರ ಬಗ್ಗೆ ಸಂಧಾನಗಳನ್ನು ಮುಂದುವರಿಸುತ್ತಿರುವಾಗಲೆ ಇತರ ಕ್ಷೇತ್ರಗಳಲ್ಲಿ, ಮುಖ್ಯವಾಗಿ ವಾಣಿಜ್ಯ, ಆರ್ಥಿಕ ಸಹಕಾರ, ಸಾಂಸ್ಕೃತಿಕ ಹಾಗೂ ಪ್ರವಾಸಿ ಕ್ಷೇತ್ರಗಳಲ್ಲಿ ಸಂಬಂಧಗಳನ್ನು ಬೆಳೆಸಲು ಎರಡೂ ದೇಶಗಳು ಸಮ್ಮತಿಸಿವೆ. ಅದು ಅನೂಚಾನವಾಗಿ ಕಾರ್ಯಗತವಾಗುತ್ತಿದೆ. ಇದರಿಂದ ಎರಡು ದೇಶಗಳಿಗೂ ಪ್ರಯೋಜನವಾಗಿದೆ. ಅಂತರರಾಷ್ಟ್ರೀಯ ಕ್ಷೇತ್ರದಲ್ಲೂ ಕೂಡ ಎರಡು ದೇಶಗಳೂ ಸಹಕರಿಸುತ್ತಿವೆ. ಷಾಂಘಾಯ್ ಗುಂಪು, 'ಬ್ರಿಕ್'' ಗುಂಪು ಮೊದಲಾದ ಪ್ರಾದೇಶಿಕ ಕೂಟಗಳಲ್ಲಿ ಭಾರತ, ಚೀಣಾಗಳು ಸಕ್ರಿಯ ಪಾತ್ರ ವಹಿಸಿವೆ. ಇಷ್ಟೆಲ್ಲ ಇದ್ದರೂ ಚೀಣಾ ಭಾರತದ ಮೇಲೆ ಕಿಡಿಕಾರುತ್ತಿದೆ.

ಚೀಣಾಗಡಿವಿವಾದಕ್ಕೆ ಸಂಬಂಧಿಸಿದಂತೆ ಭಾರತಕ್ಕೆ ಅನವಶ್ಯಕವಾಗಿ ಕಿರಿಕಿರಿ ಉಂಟುಮಾಡುತ್ತಿದೆ. ಹೊಸ ಹೊಸ ವಿವಾದಗಳನ್ನು ಹುಟ್ಟಿಹಾಕತೊಡಗಿದೆ. ಅರುಣಾಚಲ ಪ್ರದೇಶ, ಸಿಕ್ಕಿಂನ ಭೂಭಾಗಗಳು ತನಗೆ ಸೇರಿದ್ದೆಂದು ಚೀಣಾ ಹೇಳತೊಡಗಿದೆ. ಕಾಶ್ಮೀರವನ್ನು ಭಾರತದ ಭಾಗವೆಂದು ಈ ಹಿಂದೆ ಒಪ್ಪಿದ್ದ ಚೀಣಾ ಈಗ ರಾಗ ಬದಲಿಸಿದೆ. ಅದಕ್ಕೆ ವಿವಾದಿತ ಪ್ರದೇಶದ ಹಣೆಪಟ್ಟಿ ಹಚ್ಚಿದೆ. ಚೀಣಾದ ಸರಕಾರ ತಯಾರಿಸುವ ಭೂಪಟಗಳಲ್ಲಿ ವಿವಾದಿತ ಪ್ರದೇಶಗಳೆಂದು ತಾನು ಪರಿಗಣಿಸಿರುವ ಭಾರತದ ಭೂಭಾಗಗಳನ್ನು ಬೇರೆ ಬಣ್ಣದಲ್ಲಿ ಸೂಚಿಸುತ್ತದೆ. ಇದನ್ನು ಗುರ್ತಿಸಿ ಭಾರತ ಆಕ್ಷೇಪವೆತ್ತಿದಾಗ ಅದನ್ನು ಸರಿಪಡಿಸುವುದಾಗಿ ಸಮಾಜಾಯಿಷಿ ನೀಡುವ ಚೀಣಾ, ಕಾರ್ಯರೂಪದಲ್ಲಿ ಮಾತ್ರ ಅನುಷ್ಠಾನಕ್ಕೆ ತರುತ್ತಿಲ್ಲ. ಚೀಣಾದಿಂದ ಭಾರತದ ಈ ಪ್ರದೇಶಗಳಿಗೆ, ಅಂದರೆ ಅರುಣಾಚಲ ಪ್ರದೇಶ, ಸಿಕ್ಕಿಂ, ಕಾಶ್ಮೀರಗಳಿಗೆ ಪ್ರವಾಸಿಗಳಿಗೆ ರಹದಾರಿ ನೀಡುವಾಗ ಪಾಸ್‌ಪೋರ್ಟಿನಲ್ಲಿ ಮುದ್ರಿಸುವುದಕ್ಕೆ ಬದಲಾಗಿ, ಪ್ರತ್ಯೇಕ ಚೀಟಿ ಲಗತ್ತಿಸುವ ಕ್ರಮ ಅನುಸರಿಸುತ್ತಿದೆ. ಭಾರತ ಸರಕಾರ ಇದರ ಬಗ್ಗೆ ಪ್ರತಿಭಟಿಸಿದರೆ ಸಮಜಾಯಿಷಿ ನೀಡುತ್ತದೆಯೇ ವಿನಾ ಸರಿಪಡಿಸುವ ಗೋಜಿಗೆ ಹೋಗುವುದಿಲ್ಲ. ಇದೇ ರೀತಿಯಾಗಿ ನಿರಂತರ ಕಿರುಕುಳ ನೀಡುತ್ತಿದ್ದರೆ, ಸಂಬಂಧಗಳು ಬಿಗಡಾಯಿಸುವುದು. ಇದು ಚೀಣಾಗೆ ತಿಳಿಯದ್ದೇನಲ್ಲ. ಮುಂದೆ ಸಂದರ್ಭಕ್ಕನುಸಾರವಾಗಿ ಹೊರಳಿಕೊಳ್ಳಲು ಈ ಇಬ್ಬಗೆಯ ಧೋರಣೆಯನ್ನು ಚೀಣಾ ಅನುಸರಿಸುತ್ತಿದೆ. ಪ್ರಾಯಶಃ ಇದು ಚೀಣಾದ ವಿದೇಶಾಂಗ ನೀತಿಯ ಭಾಗವಾಗಿರಬೇಕು. ಹಾಗಾಗಿ ಚೀಣಾದೊಂದಿಗೆ ಸಂಬಂಧಗಳಲ್ಲಿ ಎಚ್ಚರಿಕೆ ವಹಿಸಬೇಕಾದುದು ಅಗತ್ಯ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



ಸುದ್ದಿ ಚಿತ್ರ

*ಡಾ|| ಸಿ. ವೀರಣ್ಣ ಅವರ ಸಂಶೋಧನಾತ್ಮಕ ಕೃತಿ 'ಕನ್ನಡ ಸಾಹಿತ್ಯ' : ಚಾರಿತ್ರಿಕ ಬೆಳವಣಿಗೆ - ೧ (ಪ್ರಾಚೀನ ಸಾಹಿತ್ಯ) ಎರಡನೇ ಆವೃತ್ತಿ ಮತ್ತು ಕನ್ನಡ ಸಾಹಿತ್ಯ : ಚಾರಿತ್ರಿಕ ಬೆಳವಣಿಗೆ - ೨ (ಮಧ್ಯಕಾಲೀನ ಸಾಹಿತ್ಯ) ಈ ಸಂಪುಟಗಳ ಲೋಕಾರ್ಪಣೆ ೧೪-೧-೨೦೧೧ರಂದು ಜರುಗಿತು. ಚಿತ್ರದಲ್ಲಿ (ಎಡದಿಂದ ಬಲಕ್ಕೆ ) ಶ್ರೀ ಆರ್. ಎಸ್. ರಾಜಾರಾಮ್, ಡಾ|| ಎಚ್. ಎಸ್. ಗೋಪಾಲರಾವ್, ಪ್ರೊ|| ಜಿ. ವೆಂಕಟಸುಬ್ಬಯ್ಯ, ಪ್ರೊ|| ಎಂ. ಎಚ್. ಕೃಷ್ಣಯ್ಯ ಮತ್ತು ಡಾ|| ಸಿ. ವೀರಣ್ಣ*

**ಭಾಷಾ ಕಲಿಕೆಯ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ಭೇದಿಸಲು ವಿಜ್ಞಾನಿಗಳಿಗೆ ಇನ್ನೂ ಸಾಧ್ಯವಾಗಿಲ್ಲ. ವಿಜ್ಞಾನಿ ಸ್ಕಿನ್ನರ್ ಇದನ್ನು ಉಳಿದೆಲ್ಲ ನಡವಳಿಕೆಗಳಂತೆ 'ಕಲಿತ' ಗುಣ ಎಂದು ಹೇಳುತ್ತಾರೆ. ಸಾಮಾನ್ಯವಾಗಿ ತಾಯಿ ತಂದೆಯರು ಮಕ್ಕಳ ಭಾಷಾ ಕಲಿಕೆಗೆ ಅಬರೆ ಎಳೆಯ ವಯಸ್ಸಿನಲ್ಲಿ ವಿಶೇಷ ಗಮನ ನೀಡುವುದಿಲ್ಲ. ಮಕ್ಕಳು ತಮ್ಮಷ್ಟಕ್ಕೆ ತಾವೇ ಭಾಷೆಯನ್ನು ಕಲಿಯುತ್ತಾರೆ. ಆದರೆ ಸಂಶೋಧಕರ ಪ್ರಕಾರ ಮಕ್ಕಳ ಭಾಷಾ ಕಲಿಕೆಯ ಸಾಮರ್ಥ್ಯ ಅಸಾಧಾರಣವಾಗಿದ್ದು, ಅವರಿಗೆ ಭಾಷೆಯ ಆಳವಾದ ಜ್ಞಾನವನ್ನು ಹೊಂದುವ ಸಾಮರ್ಥ್ಯವಿರುತ್ತದೆ.**

ಸುಮಂಗಲಾ ಎಸ್. ಮುಮ್ಮಿಗಟ್ಟಿ

ನಮ್ಮ ಸುತ್ತಲಿನ ಪರಿಸರದಲ್ಲಿ ನಾವು ಹಲವಾರು ಜನರೊಡನೆ ವ್ಯವಹರಿಸುತ್ತೇವೆ. ಹಾಗೆ ಮಾಡುವಾಗ ಬಹಳಷ್ಟು ಜನ ಭಾಷೆಯ ಉಚ್ಚಾರ ಮತ್ತು ಬಳಕೆ ಎರಡರಲ್ಲೂ ಎದ್ದುಕಾಣುವಂತಹ ತಪ್ಪು ಮಾಡುವುದನ್ನು ನೋಡುತ್ತೇವೆ. ನಾನು ಆಕಾಶವಾಣಿಯಲ್ಲಿ ಧ್ವನಿಮುದ್ರಣ ಮಾಡುವಾಗ ಕಂಡುಬರುವ ದೊಡ್ಡ ತೊಂದರೆ ಎಂದರೆ 'ಅ' ಮತ್ತು 'ಹ' ಕಾರಗಳ ಬಳಕೆ. ಎರಡನ್ನೂ ಉಚ್ಚರಿಸಬಲ್ಲ ವ್ಯಕ್ತಿಗಳು ಅವುಗಳನ್ನು ಅದಲುಬದಲೇಕೆ ಮಾಡುತ್ತಾರೆ, ಎನ್ನುವ ಪ್ರಶ್ನೆ ಸದಾ ನನ್ನನ್ನು ಕಾಡುತ್ತಿತ್ತು. ಅದರಲ್ಲೂ ಕರ್ನಾಟಕದ ಕೆಲ ಪ್ರದೇಶಗಳಲ್ಲಿ ಶಾಲಾ ಶಿಕ್ಷಕರೇ ಈ ತಪ್ಪನ್ನು ಮಾಡುತ್ತಾರೆ ಎಂದಾಗ ಮತ್ತೂ ಆಶ್ಚರ್ಯ. ಹಾಗೆಯೇ ಹ್ರಸ್ವ ಹಾಗೂ ದೀರ್ಘ ಸ್ವರಗಳ ಬಳಕೆ, ಕೆಲ ಕಡೆಗಳಲ್ಲಿ ವ್ಯಾಕರಣ... ಇತ್ಯಾದಿ. ಹಾಗೆಂದು ಇವೆಲ್ಲಾ ಸಾಹಿತಿಗಳೂ, ಭಾಷಾ ಪಂಡಿತರೂ ಮಾತ್ರ ತಿಳಿದಿರಬಹುದಾದಂತಹ ಕ್ಲಿಷ್ಟ ಪದಗಳೇನಲ್ಲ. ನಮ್ಮ ದಿನನಿತ್ಯದ ಜೀವನದಲ್ಲಿ ಬಳಸುವ ಮಾತೃಭಾಷೆಯ ಪದಗಳಿವು. ಇದಕ್ಕೆ ಉತ್ತರ ಕಂಡುಕೊಳ್ಳುವ ಪ್ರಯತ್ನದಲ್ಲಿ ಅರಿವಿಗೆ ಬಂದ ಹಲವಾರು ವಿಷಯಗಳು ನಿಜಕ್ಕೂ ಆಶ್ಚರ್ಯಕರವಾಗಿವೆ.

ಲಾಸ್ ಏಂಜಲಿಸ್‌ನ ಬಾಲಕಿ ಜೆನಿಯನ್ನು ಭಾಷಾ ವಿಜ್ಞಾನಿಗಳಿಗೆ ಪರಿಚಯಿಸಿದಾಗ ಆಕೆಗೆ ೧೩ ವರುಷ. ಆಕೆಯ ತೂಕ ೨೭ ಕಿ.ಗ್ರಾಂ. ಆಕೆಯ ತಂದೆ ತಾಯಿ ಅವಳನ್ನು ಬಾಲ್ಯದಿಂದ ಕೊಠಡಿಯೊಂದರಲ್ಲಿ ಕೂಡಿಹಾಕಿದ್ದರು. ಅವಳು ಹೊರಡಿಸುತ್ತಿದ್ದ ಸಣ್ಣ ಶಬ್ದಕ್ಕೂ ತಂದೆಯಿಂದ ಹೊಡೆತಗಳನ್ನು ತಿನ್ನಬೇಕಾಗುತ್ತಿತ್ತು. ಆಕೆಯೊಂದಿಗೆ ಯಾರೂ ಮಾತಾಡಿರಲಿಲ್ಲ ಹಾಗೂ ಯಾರ ಮಾತನ್ನೂ ಕೇಳಿರಲಿಲ್ಲ (ರೇಡಿಯೋ, ಟೆಲಿವಿಷನ್ ಸಹ). ಬಂಧನದಿಂದ ಪಾರಾದಾಗ 'ಜೆನಿ' ಹೊರಡಿಸುತ್ತಿದ್ದ ಒಂದೇ ಶಬ್ದ ಉನ್ನತ ಸ್ಥಾಯಿಯ ನರಳುವಿಕೆ. ಭಾಷಾ ಪರಿಣತರಾದ 'ಸೂಸನ್ ಕ್ಯುರಟಿಸ್' ಹಾಗೂ ಇತರರು ಈಕೆಯ ಸಹಾಯಕ್ಕೆ ಮುಂದೆ ಬಂದರು. ನಡೆಯಲೂ ಬಾರದಿದ್ದ ಆಕೆಯನ್ನು (ಅದುವರೆಗೆ ಆಕೆ ಸರಪಳಿಗಳಿಂದ ಬಂಧಿಸಲ್ಪಟ್ಟಿದ್ದಳು) ನಡೆಯುವಂತೆ ಮಾಡಲು ಸಾಧ್ಯವಾಯಿತು. ಆದರೆ ಆಕೆ ಕೆಲವು ಮೂಲಭೂತ ಪದಗಳನ್ನು ಕಲಿತು ಉಚ್ಚರಿಸಿದಾಗ ಆಕೆಗೆ ೧೭ ವರ್ಷ. ಭಾಷೆಯನ್ನು ಸಂಪೂರ್ಣವಾಗಿ ಕಲಿತು ಸ್ಪಷ್ಟವಾಗಿ ಉಚ್ಚರಿಸಲು ಜೆನಿಗೆ ಸಾಧ್ಯವಾಗಲೇ ಇಲ್ಲ.

ಈ 'ಭಾಷೆ' ಎನ್ನುವುದು ವಿಕಾಸದ ಹಾದಿಯಲ್ಲಿ ಮಾನವನು ಮಾತ್ರ ಕರಗತ ಮಾಡಿಕೊಂಡಿರುವ (ಪ್ರಾಣಿಗಳ ಭಾಷೆಯಲ್ಲಿ ಧ್ವನಿಗಿಂತ ಸಂಜ್ಞೆಗಳು ಹೆಚ್ಚು) ಕಲೆ. ಈ ಸುದೀರ್ಘ ಇತಿಹಾಸದ ಹಾದಿಯಲ್ಲಿ ಯಾವಾಗ ಅವನಿಗೆ ಇದು ಸಾಧ್ಯವಾಯಿತು ಎನ್ನುವುದು ತಿಳಿಯದೇ ಇದ್ದರೂ, ಅಸ್ಥಿಪಂಜರಗಳ ಅಧ್ಯಯನದ ಆಧಾರದಿಂದ, ಸುಮಾರು ೫೦,೦೦೦ ವರ್ಷಗಳ ಹಿಂದೆ 'ಹೋಮೋಸೇಪಿಯನ್' ಹಂತದ ಆದಿಮಾನವ ಭಾಷೆಯ ಬಳಕೆಗೆ ಅವಶ್ಯಕವಾದ ಅಂಗರಚನಾ ವಿನ್ಯಾಸವನ್ನು ಬೆಳೆಸಿಕೊಂಡ ಎನ್ನುವುದು ಕಂಡುಬರುತ್ತದೆ. ನಮ್ಮ ಬಾಯಿಯ ಕುಹರ ಹಾಗೂ ಗಂಟಲು ನಮ್ಮ ಪೂರ್ವಜರಂತೆ ಬಾಗಿದ ಬಿಲ್ಲಿನಾಕಾರದಲ್ಲಿಲ್ಲ. ಈಗ ಬಾಯಿ ಕುಹರ



ಗಂಟಲಿಗೆ ಹೆಚ್ಚು ಕಡಿಮೆ ಸಮಕೋನದಲ್ಲಿದೆ. ಶಬ್ದ ಹೊರಡಿಸುವ ಧ್ವನಿಪೆಟ್ಟಿಗೆ ಗಂಟಲಿನ ಆಳದಲ್ಲಿದೆ. ಇದು ಗಂಟಲಿನಲ್ಲಿ ಅನುರಣನೆಗೆ ಅವಕಾಶವನ್ನು ಒದಗಿಸಿ, ನಾಲಿಗೆಯ ಚಲನೆಗೆ ಹೆಚ್ಚಿನ ಸ್ಥಳವನ್ನು ಕಲ್ಪಿಸಿತು.

ಈ ರೀತಿ ವಿಕಾಸವಾಗಿರುವ ಅಂಗರಚನಾ ವಿನ್ಯಾಸವು ಮಾತಾಡಲು ಅವಶ್ಯಕವಿರುವ ಹಲವು ಶಬ್ದಗಳನ್ನು ಹೊರಡಿಸಲು ನೆರವಾಯಿತು. ಆದರೆ ಆಗ ತಾನೆ ಜನಿಸಿದ ಮಗುವಿನಲ್ಲಿ ಬೇರೆಯ ಪ್ರಾಣಿಗಳಿಗಿಂತ ಭಿನ್ನವಾದ ಈ ರೀತಿಯ ವ್ಯವಸ್ಥೆ ಇರುವುದಿಲ್ಲ. ಇದು ಶಿಶುಗಳಿಗೆ ತಾಯಿಯ ಎದೆ ಹಾಲು ಕುಡಿಯುವುದರ ಜೊತೆಗೆ ಉಸಿರಾಡಲು ಅನುಕೂಲ. ಆದರೆ ಮಗು ಬೆಳೆದಂತೆ ಕ್ರಮೇಣವಾಗಿ ಧ್ವನಿಪೆಟ್ಟಿಗೆ ಗಂಟಲಿನ ಆಳಕ್ಕೆ ಇಳಿದು ನಾಲಿಗೆಗೆ ಹೆಚ್ಚು ಸ್ಥಳವನ್ನು ಮಾಡಿಕೊಡುತ್ತದೆ.

**ಮಕ್ಕಳಲ್ಲಿ ಭಾಷೆಯನ್ನು ಕರಗತ ಮಾಡಿಕೊಳ್ಳುವ ವಿವಿಧ ಹಂತಗಳು**

ಬೇರೆ ಬೇರೆ ಮಕ್ಕಳಲ್ಲಿ ಭಾಷಾ ಕಲಿಕೆಯ ಸಮಯಗಳಲ್ಲಿ ವ್ಯತ್ಯಾಸಗಳು ಕಂಡುಬಂದರೂ, ಬಹುತೇಕ ಮಕ್ಕಳಲ್ಲಿಯ ಸರಾಸರಿ ಹಂತಗಳು ಹೀಗಿವೆ :

**೩ನೇ ತಿಂಗಳಿನಲ್ಲಿ:** ಮಕ್ಕಳು ಭಾಷೆಯನ್ನು ಬಳಸುವ ಮೊದಲ ಪ್ರಯತ್ನ ಮಾಡುವುದು ತಮ್ಮ ಎರಡನೇ ತಿಂಗಳಿನಲ್ಲಿ. ಆಗ ಮಗು ಆಅ... ಊಊ... ಉ ರ... ಮುಂತಾದ ಶಬ್ದಗಳನ್ನು ಹೊರಡಿಸುತ್ತದೆ. ಇವು ಮಗುವಿನ ಬಾಯಿಯ ಅನೈಚ್ಛಿಕ ಸ್ನಾಯುಗಳು, ಗಂಟಲು ಹಾಗೂ ಧ್ವನಿಪೆಟ್ಟಿಗೆಯ ಸಹಾಯದಿಂದ ಹೊರಬರುತ್ತವೆ.

**೬ನೇ ತಿಂಗಳಿನಲ್ಲಿ:** ಮಗು ಒಂದೇ ಅಕ್ಷರದ ಪದಗಳನ್ನು (ಬಾಬಾ, ದಾದಾ, ಗಗಾ...) ಹೊರಡಿಸಲು ಪ್ರಾರಂಭಿಸುತ್ತದೆ. ಇವು ಸಾಮಾನ್ಯವಾಗಿ ಮಗುವಿನ ಕಿವಿಗೆ ಬೀಳುವ ಮಾತೃಭಾಷೆಯ ಲಯಬದ್ಧತೆ ಹಾಗೂ ವರ್ಣೋಚ್ಚಾರಣೆಯನ್ನು ಅವಲಂಬಿಸಿರುತ್ತದೆ.

**೯ನೇ ತಿಂಗಳಿನಲ್ಲಿ:** ಮಗು ತನ್ನ ಬಾಯಿಯ ಚಲನೆಯ ಮೇಲೆ ನಿಯಂತ್ರಣವನ್ನು ಸಾಧಿಸಿ ಎರಡಕ್ಷರದ ಪದಗಳನ್ನು ಉಚ್ಚರಿಸಲು ಪ್ರಾರಂಭಿಸುತ್ತದೆ. ಈ ಪ್ರಯತ್ನಕ್ಕೆ ಪ್ರೀತಿ, ಪುರಸ್ಕಾರಗಳು ದೊರೆತಾಗ ಪ್ರಯತ್ನಪೂರ್ವಕವಾಗಿ ಅರ್ಥಪೂರ್ಣ ಹಾಗೂ ಅರ್ಥರಹಿತ ಶಬ್ದಗಳನ್ನು ಗುರುತಿಸಲು ಪ್ರಾರಂಭಿಸುತ್ತದೆ.

**೧೨ನೇ ತಿಂಗಳಿನಲ್ಲಿ:** ಮಗು ಅರ್ಥಪೂರ್ಣವಾದ (ಅಪ್ಪ, ದಾದಾ, ಚಾಚಾ, ಮಮ್ಮು, ಅಜ್ಜಿ) ಪದಗಳೊಂದಿಗೆ ಅವುಗಳ ಅರ್ಥವನ್ನು ಗ್ರಹಿಸಲು ಪ್ರಾರಂಭಿಸುತ್ತದೆ.

**೧೮ರಿಂದ ೨೪ನೇ ತಿಂಗಳಿನಲ್ಲಿ:** ಮಗುವಿನ ಮಾತನಾಡುವ ಸಾಮರ್ಥ್ಯ ಮತ್ತಷ್ಟು ಹೆಚ್ಚಾಗುತ್ತದೆ ಹಾಗೂ ಪ್ರಶ್ನಾರ್ಥಕ ಪದಗಳನ್ನು ಬಳಸಲು ಪ್ರಾರಂಭಿಸುತ್ತದೆ. ಬಹುವಚನ ಮತ್ತು ಕ್ರಿಯಾಪದಗಳ ಬಳಕೆ ಸರಿಯಾಗಿರುತ್ತದೆ.

**೩ರಿಂದ ೪ ವರ್ಷದ ಅವಧಿಯಲ್ಲಿ:** ವ್ಯಾಕರಣದ ಸರಿಯಾದ ಬಳಕೆ ಆರಂಭವಾಗಿರುತ್ತದೆ. 'ಕಾಲ'ದ ಬಳಕೆಯ ಅರ್ಥವೂ ಆಗುತ್ತದೆ. ಮೆದುಳಿನಲ್ಲಿ ನಿನ್ನೆ, ನಾಳೆಯಂತಹ ಪದಗಳ ಸಂಗ್ರಹವೂ ಆಗುತ್ತಾಹೋಗುತ್ತದೆ. ಹೆಚ್ಚು ದೀರ್ಘವಾದ ಹಾಗೂ ಅರ್ಥಪೂರ್ಣವಾದ ವಾಕ್ಯಗಳ ರಚನೆ ಮಾಡುತ್ತದೆ.

**ಮಗುವಿನ ೬ನೇ ವರ್ಷದಲ್ಲಿ:** ಈ ಅವಧಿಯಲ್ಲಿ ಮಗು ಭಾಷೆಯ ಬಳಕೆಯ ಜೊತೆಗೆ, ಸೂಕ್ತ ಒತ್ತಡ ಮತ್ತು ತೇಲಿಸಬಹುದಾದ ಉಚ್ಚಾರಣೆಯನ್ನು ತನ್ನ ಗಂಟಲು, ಬಾಯಿ ಹಾಗೂ ಮೂಗಿನ ಸಹಾಯದಿಂದ ಮಾಡುವ ಕಲೆಯನ್ನು ಕರಗತ ಮಾಡಿಕೊಳ್ಳುತ್ತದೆ. ಇಡೀ ಹಂತದಲ್ಲಿ ಭಾಷೆಯನ್ನು ಓದುವ ಮತ್ತು ಬರೆಯಲು ಸಿಗುವ ಪ್ರೇರಣೆಯಿಂದ ಭಾಷೆಯನ್ನು ಅಭಿವೃದ್ಧಿಪಡಿಸಿಕೊಳ್ಳಲು ಎಲ್ಲ ಅಡಿಪಾಯವೂ ಸಿದ್ಧವಾಗಿರುತ್ತದೆ. ಈ ಹಂತದಲ್ಲಿ ಮಗು ಕಲಿಯುವ ಭಾಷೆ, ಉಚ್ಚಾರಣೆಗಳು ಜೀವನಪರ್ಯಂತ ಉಳಿಯುತ್ತವೆ. ಬದಲಿಸಬೇಕು ಎನ್ನುವುದಾದರೆ ಪ್ರಯತ್ನಪೂರ್ವಕವಾದ ಪರಿಶ್ರಮ ಬೇಕಾಗುತ್ತದೆ. ಈ ಹಂತದಲ್ಲಿ ಮಗು ಕಲಿಯುವ 'ಅಕ್ಕಿ' ಮತ್ತು 'ಹಕ್ಕಿ' ಪದಗಳ 'ಅ' ಮತ್ತು 'ಹ'ಗಳ ಸರಿಯಾದ ಬಳಕೆ ಮುಂದೆ ಆ ಮಗು ಅವುಗಳನ್ನು ಹೇಗೆ ಬಳಸುತ್ತದೆ ಎನ್ನುವುದನ್ನು ಅವಲಂಬಿಸುತ್ತದೆ. ಆದ್ದರಿಂದ ಇಲ್ಲಿ 'ಶಾಲೆ' ಹಾಗೂ ಈ ಮೊದಲ ಮಾತುಗಳನ್ನು ಕಲಿಸುವ ಭಾಷಾ ಶಿಕ್ಷಕರು ಮಹತ್ವದ ಪಾತ್ರ ನಿರ್ವಹಿಸುತ್ತಾರೆ.

ಆದರೆ ಭಾಷಾ ಕಲಿಕೆಯ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ಭೇದಿಸಲು ವಿಜ್ಞಾನಿಗಳಿಗೆ ಇನ್ನೂ ಸಾಧ್ಯವಾಗಿಲ್ಲ. ವಿಜ್ಞಾನಿ ಸ್ಕಿನ್ನರ್ ಇದನ್ನು ಉಳಿದೆಲ್ಲ ನಡವಳಿಕೆಗಳಂತೆ 'ಕಲಿತ' ಗುಣ ಎಂದು ಹೇಳುತ್ತಾರೆ. ಸಾಮಾನ್ಯವಾಗಿ ತಾಯಿ ತಂದೆಯರು ಮಕ್ಕಳ ಭಾಷಾ ಕಲಿಕೆಗೆ ಅವರ ಎಳೆಯ ವಯಸ್ಸಿನಲ್ಲಿ ವಿಶೇಷ ಗಮನ ನೀಡುವುದಿಲ್ಲ. ಮಕ್ಕಳು ತಮ್ಮಷ್ಟಕ್ಕೆ ತಾವೇ ಭಾಷೆಯನ್ನು ಕಲಿಯುತ್ತಾರೆ. ಆದರೆ ಸಂಶೋಧಕರ ಪ್ರಕಾರ ಮಕ್ಕಳ ಭಾಷಾ ಕಲಿಕೆಯ ಸಾಮರ್ಥ್ಯ ಅಸಾಧಾರಣವಾಗಿದ್ದು, ಅವರಿಗೆ ಭಾಷೆಯ ಆಳವಾದ ಜ್ಞಾನವನ್ನು ಹೊಂದುವ ಸಾಮರ್ಥ್ಯವಿರುತ್ತದೆ. ಜಗತ್ತಿನ ಎಲ್ಲ ಭಾಷೆಗಳಲ್ಲಿ ಸುಮಾರು ೬೦೦ ಸ್ಥಿರ ಶಬ್ದಗಳಿದ್ದು, ೨೦೦ ಬದಲಾವಣೆಯಾಗುತ್ತಿರುತ್ತವೆ. ಪದವೊಂದಕ್ಕೆ ೫ ಶಬ್ದಗಳನ್ನು ಹೊರಡಿಸಬಹುದಾದರೆ, ಸುಮಾರು ೧೦೦ ಬಿಲಿಯನ್ ವಿವಿಧ ಸಂಯೋಗದ ಶಬ್ದಗಳನ್ನು ಹೊರಡಿಸುವ ಸಾಮರ್ಥ್ಯ ಮಕ್ಕಳಿಗಿರುತ್ತದೆ.

**ಮಕ್ಕಳಲ್ಲಿ ಬಹು ಭಾಷಾ ಕಲಿಕೆಯ ಸಾಮರ್ಥ್ಯ**

ಮಕ್ಕಳಿಗೆ ಒಂದಕ್ಕಿಂತ ಹೆಚ್ಚು ಭಾಷೆಯನ್ನು ಕಲಿಸುವುದು ಹಾನಿಕರವೇ ? ಇಲ್ಲ ಎನ್ನುತ್ತಾರೆ ವಿಜ್ಞಾನಿಗಳು. ಉದಾಹರಣೆಗೆ ನೈಜೀರಿಯಾದಲ್ಲಿ ಸುಮಾರು ೪೦೦ ಭಾಷೆಗಳನ್ನು ಅಲ್ಲಿಯ ಜನ ಮಾತನಾಡುತ್ತಾರೆ. ಕರ್ನಾಟಕದ ಗಡಿ ಭಾಗಗಳ ಮಕ್ಕಳು ಕನಿಷ್ಠ ಮೂರು ಭಾಷೆ ಗಳನ್ನು ಕಲಿಯುತ್ತಾರೆ. ಮಕ್ಕಳ ಮೇಲೆ ಕಲಿಕೆಯ ಒತ್ತಡ ಬಿದ್ದಾಗ ಅವರು ಅದನ್ನು ನಿಭಾಯಿಸಲು ಕಷ್ಟಪಡುತ್ತಾರೆ.

**ಜಗತ್ತಿನಲ್ಲಿರುವ ಭಾಷೆಗಳು**

ಪರಿಣತರ ಅಭಿಪ್ರಾಯದಂತೆ ಜಗತ್ತಿನಲ್ಲಿ ಸದ್ಯಕ್ಕೆ ೬೦೦೦ದಿಂದ ೭೦೦೦ ಭಾಷೆಗಳು ಬಳಕೆಯಲ್ಲಿವೆ. ಇವತ್ತಿಗೂ ದಾಖಲೆಯಲ್ಲಿ ಇಲ್ಲದ ಭಾಷೆಗಳನ್ನು ಮಾತನಾಡುವ ಹಲವಾರು ಜನಾಂಗಗಳಿವೆ. ಉದಾಹರಣೆಗೆ, ಬ್ರೆಜಿಲ್‌ನ ಮಟಿಕ್ಕೆಯರ್ ಸಮೂಹ ಮಾತನಾಡುವ ಭಾಷೆಯನ್ನು ತೀರಾ ಇತ್ತೀಚೆಗೆ ಗುರುತಿಸಲಾಯಿತು. ಹಲವಾರು ಭಾಷೆಗಳು ಮೂಲ ಭಾಷೆಗಳಿಂದ ಅಥವಾ ಮತ್ತೊಂದರಿಂದ ಕವಲೊಡೆದು ಬಂದಂತಹವೇ ಎನ್ನುವುದು ಸಹ ಇಂದಿಗೂ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಆದರೆ ಬಳಸಲ್ಪಡುತ್ತಿರುವ ಭಾಷೆಗಳಲ್ಲಿ ಅರ್ಧದಷ್ಟು ಭಾಷೆಗಳು ಈ ಶತಮಾನದ ಅಂತ್ಯದ ವೇಳೆಗೆ ನಶಿಸಿಹೋಗಲಿವೆ ಎಂದು ಭಾಷಾ ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಇದು ನಿಜಕ್ಕೂ ಆತಂಕಕಾರಿ. ನಮ್ಮದೇ ಭಾಷೆ ಕನ್ನಡವನ್ನು ಬಳಸುತ್ತಿರುವವರ ಸಂಖ್ಯೆ ಕೂಡ ಕಡಿಮೆಯಾಗುತ್ತಿದೆ ಎಂಬುದು ಸಹ ಅತ್ಯಂತ ಆತಂಕಕಾರಿ ವಿಚಾರವಾಗಿದೆ.

**ಮಾನವ ಮೊಟ್ಟಮೊದಲು ಮಾತನಾಡಿದ ಮಾತು**

ಅದು ಹೇಗಿತ್ತು? ಯಾವ ಭಾಷೆಯಲ್ಲಿತ್ತು ಎನ್ನುವುದು ಸಂಶೋಧಕರ ಊಹೆಗೂ ನಿಲುಕಲಾರದ ವಿಷಯವಾಗಿದ್ದು, ಅಂದಿನ ಆ ಅಲೆಮಾರಿ ಜನಾಂಗ ಮೊದಲು ಸಂಜ್ಞೆಗಳನ್ನು ಬಳಸಿ ಮಾತನಾಡಿದ್ದಕ್ಕೆ ಗುಹಾ ಚಿತ್ರಗಳು ಸಾಕ್ಷಿಯಾಗಿವೆ. ಕ್ರಮೇಣ ಶಬ್ದ ಹೊರಡಿಸುವ ಕಲೆ ಹಾಗೂ ಅದನ್ನು ಭಾಷೆಯಾಗಿಸುವ ಪ್ರಕ್ರಿಯೆ ನಡೆದಿರಬೇಕು. ಅದಕ್ಕೆ ಈಗಾಗಲೇ ಹೇಳಿದಂತೆ ಬಾಯಿಯ ಅಂಗರಚನಾ ವಿನ್ಯಾಸ ಕೂಡ ಸಹಯೋಗವನ್ನು ನೀಡಿದ್ದರಿಂದ ಸಾಧ್ಯವಾಗಿರಬಹುದು ಎನ್ನುವುದು ವಿಜ್ಞಾನಿಗಳ ಅಭಿಪ್ರಾಯ.

ಮಾವನಶಾಸ್ತ್ರ ಪರಿಣತ ಬೆಂಜಮಿನ್ ಲೀ ವ್ಹಾರ್ಫ್ ಹೋಪಿ ಇಂಡಿಯನ್ ಜನಾಂಗದ ಕುರಿತು ನಡೆಸಿದ ಅಧ್ಯಯನದ ಪ್ರಕಾರ ಒಂದು ಜನಾಂಗದ ಸಂಸ್ಕೃತಿ, ಭಾಷೆ ಹಾಗೂ ಆಲೋಚನೆಗಳ ನಡುವೆ ನಿಕಟ ಸಂಬಂಧವಿದೆ. 'ಬರಿಸಮಾ' ಜನಾಂಗ ಕಾಮನಬಿಲ್ಲಿನ ಬಣಗಳಿಗೆ ಬಳಸುವ ಹೆಸರುಗಳೂ ವಿಭನ್ನವಾಗಿದ್ದು ಇಂಗ್ಲಿಷ್ ನಲ್ಲಿರುವುದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿವೆ.

**ಎಲ್ಲರೂ ಒಂದೇ ಭಾಷೆಯನ್ನೇಕೆ ಮಾತನಾಡುವುದಿಲ್ಲ?**

ಮಾನವನ ವಿಕಾಸಕ್ಕೂ ಭಾಷೆಯ ಬೆಳವಣಿಗೆಗೂ ನಿಕಟವಾದ ಸಂಬಂಧವಿದೆ. ಜೈವಿಕವಾಗಿ ಹೇಗೆ ಮ್ಯುಟೇಷನ್ ಮತ್ತು ಹೊಂದಾಣಿಕೆಗಳು ಮಾನವನಲ್ಲಿ ಬದಲಾವಣೆಯನ್ನು ಉಂಟುಮಾಡಬಲ್ಲವೋ, ಹಾಗೆಯೇ ಗುಂಪೊಂದರ ಭೌಗೋಳಿಕ ಪ್ರತ್ಯೇಕತೆ ಅದರ 'ಜಿನೋಮ್'ಅನ್ನು ನಿರ್ಧರಿಸುತ್ತದೆಯೋ ಹಾಗೆಯೇ ಭಾಷೆಯೂ ಕೂಡ.

ಒಂದು ಗುಂಪು ಮತ್ತೊಂದರಿಂದ ಭೌಗೋಳಿಕವಾಗಿ ಬೇರೆಯಾದಾಗ ವಿಭಿನ್ನವಾಗುತ್ತಾ ಹೋಗಿ ಕೊನೆಗೊಮ್ಮೆ ಬೇರೆಯದೇ ಭಾಷೆಯಾಗಿ ಬೆಳವಣಿಗೆ ಹೊಂದುತ್ತದೆ. ಆದರೂ ಭಾಷೆ ಭಾಷೆಗಳ ನಡುವೆ ಸಂಬಂಧವಿದೆ. ಸಂಸ್ಕೃತದ ಪಿತೃ (ತಂದೆ), ಇಂಗ್ಲಿಷಿನ ಫಾದರ್ ಲ್ಯಾಟಿನ್ನಿನ 'ಪಾಟೆರ್... ಹಿಂದಿಯ ಪಿತಾ... ಹೀಗೆ.

ಜಾಗತೀಕರಣ ಪ್ರಕ್ರಿಯೆಯು ಭಾಷೆಗಳ ಬೆಳವಣಿಗೆಯ ಮೇಲೂ ತನ್ನ ಪರಿಣಾಮವನ್ನು ಬೀರಿದೆ. ಇದರಿಂದ ಭಾಷೆಗಳು ತಮ್ಮ ಪ್ರತ್ಯೇಕತೆಯನ್ನು ಕಳೆದುಕೊಳ್ಳುತ್ತ ಬಂದಿದ್ದು, ಇಂಗ್ಲಿಷ್ ಮುಂದೊಮ್ಮೆ ವಿಶ್ವ ಭಾಷೆಯಾಗುವ ಹಾದಿಯಲ್ಲಿ ದಾಪುಗಾಲು ಹಾಕುತ್ತಿದೆ. ಆದರೆ ನಿಜಕ್ಕೂ ಏನಾಗಲಿದೆ ಎನ್ನುವುದನ್ನು ಕಾಲವೇ ನಿರ್ಧರಿಸಬೇಕು.

ಸುಮಂಗಲಾ ಎಸ್. ಮುಮ್ಮಿಗಟ್ಟಿ
ಆಕಾಶವಾಣಿ, ರಾಜಭವನ ರಸ್ತೆ, ಬೆಂಗಳೂರು - ೫೬೦ ೨೦೪



# ಜಾನಪದ ಧರ್ಮ ಮತ್ತು ಜೀವನ ಮೌಲ್ಯಗಳು

**ಧ**ರ್ಮ ಅಂದಕೂಡಲೇ ನಮ್ಮೆದುರಿಗೆ ಶೈವ, ವೈಷ್ಣವ, ಜೈನ, ಇಸ್ಲಾಂ, ಕ್ರೈಸ್ತ ಮುಂತಾದವು ಗೋಚರಿಸುತ್ತವೆ. ಇವು ಶಿಷ್ಟ ಧರ್ಮಗಳು. ಇವುಗಳಿಗೆ ಹೊರತಾಗಿ ಜಾನಪದ ಧರ್ಮವೊಂದಿದೆ ಎಂಬ ಸತ್ಯವನ್ನು ನಾವು ಗಮನಿಸುವುದಿಲ್ಲ. ಈ ಜಾನಪದ ಧರ್ಮವೇ ಜನಸಮುದಾಯದ ಮೂಲ ಧರ್ಮ. ಅದು ಜನಜೀವನದಲ್ಲಿ ಹಾಸುಹೊಕ್ಕಾಗಿರುತ್ತದೆ. ಶಿಷ್ಟ ಧರ್ಮಗಳು ತಮ್ಮ ಪ್ರತಿಷ್ಠೆ- ಪ್ರಚಾರಗಳಿಗಾಗಿ ಜಾನಪದರನ್ನು ಆಶ್ರಮಿಸಿಕೊಳ್ಳುತ್ತವೆ. ಅವರ ಮುಗ್ಧ ವ್ಯಕ್ತಿತ್ವದ ಮೇಲೆ ತಮ್ಮ ಮತೀಯ ಮುದ್ರೆಯೊತ್ತಿ ಸಂಭ್ರಮಿಸುತ್ತವೆ. ಶಿಷ್ಟ ಧರ್ಮದ ಮುದ್ರೆ ಬಹಿರಂಗದ ಲಾಂಛನವಾಗಿದ್ದು, ಮೂಲ ಜಾನಪದ ಧರ್ಮ ಅವರ ಬದುಕಿನಲ್ಲಿ ಅಂತಸ್ಥವಾಗಿರುತ್ತದೆ. ಧರ್ಮವನ್ನು ಕುರಿತು ಜಾನಪದರ ವ್ಯಾಖ್ಯಾನ ಭಿನ್ನವಾದುದು. ಅವರಿಗೆ ಬದುಕು ಮುಖ್ಯ. ಆ ಬದುಕು ಹೇಗಿರಬೇಕೆಂದು ನಿರ್ಧರಿಸುತ್ತಾರೆ. ಅದಕ್ಕೆ ಚೆಲುವನ್ನು ನೀಡುವುದು, ಪೂರಕವಾಗಿರುವುದು ಧರ್ಮ. ಜಾನಪದರಿಗೆ ಖಚಿತ ಜೀವನ ದೃಷ್ಟಿಯಿದೆ. ಅದು ವಾಸ್ತವದ ನೆಲೆಯಲ್ಲಿ ಅರಳುವ ಸುಂದರ ಆದರ್ಶ. ಆ ಆದರ್ಶವನ್ನು ಬದುಕುವುದೇ ಜಾನಪದರಿಗೆ ಧರ್ಮವೆನಿಸುತ್ತದೆ. ಬದುಕಿನ ಅಂತಿಮ ಗುರಿ ಯಾವುದು ?

*ಮಂದಿ ಮಕ್ಕಳೊಳಗ ಚೆಂದಾಗಿ ಇರಬೇಕ*
*ನಂದೀಯ ಶಿವನ ದಯದಿಂದ । ಹೋಗ್ವಾಗ*
*ಮಂದಿ ಬಾಯಾಗ ಇರಬೇಕ.*

– ಇದು ಜಾನಪದರು ಕಂಡುಕೊಂಡ ಮೌಲ್ಯ.

ಜಾನಪದರು ನೈತಿಕತೆಯನ್ನು ಧರ್ಮವೆಂದು ಕರೆದಿದ್ದಾರೆ. ಅವರ ದೃಷ್ಟಿಯಲ್ಲಿ ನೈತಿಕತೆಯೇ ಅತ್ಯಂತ ಪ್ರಧಾನವಾದುದು. ಬದುಕನ್ನು ನಿಯಂತ್ರಿಸುವ ಕೇಂದ್ರ ಶಕ್ತಿಯದು. 'ಜಾತಿ ತಪ್ಪಿದರೂ ನೀತಿ ತಪ್ಪಬಾರದು' ಎಂಬ ಗಾದೆ ಮಾತು ಅವರ ನೈತಿಕ ನಿಷ್ಠೆಯನ್ನು ತಿಳಿಸುತ್ತದೆ. ಜಾತಿ ವ್ಯವಸ್ಥೆ ನಿಷ್ಠುರವಾಗಿದ್ದ ಜಾನಪದ ಪರಿಸರದಲ್ಲಿ 'ಇಂಥ ಗಾದೆ ಮಾತು ಮೂಡಿಬಂದಿರುವುದು ಗಮನಾರ್ಹವಾಗಿದೆ. ಹೊಸಪೇಟೆಯ ಸಮೀಪದ ಡಣಾಪುರ ಎಂಬ ಹಳ್ಳಿಗೆ ನಾನೊಮ್ಮೆ ಹೋಗಿದ್ದೆ. ಅಲ್ಲಿ ಫಕುರಸಾಬ್ ಎಂಬ ಹಾಡುಗಾರನನ್ನು ಭೆಟ್ಟಿಯಾದೆ. ಅವನು ಎಮ್ಮೆಗಳನ್ನು ಸಾಕಿಕೊಂಡು ಹೈನ ಮಾರಿ ಜೀವನ ಸಾಗಿಸುತ್ತಿದ್ದ. ಫಕುರಸಾಬ್ ಹಾಲು ಮಾರುತ್ತಿರಲಿಲ್ಲ, ಕೇವಲ ಮೊಸರು ಮಾರುತ್ತಿದ್ದ. ಹೀಗೇಕೆಂದು ಕೇಳಿದೆ. ಅವನು ಹೇಳಿದ : ''ಹಾಲ ಮಾರುವಾಗ ಅದರಲ್ಲಿ ನೀರ ಸೇರಸ್ತೀವಿ. ಹಿಂಗ ನೀರ ಸೇರಸೋದು ಧರ್ಮ ಅಲ್ಲ ನೋಡ್ರಿ. ಮೊಸರಿನ್ಯಾಗ ನೀರ ಸೇರಿಸಾಕ ಬರೂದಿಲ್ಲ, ನಾವು ಎಂಥಾ ಹಾಲ ಕೊಟ್ಟರೂ ಮಂದಿಗೆ ನೀರ ಹಾಕಿರಬಹುದೆಂಬ ಸಂಶಯ ಇದ್ದೇ ಇರತದ. ಅದಕ್ಕs ನಾನು ಹಾಲು ಮಾರುವುದಿಲ್ಲ'' ಫಕುರಸಾಬನ ಧರ್ಮದ ಕಲ್ಪನೆಯಿದು. ಅವನಂತೆ ನೀತಿ ಮತ್ತು ಪ್ರಾಮಾಣಿಕತೆಗಳನ್ನೇ ಧರ್ಮವೆಂದು ಬಹುಸಂಖ್ಯಾತ ಜಾನಪದರು ನಂಬಿದ್ದಾರೆ.

ಧರ್ಮವೆಂದರೆ ಅಲ್ಲಿ ದೇವರು ಇರಲೇಬೇಕಲ್ಲವೆ ? ಶಿಷ್ಟರ ದೇವರ ಕಲ್ಪನೆಗೂ ಜಾನಪದರ ದೇವರ ಕಲ್ಪನೆಗೂ ಬಹಳ ವ್ಯತ್ಯಾಸವಿದೆ. ಶಿಷ್ಟರ ದೇವರುಗಳು ಪವಾಡಗಳ ಸಂತೆಯಲ್ಲಿ ಮುಳುಗಿರುವ ಒಂದು ಅಂತಸ್ತನ್ನು ರೂಢಿಸಿಕೊಂಡಿರುವ ಕೃತಕ ಗಾಂಭೀರ್ಯ ಪರಿಸರ ನಿರ್ಮಿಸಿರುವ ಅವತಾರಿಗಳು. ಅಲ್ಲಿ ಆರಾಧ್ಯ-ಆರಾಧಕರಲ್ಲಿ ಮೇಲು ಕೀಳು ಎಂಬ ಭಾವ ನೆಲೆಗೊಂಡಿರುತ್ತದೆ. ಜಾನಪದ ದೇವರುಗಳೂ ಶಿಷ್ಟಕ್ಕೆ ತದ್ವಿರುದ್ಧ ವಾಗಿರುತ್ತವೆ. ಜಾನಪದರು ತಮ್ಮ ದೇವರುಗಳನ್ನು ದೂರದಲ್ಲಿ ಎತ್ತರದಲ್ಲಿ ಇಟ್ಟು ನೋಡುವುದಿಲ್ಲ, ಅವರು ತಮ್ಮ ದೇವರುಗಳನ್ನು ತಮ್ಮ ಆತ್ಮೀಯ ಒಡನಾಡಿಗಳೆಂದು ಭಾವಿಸುತ್ತಾರೆ. ಅವರ ದೇವರುಗಳು ಅವರು ಹೇಳಿದಂತೆ ಕೇಳುವ ಪ್ರೀತಿಯ ವ್ಯಕ್ತಿಗಳು. ಶಿಷ್ಟದೇವರಿಗೆ ಆಯಾ ಧರ್ಮದ ಭಕ್ತರಿರುತ್ತಾರೆ. ಜಾನಪದ ದೇವರಿಗೆ ಊರವರೆಲ್ಲರೂ ಭಕ್ತರು. ಆದ್ದರಿಂದ ಈ ದೇವರುಗಳನ್ನು ಗ್ರಾಮದೇವತೆಗಳೆಂದು ಕರೆಯುತ್ತಾರೆ.

*ಮಂಗಳವಾರ ದಿವಸ ಮಂದುಳ್ಳ ಮಜ್ಜಿಗಿ*
*ಬಂದುಂಡ ಹೋಗ ಗಾಮದವ್ವ । ನನಮನಿಯ*
*ಹಿಂಡೇಮ್ಯಾಗ ಬಂದ ಸುಳದ್ಹೋಗ*

ದೇವರಿದ್ದಲ್ಲಿಗೆ ನೈವೇದ್ಯ ಒಯ್ಯುವುದು ರೂಢಿ. ಆದರೆ ಇಲ್ಲಿ ದೇವರನ್ನೇ ಮನೆಗೆ ಸಲುಗೆಯಿಂದ, ಪ್ರೀತಿಯಿಂದ ಆಹ್ವಾನಿಸಲಾಗಿದೆ. ಜಾನಪದರ ದೇವರೆಂದರೆ ಬಡವರ ದೇವರು. ಶಿಷ್ಟದೇವರಂತೆ ವ್ಯವಸ್ಥಿತ ಸೇವೆ, ಉಪಚಾರ, ಶಿಷ್ಟಾಚಾರ ಇವುಗಳನ್ನು ಅಪೇಕ್ಷಿಸುವುದಿಲ್ಲ. ಎಲ್ಲಿ ಗಾಢವಾದ ಪ್ರೀತಿ, ಆತ್ಮೀಯತೆಗಳಿರುತ್ತವೆಯೋ ಅಲ್ಲಿ ಶಿಷ್ಟಾಚಾರಕ್ಕೆ ಆಸ್ಪದವಿರುವುದಿಲ್ಲ.

*ಸಾರಿಸಿದ ಮನಿಯಾಗ ಸೆರಗ್ಹಾಸಿಮಲಗ್ಯಾಳ*
*ಚಂದ್ರಾಮನ ತಂಗಿ ಸರಸೋತಿ । ನೆನದಾರ*
*ಬಾರದ ಪದಗಳು ಬಂದಾವ*

ಮನೆಗೆ ಬಂದ ಸರಸ್ವತಿಗೆ ಹಾಸಿಕೊಳ್ಳಲು ಏನನ್ನೂ ಕೊಡಲು ಸಾಧ್ಯವಾಗಿಲ್ಲ. ಅವಳು ತನ್ನ ಸೆರಗನ್ನೇ ಹಾಸಿಕೊಂಡು ನಿರಾಳವಾಗಿ ಮಲಗಿಕೊಂಡಿದ್ದಾಳೆ. ಶಿಷ್ಟಾಚಾರ ಬಯಸದ ನಿರ್ವ್ಯಾಜ ಪ್ರೀತಿ ಅವಳದು.

ಜಾನಪದವೆಂಬುದು ಒಂದು ಜನಸಮೂಹ. ಜಾತಿಯ ಕಟ್ಟಳೆ – ಇದ್ದರೂ ಅದು ಮೇಲ್ಪದರಿನ ರಚನೆ. ಅಂತರಂಗದಲ್ಲಿ ಪರಸ್ಪರರು ಏಕಭಾವದಲ್ಲಿರುತ್ತಾರೆ. ಹಾಗೇ ಜಾನಪದರ ದೇವರುಗಳೂ ಸಮಾನ ಪ್ರೀತಿ-ಗೌರವಗಳಿಗೆ ಪಾತ್ರವಾಗಿರುತ್ತವೆ. ಜಾತ್ಯತೀತ ವಾಗಿರುತ್ತವೆ. ಹುಬ್ಬಳ್ಳಿ ಸಮೀಪದ ಯಮನೂರು ಒಬ್ಬ ಸೂಫಿ ಸಂತನ ಕ್ಷೇತ್ರ. ಅವನನ್ನು ಮುಸ್ಲಿಮರು ಪೀರನೆಂದೂ ಹಿಂದುಗಳು ಚಾಂಗದೇವನೆಂದೂ ಪೂಜಿಸುತ್ತಾರೆ. ಅವನು ಇಡೀ ಜನಸಮುದಾಯದ ಆರಾಧ್ಯ ದೈವ. ಅವನ ಜಾತ್ರೆಗೆ ಎಲ್ಲ ಜನರೂ ಸೇರುತ್ತಾರೆ. ಅವನನ್ನು ಕುರಿತು ಎಲ್ಲರೂ ಹಾಡುತ್ತಾರೆ. ಒಂದು ಹಾಡಿನ ಕೊನೆಯಲ್ಲಿ ಪೀರನನ್ನು :

*ಹಾರೂರಿಗೆ ಹಾರೂವನಾದೆ ತುರಕರಿಗೆ ಪೀರನಾದೆ*
*ರಾಜ್ಯದ ಮಕ್ಕಳಿಗೆ ಶಿವನಾದೆ ಪೀರಾ ದೇವದೇವ*

– ಎಂದು ಬಣ್ಣಿಸಲಾಗಿದೆ.

ಶಿಷ್ಟಧರ್ಮಗಳು ಏಕದೇವೋಪಾಸನೆಯನ್ನು ಬೋಧಿಸುತ್ತವೆ. ಏಕದೇವೋಪಾಸನೆ ತನ್ನ ಆರಾಧ್ಯ ದೈವದ ಶ್ರೇಷ್ಠತೆಯನ್ನು ಪ್ರತಿಪಾದಿಸುತ್ತದೆ, ಅನ್ಯ ದೈವಗಳನ್ನು ನಿರಾಕರಿಸುತ್ತದೆ. ಈ ನಿರಾಕರಣೆ ತಿರಸ್ಕಾರಕ್ಕೆ ಹೊರಳುತ್ತದೆ. ನಂತರದ ಬೆಳವಣಿಗೆಯೆಂದರೆ ಪರಸ್ಪರ ಧಾರ್ಮಿಕ ಸಂಘರ್ಷಗಳು. ಜಾನಪದರು ಬಹುದೇವೋಪಾಸಕರು. ದೇವರುಗಳ ವಿಷಯದಲ್ಲಿ ಅವರಲ್ಲಿ ಭಿನ್ನಭೇದವಿಲ್ಲ. ಎಲ್ಲ ದೇವರೂ ಒಂದೇ. ತಮಗೆ ನೆರವು ನೀಡುವ, ಅನ್ನ ನೀಡುವ, ಆಶ್ರಯ ನೀಡುವ ವ್ಯಕ್ತಿ, ವಸ್ತು, ಪ್ರಾಣಿಗಳೆಲ್ಲ ಅವರಿಗೆ ದೇವರುಗಳೇ. ಶಿಷ್ಟರು ಕ್ಷುದ್ರದೇವರೆಂದು ಹಿಯಾಳಿಸುವ ದೇವರುಗಳನ್ನು ಜಾನಪದರು ನಿಸ್ಸಂಕೋಚವಾಗಿ ಗೌರವದಿಂದ ಪೂಜಿಸುತ್ತಾರೆ.

ಜಾನಪದರು ಮಾನವೀಯ ನೆಲೆಯಲ್ಲಿ ಧರ್ಮವನ್ನು ಅಂದರೆ ನೀತಿಯನ್ನು ಅರ್ಥೈಸುತ್ತಾರೆ. ಶಿಷ್ಟರಂಥ ಕೃತಕ ನೈತಿಕ ನಡವಳಿಕೆ ಅವರದಲ್ಲ. ಒಂದು ಜನಪದ ಹಾಡಿನಲ್ಲಿ ರಾಮ, ಲಕ್ಷ್ಮಣ, ಸೀತೆಯರು ಬಿರುಬಿಸಿಲಲ್ಲಿ ನಡೆದುಕೊಂಡು ಹೋಗುತ್ತಿರುತ್ತಾರೆ. ಸೀತೆಯ ಕಾಲಲ್ಲಿ ಪಾದರಕ್ಷೆಗಳಿಲ್ಲ. ಬಿಸಲಲ್ಲಿ ನಡೆದೂ ನಡೆದೂ ಅವಳ ಅಂಗಾಲುಗಳಿಗೆ ಬೊಬ್ಬೆಗಳು (ಗುಳ್ಳೆ) ಏಳುತ್ತವೆ. ಅವಳ ಯಾತನೆಯನ್ನು ನೋಡಿ ದುಃಖಿತನಾದ ಲಕ್ಷ್ಮಣ, ''ಅತ್ತಿಗೆಮ್ಮಾ, ನನ್ನ ಹೆಗಲ ಮೇಲೆ ಕೂಡ್ರು ಬಾ'' ಎಂದು ಆಹ್ವಾನಿಸುತ್ತಾನೆ. ಇವನು ಜಾನಪದರ ಲಕ್ಷ್ಮಣ. ಶಿಷ್ಟರ ಲಕ್ಷ್ಮಣ, ''ನಾನು ಅತ್ತಿಗೆಯ ಪಾದಗಳನ್ನಷ್ಟೇ ನೋಡಿದ್ದೇನೆ. ಆದ್ದರಿಂದ ಅವಳ ಪಾದಗಳ ಆಭರಣ ಮಾತ್ರ ಗುರುತಿಸಬಲ್ಲೆ'' ಎಂದು ಹೇಳುವ ಕೃತಕ ಪುರುಷ ಧರ್ಮದ ಪ್ರತೀಕನಾಗಿದ್ದಾನೆ. ಜಾನಪದ ಲಕ್ಷ್ಮಣ ಸಹಜ ನಡವಳಿಕೆಯ ಮಾನವೀಯ ಮೂರ್ತಿಯಾಗಿದ್ದಾನೆ.

ಪ್ರಾಮಾಣಿಕ ದುಡಿಮೆ, ಪರೋಪಕಾರ, ಸಹನೆ, ಕರ್ತವ್ಯಪ್ರಜ್ಞೆ, ಸ್ವಾಭಿಮಾನ ಮೊದಲಾದ ಮೌಲ್ಯಗಳನ್ನು ಜಾನಪದರು ರೂಢಿಸಿಕೊಂಡಿದ್ದಾರೆ. 'ಆಳಾಗಿ ದುಡಿ ಅರಸಾಗಿ ಉಣ್ಣು', 'ಕಲ್ಲಿಂದ ಒಗೆದವರಿಗೆ ಬೆಲ್ಲದಿಂದ ಒಗೆಯಬೇಕು', 'ಬೇಡದವರು ಬೇವಿನಮರ ಬೈಸಿಕೊಂಡವರು ಮಾವಿನಮರ' ಪ್ರಾಣ ಬಿಟ್ಟರೂ ಮಾನಾ ಬಿಡಬಾರದು', ಮೊದಲಾದ ಗಾದೆ ಮಾತುಗಳು ಜಾನಪದರ ಜೀವನ ಮೌಲ್ಯಗಳಿಗೆ ಸಾಕ್ಷಿಯಾಗಿವೆ.

ಮಾನವೀಯತೆ ಮತ್ತು ನೈತಿಕತೆಗಳ ನೆಲೆಗಟ್ಟಿನ ಮೇಲೆ ರೂಪುಗೊಂಡಿರುವ ಜಾನಪದ ಧರ್ಮದಲ್ಲಿ ಸಶಕ್ತವಾದ ಜೀವನ ಮೌಲ್ಯಗಳು ಅಂತರ್ಗತವಾಗಿವೆ.

**ಡಾ॥ ಬಸವರಾಜ ಮಲಶೆಟ್ಟಿ**
'ನಿನಾದ' ೨ನೇ ಮುಖ್ಯರಸ್ತೆ, ಬಸವೇಶ್ವರ ಬಡಾವಣೆ, ಹೊಸಪೇಟೆ - ೫೮೩ ೨೦೧

# ಕನ್ನಡದಲ್ಲಿ ವಿಜ್ಞಾನ ಭಾಷಾ ಬೆಳವಣಿಗೆಗೆ ನವಕರ್ನಾಟಕ ಪ್ರಕಾಶನದ ಅಮೂಲ್ಯ ಕೊಡುಗೆ

## ಮೇ 2011 ರಲ್ಲಿ ಲೋಕಾರ್ಪಣೆ




ನವಕರ್ನಾಟಕ

## ವಿಜ್ಞಾನ - ತಂತ್ರಜ್ಞಾನ ಪದಸಂಪದ

(15,000 ವಿಜ್ಞಾನ ಪದಗಳ ಸಂಚಯ)
ಸುಮಾರು 1000 ಪುಟಗಳು ಆಕಾರ ಕ್ರೌನ್ 1/4

ಸಂಪಾದಕರು

ಕೆ. ಎಲ್. ಗೋಪಾಲಕೃಷ್ಣರಾವ್
ಟಿ. ಆರ್. ಅನಂತರಾಮು
ಸಿ. ಆರ್. ಕೃಷ್ಣರಾವ್

ಮುಖ ಬೆಲೆ
₹ 600

ಪ್ರಕಟಣಾಪೂರ್ವ ಬೆಲೆ
₹ 450

ಇಂದೇ ಪಾವತಿಸಿ ₹150 ಲಾಭ ಗಳಿಸಿ




ವಿವರಗಳಿಗೆ ಸಂಪರ್ಕಿಸಿ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001.
ದೂರವಾಣಿ : 30578022, 22203580. ಫ್ಯಾಕ್ಸ್ : 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

